# ಗೌಡ ಕನ್ನಡದ ಜನಪದ ಕತೆಗಳು

## ವರ್ಗ ಮತ್ತು ಆಶಯ ಸೂಚಿ

ವಿಶ್ವನಾಥ ಬದಿಕಾನ



ಮದಿಪು ಪ್ರಕಾಶನ
ಮಂಗಳಗಂಗೋತ್ರಿ–೫೭೪ ೧೯೯ (ದ.ಕ.)

GOWDA KANNADADA JANAPADA KATEGALU
Varga mattu Ashaya Soochi

M.Phil. Desertation Work by : Vishwanatha Badikana,
Reaserch Student, Kannada University, Hampi-583 211

Published by : Madipu Prakashana, Mangalagangotri-574 199

Printed Pages : Dm. $\frac{1}{8}$ 16 + 180 = 196 Price : Rs. 55-00



ಪ್ರಥಮ ಮುದ್ರಣ : ೧೯೯೪, ೧೦೦೦ ಪ್ರತಿಗಳು

ಬೆಲೆ : ರೂ. ೫೫-೦೦

ಮುಖಪುಟ : ಶ್ರೀ ಮಕಾಳಿ ಕೆ.

ಮುದ್ರಣ :
ಪ್ರಭು ಪ್ರಿಂಟಿಂಗ ಪ್ರೆಸ್,
ಜ. ತೋಂಟದಾರ್ಯ ಮಠದ ಹತ್ತಿರ, ಗದಗ-೫೮೨ ೧೦೧
✆ ೮೧೮೧

## ಮುನ್ನುಡಿ

ನನ್ನ ವಿದ್ಯಾರ್ಥಿಸ್ನೇಹಿತರಾಗಿರುವ ಶ್ರೀ ವಿಶ್ವನಾಥ ಬದಿಕಾನ ಅವರ 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಗ್ರಂಥಕ್ಕೆ ಮೆಚ್ಚುಗೆ ವ್ಯಕ್ತಪಡಿಸಿ ನಾಲ್ಕು ಮಾತುಗಳನ್ನು ಮುನ್ನುಡಿಯ ರೂಪದಲ್ಲಿ ಬರೆಯಲು ಸಂತೋಷ ಪಡುತ್ತೇನೆ.

ಈ ಕೃತಿ ಎಂ.ಫಿಲ್. ಪದವಿಯ ಆಂಶಿಕ ಆವಶ್ಯಕತೆಗಾಗಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪೌಢಪ್ರಬಂಧವಾಗಿದೆ. ಈ ಬಗೆಯ ಪ್ರೌಢ ಪ್ರಬಂಧವನ್ನು ಬರೆಯುವಾಗ ಸಂಶೋಧಕನು ಸಂಶೋಧನೆಯ ವಿಧಿವಿಧಾನಗಳನ್ನು ನಿರ್ದಿಷ್ಟವಾಗಿ ಪಾಲಿಸಬೇಕಾಗುತ್ತದೆ. ವಿಶ್ವನಾಥ ಬದಿಕಾನರು ಅಂತಹ ನಿಯಮ ಗಳನ್ನು ಪಾಲಿಸಿದ್ದಾರೆ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಖಚಿತ ಪಡಿಸಿಕೊಂಡಿದ್ದಾರೆ. ಮಾಹಿತಿ ಸಂಗ್ರಹದ ವಿಧಾನದ ಕುರಿತಂತೆ ಸರಿಯಾದ ತಿಳುವಳಿಕೆ ಯನ್ನು ಇಟ್ಟುಕೊಂಡಿದ್ದಾರೆ. ಜನಪದ ಕಥೆಗಳ ವರ್ಗ ಮತ್ತು ಆಶಯಸೂಚಿ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನದ ಸಮೀಕ್ಷೆ ಸ್ಥೂಲವಾಗಿ ಮಾಡಿದ್ದಾರೆ. ತಾನು ಬರೆಯಲು ಉದ್ದೇಶಿಸಿರುವ ಪ್ರಬಂಧದ ಉದ್ದೇಶಗಳನ್ನು ಸೂಚಿಸಿದ್ದಾರೆ. ಪ್ರಬಂಧ ದಲ್ಲಿ ಬಳಸುವ ಪರಿಕಲ್ಪನೆಗಳನ್ನು ನಿಖರವಾಗಿ ನಿರೂಪಿಸಿಕೊಂಡಿದ್ದಾರೆ. ತಾನು ವಿಶ್ಲೇಷಿಸಬೇಕಾಗಿರುವ ಮಾಹಿತಿಶರೀರದ ಸ್ವರೂಪವನ್ನು ತಿಳಿದುಕೊಂಡಿದ್ದಾರೆ. ಸಂಕೇತಸೂಚಿ, ಅಡಿಟಿಪ್ಪಣಿಗಳನ್ನು ಕ್ರಮಬದ್ಧವಾಗಿ ನೀಡಿದ್ದಾರೆ. ಉಪಯುಕ್ತವಾದ ಅನುಬಂಧವನ್ನು ಸೇರಿಸಿದ್ದಾರೆ. ಅಧ್ಯಯನಕ್ಕೆ ಸಂಬಂಧಪಟ್ಟ ಗ್ರಂಥಸೂಚಿಯನ್ನು ತಯಾರಿಸಿ ನೀಡಿದ್ದಾರೆ. ಸಂಶೋಧನೆಯ ವಿಧಿವಿಧಾನಗಳೆಂದು ಪರಿಗಣಿತವಾಗಿರುವ ಈ ಅಂಶಗಳು 'ಶಾಸ್ತ್ರ'ಗಳಂತೆ ಕಂಡರೂ ಸಂಶೋಧನಾತ್ಮಕ ಬರವಣಿಗೆಗೆ ಅಗತ್ಯ ವಾದ ಒಂದು ಚೌಕಟ್ಟನ್ನು ಒದಗಿಸಿಕೊಟ್ಟಿವೆ.

ಜನಪದ ಕಥೆಗಳ ವರ್ಗ ಮತ್ತು ಆಶಯಸೂಚಿಯನ್ನು ತಯಾರಿಸುವ ಈ ಬಗೆಯ ಕೆಲಸಕ್ಕೆ ಅಗತ್ಯವಾಗಿರುವ ಶಿಸ್ತು ಮತ್ತು ತಾಳ್ಮೆಯನ್ನು ಬದಿಕಾನರು ಪ್ರದರ್ಶಿಸಿದ್ದಾರೆ. ಒಂದು ಬಗೆಯ ಸಂಯಮವನ್ನು ವಿಷಯವೇ ಅವರಿಗೆ ಕಲಿಸಿದೆ. ಸಂಶೋಧನೆಯಲ್ಲಿ ಸಂಯಮದ ಬರವಣಿಗೆಗೆ ತುಂಬ ಮಹತ್ವವಿದೆ ಎಂದು ನಾನು ನಂಬಿದ್ದೇನೆ. ಕಥೆಗಳ ವರ್ಗ ಮತ್ತು ಆಶಯ ಸೂಚಿಯನ್ನು ತಯಾರಿಸುವಾಗ ಮುಖ್ಯ ವಾಗಿ ಕಥೆಗಳನ್ನು ವರ್ಗೀಕರಿಸಿ ಮತ್ತು ಪ್ರತಿಯೊಂದು ಕಥೆಯನ್ನು ಒಡೆದು ಚೂರಾಗಿಸಿ

ಕನಿಷ್ಠತಮ ಘಟಕಗಳನ್ನು ಗುರುತಿಸಿ ಆಶಯಗಳ ಪಟ್ಟಿಮಾಡುವ ಕೆಲಸವು ಕಥೆಗಳನ್ನು ಅರ್ಥೈಸುವಷ್ಟು. ಅವುಗಳ ಬಳಕೆ ಮತ್ತು ಕಾರ್ಯವನ್ನು ಶೋಧಿಸುವಷ್ಟು ಆಸಕ್ತಿಯ ವಿಷಯವಲ್ಲ. ಕಥೆಗಳನ್ನು 'ಬದುಕುವ' ಅವುಗಳ ಅಧಿಕೃತ ಒಡೆಯರು ತಮ್ಮ 'ಸಾಂಸ್ಕೃತಿಕ ಆಸ್ತಿ' ಮತ್ತು 'ಪರಂಪರಾಗತ ಬಂಡವಾಳ'ದ ಕುರಿತಂತೆ ತಿಳಿಸುವ ಮಾಹಿತಿಗಳನ್ನು ಕಲೆಹಾಕಿ ಚರ್ಚಿಸುವ ಅನುಭವ ರೋಚಕ ಅನ್ನಿಸಬಹುದು. ಕಥೆ ಹೇಳುವವರ ಜೊತೆಗೆ ನಡೆಸುವ 'ಸಂವಾದ'ಕ್ಕೆ ವರ್ಗ ಮತ್ತು ಆಶಯ ಸೂಚಿಯ ತಿಳುವಳಿಕೆಯೂ ಅಗತ್ಯವೇ. ಬದಿಕಾನರ ಸಂಶೋಧನ ಬದುಕು ಹೀಗೆ ಕ್ಲಿಷ್ಟ ಮತ್ತು ಸಾವಧಾನದ ವಿಧಾನವೊಂದರಿಂದ ಆರಂಭವಾಗಿದೆ. ಇದರಲ್ಲಿ ಅವರು ಯಶಸ್ವಿಯಾಗಿರುವುದರಿಂದ ಮತ್ತು ಇಂತಹ ಪ್ರಾರಂಭವು ಸಂಶೋಧನೆಗೆ ಅಗತ್ಯವಿರುವ ತಾಳ್ಮೆ, ಶ್ರಮ ಮತ್ತು ಪ್ರಾಮಾಣಿಕತೆಯನ್ನು ಅವರಿಗೆ ಕಲಿಸಿರುವುದರಿಂದ ಮುಂಬರುವ ಅಧ್ಯಯನಗಳಲ್ಲಿ ಅವರು ಮಿಂಚಬಲ್ಲರೆಂದು ನನಗನ್ನಿಸುತ್ತದೆ.

ಗೌಡ ಕನ್ನಡದಲ್ಲಿ ಜನಪದ ಕಥೆಗಳು ಇವೆಯೇ ಎಂಬ ಬಗ್ಗೆ ಖಚಿತವಾದ ಅಭಿಪ್ರಾಯಗಳಿರಲಿಲ್ಲ ಎಂದು ಬದಿಕಾನರು ಹೇಳಿಕೊಂಡಿದ್ದಾರೆ. ಆಮೇಲೆ ಸಮೀಕ್ಷೆ ನಡೆಸಿ ಸುಳ್ಯ ಪರಿಸರದ ಒಟ್ಟು ಹದಿಮೂರು ಗ್ರಾಮಗಳಿಂದ ನೂರು ಕಥೆಗಳನ್ನು ಸಂಗ್ರಹಿಸಿ ಅವುಗಳ ವರ್ಗ ಮತ್ತು ಆಶಯ ಸೂಚಿಯನ್ನು ತಯಾರಿಸಿದ್ದಾರೆ. ಜನಪದ ಕಥೆಗಳ ಅಪಾರ ಲಭ್ಯತೆಗೆ ಸಂಬಂಧಪಟ್ಟಂತೆ ನನ್ನ ಅನುಭವವನ್ನು ಇಲ್ಲಿ ಹಂಚಿಕೊಳ್ಳುತ್ತೇನೆ. ಡಾ. ಬಿಳಿಮಲೆಯವರು ಮತ್ತು ನಾನು ಒಟ್ಟಾಗಿ ತುಳು ಜನಪದ ಕಥೆಗಳ ಸಂಗ್ರಹಕ್ಕೆ ಸಂಬಂಧಪಟ್ಟಂತೆ ಯೋಜನೆಯೊಂದನ್ನು ತಯಾರಿಸಿ ಉಡುಪಿಯ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರಕ್ಕೆ ಎರಡು ವರ್ಷಗಳ ಹಿಂದೆ ಸಲ್ಲಿಸಿದ್ದೆವು. ಅನುಕೂಲಕ್ಕಾಗಿ ದ. ಕ. ಜಿಲ್ಲೆಯ ನಾಲ್ಕು ತಾಲೂಕುಗಳನ್ನು ಕ್ಷೇತ್ರಕಾರ್ಯಕ್ಕಾಗಿ ನಾನು ಇಟ್ಟುಕೊಂಡೆ. ನಾಲ್ಕು ತಾಲೂಕುಗಳನ್ನು ಬಿಳಿಮಲೆಯವರು ತೆಗೆದುಕೊಂಡರು. ಪ್ರಸ್ತುತ ನನ್ನ ಭಾಗದ ಕೆಲಸ ಮತ್ತು ಅನುಭವವನ್ನು ಮಾತ್ರ ಹೇಳುತ್ತೇನೆ.

ಸಂಶೋಧನ ಸಹಾಯಕರಾಗಿ ಶ್ರೀ ರಂಜಿತ್‌ಕುಮಾರ್ ಎಂಬವರನ್ನು ನಾನು ನೇಮಕ ಮಾಡಿಕೊಂಡೆ. ಬದಿಕಾನರು ಅಂದಾಜು ಮಾಡಿದಂತೆ ಒಂದಷ್ಟು ಸಂಖ್ಯೆಯ ಕಥೆಗಳನ್ನು ಸಂಗ್ರಹಿಸಬಹುದೆಂದು ನಾನು ಕೂಡಾ ಲೆಕ್ಕಹಾಕಿದ್ದೆ. ಕ್ಷೇತ್ರಕಾರ್ಯ ಮಾಡಿ ಕಥೆಗಳನ್ನು ಸಂಗ್ರಹಿಸಲು ತೊಡಗಿದ ನಮ್ಮ ಅಂದಾಜು ಲೆಕ್ಕ ಈಗ ತಲೆಕೆಳಗಾಗಿದೆ. ಕುತೂಹಲಕ್ಕಾಗಿ ಕೆಲವು ಅಂಕಿಅಂಶಗಳನ್ನು ಕೊಡುತ್ತೇನೆ. ಕಥೆಗಳ ವೈವಿಧ್ಯ, ವಿಸ್ತಾರ, ಸಾಂದರ್ಭಿಕ ಮಾಹಿತಿಗಳನ್ನು ಇಲ್ಲಿ ನಾನು ಪ್ರಸ್ತಾಪಿಸುವುದಿಲ್ಲ.

ಒಟ್ಟು ೮೨೬ ಕಥೆಗಳನ್ನು ಸಂಗ್ರಹಿಸಲಾಗಿದೆ. ಬಿಳಿಮಲೆಯವರ ಸಂಗ್ರಹ ಇನ್ನೂ ಹೆಚ್ಚಿದೆ. ಬೆಳ್ತಂಗಡಿ ತಾಲೂಕಿನಿಂದ ಸಂಗ್ರಹ ಮಾಡಿದ ಕಥೆಗಳು ೭೩೦.

ಬೆಳ್ತಂಗಡಿ ತಾಲೂಕಿನ ಅಂಡಿಂಜೆ, ಗೇರುಕಟ್ಟೆ, ಕಳಿಯ, ಕಲ್ಲೇರಿ, ಕರಾಯ, ಕರಿಮಣೇಲು, ಕೊಕ್ರಾಡಿ, ಕುಂಡದಬೆಟ್ಟು, ಮೂಡುಕೋಡಿ, ನಾವ್ರರ, ನೆರಿಯ, ಶಿಶಿಲ – ಹೀಗೆ ಕೆಲವೇ ಗ್ರಾಮ/ಪರಿಸರಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಕೆಲವೇ ಮಂದಿ ಕಥೆ ಹೇಳುವವರನ್ನು ಸಂಪರ್ಕಿಸಿದ್ದೇವೆ. ಅಂಡಿಂಜೆ ಗ್ರಾಮದಿಂದ ೨೬೫, ಗೇರುಕಟ್ಟೆ, ಕಲ್ಲೇರಿ, ಕರಾಯ ಪರಿಸರದಿಂದ ೨೮, ಕರಿಮಣೇಲು ೪೧, ಕೊಕ್ರಾಡಿ ೪೯, ಮೂಡುಕೋಡಿ ೨೪೮, ಶಿಶಿಲ ೬೬ – ಇಷ್ಟೊಂದು ಸಂಖ್ಯೆಯಲ್ಲಿ ಕಥೆಗಳನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಹಾಗಾದರೆ ಬೆಳ್ತಂಗಡಿ ತಾಲೂಕು ಒಳಗೊಂಡಿರುವ ೮೧ ಗ್ರಾಮಗಳಲ್ಲಿ ದಟ್ಟ, ಸಾಂದ್ರ ಮತ್ತು ಅತ್ಯುತ್ತಮ ಮಾದರಿಯಲ್ಲಿ ಕ್ಷೇತ್ರಕಾರ್ಯ ನಡೆಸಿದರೆ ಸುಮಾರು ೧೦,೦೦೦ ಕ್ಕಿಂತ ಅಧಿಕ ಕಥೆಗಳನ್ನು ಸಂಗ್ರಹಿಸಬಹುದು. ಗ್ರಾಮವೊಂದರಿಂದ ನೂರು ಕಥೆಗಳಂತೆ ಇಟ್ಟುಕೊಂಡರೂ ೮,೧೦೦ ಕಥೆಗಳು ! ಖಂಡಿತ ಇಷ್ಟಲ್ಲ, ಇದಕ್ಕಿಂತ ಎರಡು ಪಟ್ಟು ಅಧಿಕ ಸಾಧ್ಯ ಎಂದು ನನಗನ್ನಿಸುತ್ತದೆ. ಮತ್ತೊಂದು ರೀತಿಯಲ್ಲಿ ಇದನ್ನ ಸಮರ್ಥಿಸುತ್ತೇನೆ. ಹತ್ತಕ್ಕಿಂತ ಹೆಚ್ಚು ಕಥೆಗಳನ್ನು ಹೇಳಿದ ವಕ್ತೃಗಳಿದ್ದಾರೆ. ಪುರುಸೊತ್ತು ಇರುವಾಗ ಮತ್ತೊಮ್ಮೆ ಬನ್ನಿರಿ. ಇನ್ನು ಕೆಲವು ಕಥೆಗಳಿವೆ ಎಂದು ಆಮಂತ್ರಿಸಿದವರು ಇದ್ದಾರೆ. ಈ ಕೆಳಗಿನ ಯಾದಿಯನ್ನು ಗಮನಿಸಿರಿ :

ಅಬ್ದುಲ್ ರಜಾಕ್ ನೆಲ್ಲಿಂಗೇರಿ ೫೦. ಅಂಗಾರ ಮೇರ ಕುದ್ರಪಲ್ಕೆ ೧೫, ಅಣ್ಣಿಕನಡ ಪಾಡಿಮನೆ ೧೮, ಅಪ್ಪಿ ನಾರಡ್ಕ ೩೫, ಬಿರ್ಕು ಕೊಕ್ರಾಡಿ ೧೬, ಚೆಲುವಮ್ಮ ಪಿಜತ್ತ್ಯರಡ್ಕ ೧೮. ದುಗ್ಗುನಲಿಕೆ. ದರ್ಕಾಸು ೧೪, ಎಲಿಜ ಕುದ್ರಪಲ್ಕೆ ೨೮, ಐತ್ತಪ್ಪ ನೆಲ್ಲಿಂಗೇರಿ ೩೨, ಜಾನಕಿ ಮುಚ್ಚಿರಡ್ಕ ೧೧, ಜಾನು ಪೂಜಾರಿ ನೆಲ್ತ್ಯರಡ್ಕ ೨೫, ಕಮಲ ಪೇರ್ದೊಟ್ಟು ೩೪, ಕಮಲ ಬಂಡಾರ್ತಿ ಪಕಲೊಟ್ಟು ೪೫, ಕರಿಯ ಕುದ್ರಪಲ್ಕೆ ೩೫, ನೀಲಮ್ಮ ಹಾಲೆಕ್ಕಿ ೪೨, ಓಬಕ್ಕ ಪುನ್ಕೆತ್ತ್ಯರ್ ೨೭, ಓಡಿ, ನೆಲ್ಲಿಂಗೇರಿ ೨೩, ಶಾರದ ನೈಪಾಡಿ ೨೦, ಸಿದ್ಧಪ್ಪ ಮೈಪಲಪಾದೆ ೧೦, ಯಮುನ ಅಂಗಡಿಮನೆ ೧೭. ಇವರೆಲ್ಲರೂ ಬೆಳ್ತಂಗಡಿ ತಾಲೂಕಿಗೆ ಸೇರಿದವರು. ಒಂದು ತಾಲೂಕಿನಿಂದ ಹತ್ತು ಸಾವಿರ ಕಥೆಗಳು. ಎಂಟು ತಾಲೂಕಿನಿಂದ ೮೦,೦೦೦ ಕಥೆಗಳು. ಕಾಸರಗೋಡು ಪರಿಸರದಿಂದ ಮತ್ತೊಂದಷ್ಟು. ಬೇರೆ ಯಾರಾದರೂ ಈ ಲೆಕ್ಕಾಚಾರವನ್ನು ಮುಂದಿಡುತ್ತಿದ್ದರೆ, ಈಗ ನೀವು ಮಾಡುವಂತೆ. ನಾನೂ ತಮಾಷೆ ಎಂದು ನಗುತ್ತಿದ್ದೆ ! "ಇದು ಕಟ್ಟುಕಥೆ ಅಲ್ಲ ವಾಸ್ತವ ಸತ್ಯ" ಎಂದು ಹೇಳುವ ಇತರರೆಂದರೆ ಪ್ರೊ. ಕು. ಶಿ. ಹರಿದಾಸ ಭಟ್ಟರು. ಡಾ. ಬಿಳಿಮಲೆಯವರು ಮತ್ತು ನಮ್ಮ ಯೋಜನೆಯಲ್ಲಿ ಕೆಲಸ ಮಾಡಿದ ಸಹಾಯಕರು. ಸುಮಾರು ೧೬,೦೦೦ ಗೆರೆಗಳ ಸಿರಿಸಂಧಿಯನ್ನು ಸ್ವರ ಕೊಡಿಸಿ ಹಾಡಿದ ಶ್ರೀ ಗೋಪಾಲ ನ್ಯಾಕ ನಮ್ಮ ಜೊತೆಗಿರುವುದು ಈಗ ನಮಗೆ 'ಅಚ್ಚರಿ' ತರಬಹುದು; 'ಅಸಾಧ್ಯ'ವಾಗಿ ಉಳಿದಿಲ್ಲ.

ಕನಿಷ್ಠತಮ ಘಟಕಗಳನ್ನು ಗುರುತಿಸಿ ಆಶಯಗಳ ಪಟ್ಟಿಮಾಡುವ ಕೆಲಸವು ಕಥೆಗಳನ್ನು ಅರ್ಥೈಸುವಷ್ಟು. ಅವುಗಳ ಬಳಕೆ ಮತ್ತು ಕಾರ್ಯವನ್ನು ಶೋಧಿಸುವಷ್ಟು ಆಸಕ್ತಿಯ ವಿಷಯವಲ್ಲ. ಕಥೆಗಳನ್ನು 'ಬದುಕುವ' ಅವುಗಳ ಅಧಿಕೃತ ಒಡೆಯರು ತಮ್ಮ 'ಸಾಂಸ್ಕೃತಿಕ ಆಸ್ತಿ' ಮತ್ತು 'ಪರಂಪರಾಗತ ಬಂಡವಾಳ'ದ ಕುರಿತಂತೆ ತಿಳಿಸುವ ಮಾಹಿತಿಗಳನ್ನು ಕಲೆಹಾಕಿ ಚರ್ಚಿಸುವ ಅನುಭವ ರೋಚಕ ಅನ್ನಿಸಬಹುದು. ಕಥೆ ಹೇಳುವವರ ಜೊತೆಗೆ ನಡೆಸುವ 'ಸಂವಾದ'ಕ್ಕೆ ವರ್ಗ ಮತ್ತು ಆಶಯ ಸೂಚಿಯ ತಿಳುವಳಿಕೆಯೂ ಅಗತ್ಯವೇ. ಬದಿಕಾನರ ಸಂಶೋಧನ ಬದುಕು ಹೀಗೆ ಕ್ಲಿಷ್ಟ ಮತ್ತು ಸಾವಧಾನದ ವಿಧಾನವೊಂದರಿಂದ ಆರಂಭವಾಗಿದೆ. ಇದರಲ್ಲಿ ಅವರು ಯಶಸ್ವಿಯಾಗಿರುವುದರಿಂದ ಮತ್ತು ಇಂತಹ ಪ್ರಾರಂಭವು ಸಂಶೋಧನೆಗೆ ಅಗತ್ಯವಿರುವ ತಾಳ್ಮೆ, ಶ್ರಮ ಮತ್ತು ಪ್ರಾಮಾಣಿಕತೆಯನ್ನು ಅವರಿಗೆ ಕಲಿಸಿರುವುದರಿಂದ ಮುಂಬರುವ ಅಧ್ಯಯನಗಳಲ್ಲಿ ಅವರು ಮಿಂಚಬಲ್ಲರೆಂದು ನನಗನ್ನಿಸುತ್ತದೆ.

ಗೌಡ ಕನ್ನಡದಲ್ಲಿ ಜನಪದ ಕಥೆಗಳು ಇವೆಯೋ ಎಂಬ ಬಗ್ಗೆ ಖಚಿತವಾದ ಅಭಿಪ್ರಾಯಗಳಿರಲಿಲ್ಲ ಎಂದು ಬದಿಕಾನರು ಹೇಳಿಕೊಂಡಿದ್ದಾರೆ. ಆಮೇಲೆ ಸಮೀಕ್ಷೆ ನಡೆಸಿ ಸುಳ್ಯ ಪರಿಸರದ ಒಟ್ಟು ಹದಿಮೂರು ಗ್ರಾಮಗಳಿಂದ ನೂರು ಕಥೆಗಳನ್ನು ಸಂಗ್ರಹಿಸಿ ಅವುಗಳ ವರ್ಗ ಮತ್ತು ಆಶಯ ಸೂಚಿಯನ್ನು ತಯಾರಿಸಿದ್ದಾರೆ. ಜನಪದ ಕಥೆಗಳ ಅಪಾರ ಲಭ್ಯತೆಗೆ ಸಂಬಂಧಪಟ್ಟಂತೆ ನನ್ನ ಅನುಭವವನ್ನು ಇಲ್ಲಿ ಹಂಚಿಕೊಳ್ಳುತ್ತೇನೆ. ಡಾ. ಬಿಳಿಮಲೆಯವರು ಮತ್ತು ನಾನು ಒಟ್ಟಾಗಿ ತುಳು ಜನಪದ ಕಥೆಗಳ ಸಂಗ್ರಹಕ್ಕೆ ಸಂಬಂಧಪಟ್ಟಂತೆ ಯೋಜನೆಯೊಂದನ್ನು ತಯಾರಿಸಿ ಉಡುಪಿಯ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರಕ್ಕೆ ಎರಡು ವರ್ಷಗಳ ಹಿಂದೆ ಸಲ್ಲಿಸಿದ್ದೆವು. ಅನುಕೂಲಕ್ಕಾಗಿ ದ. ಕ. ಜಿಲ್ಲೆಯ ನಾಲ್ಕು ತಾಲೂಕುಗಳನ್ನು ಕ್ಷೇತ್ರಕಾರ್ಯಕ್ಕಾಗಿ ನಾನು ಇಟ್ಟುಕೊಂಡೆ. ನಾಲ್ಕು ತಾಲೂಕುಗಳನ್ನು ಬಿಳಿಮಲೆಯವರು ತೆಗೆದುಕೊಂಡರು. ಪ್ರಸ್ತುತ ನನ್ನ ಭಾಗದ ಕೆಲಸ ಮತ್ತು ಅನುಭವವನ್ನು ಮಾತ್ರ ಹೇಳುತ್ತೇನೆ.

ಸಂಶೋಧನ ಸಹಾಯಕರಾಗಿ ಶ್ರೀ ರಂಜಿತ್‌ಕುಮಾರ್ ಎಂಬವರನ್ನು ನಾನು ನೇಮಕ ಮಾಡಿಕೊಂಡೆ. ಬದಿಕಾನರು ಅಂದಾಜು ಮಾಡಿದಂತೆ ಒಂದಷ್ಟು ಸಂಖ್ಯೆಯ ಕಥೆಗಳನ್ನು ಸಂಗ್ರಹಿಸಬಹುದೆಂದು ನಾನು ಕೂಡಾ ಲೆಕ್ಕಹಾಕಿದ್ದೆ. ಕ್ಷೇತ್ರಕಾರ್ಯ ಮಾಡಿ ಕಥೆಗಳನ್ನು ಸಂಗ್ರಹಿಸಲು ತೊಡಗಿದ ನಮ್ಮ ಅಂದಾಜು ಲೆಕ್ಕ ಈಗ ತಲೆಕೆಳಗಾಗಿದೆ. ಕುತೂಹಲಕ್ಕಾಗಿ ಕೆಲವು ಅಂಕಿಅಂಶಗಳನ್ನು ಕೊಡುತ್ತೇನೆ. ಕಥೆಗಳ ವೈವಿಧ್ಯ, ವಿಸ್ತಾರ, ಸಾಂದರ್ಭಿಕ ಮಾಹಿತಿಗಳನ್ನು ಇಲ್ಲಿ ನಾನು ಪ್ರಸ್ತಾಪಿಸುವುದಿಲ್ಲ.

ಒಟ್ಟು ೮೨೬ ಕಥೆಗಳನ್ನು ಸಂಗ್ರಹಿಸಲಾಗಿದೆ. ಬಿಳಿಮಲೆಯವರ ಸಂಗ್ರಹ ಇನ್ನೂ ಹೆಚ್ಚಿದೆ. ಬೆಳ್ತಂಗಡಿ ತಾಲೂಕಿನಿಂದ ಸಂಗ್ರಹ ಮಾಡಿದ ಕಥೆಗಳು ೭೩೦.

ಬೆಳ್ತಂಗಡಿ ತಾಲೂಕಿನ ಅಂಡಿಂಜೆ. ಗೇರುಕಟ್ಟೆ. ಕಳಿಯ. ಕಲ್ಲೇರಿ, ಕರಾಯ, ಕರಿಮಣೇಲು. ಕೊಕ್ರಾಡಿ, ಕುಂಡದಬೆಟ್ಟು, ಮೂಡುಕೋಡಿ, ನಾವೂರ, ನೆರಿಯ, ಶಿಶಿಲ – ಹೀಗೆ ಕೆಲವೇ ಗ್ರಾಮ/ಪರಿಸರಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಕೆಲವೇ ಮಂದಿ ಕಥೆ ಹೇಳುವವರನ್ನು ಸಂಪರ್ಕಿಸಿದ್ದೇವೆ. ಅಂಡಿಂಜೆ ಗ್ರಾಮದಿಂದ ೨೬೫, ಗೇರುಕಟ್ಟೆ, ಕಲ್ಲೇರಿ, ಕರಾಯ ಪರಿಸರದಿಂದ ೨೮. ಕರಿಮಣೇಲು ೪೧. ಕೊಕ್ರಾಡಿ ೪೯, ಮೂಡುಕೋಡಿ ೨೪೮. ಶಿಶಿಲ ೬೬ – ಇಷ್ಟೊಂದು ಸಂಖ್ಯೆಯಲ್ಲಿ ಕಥೆಗಳನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಹಾಗಾದರೆ ಬೆಳ್ತಂಗಡಿ ತಾಲೂಕು ಒಳಗೊಂಡಿರುವ ೮೧ ಗ್ರಾಮಗಳಲ್ಲಿ ದಟ್ಟ, ಸಾಂದ್ರ ಮತ್ತು ಅತ್ಯುತ್ತಮ ಮಾದರಿಯಲ್ಲಿ ಕ್ಷೇತ್ರಕಾರ್ಯ ನಡೆಸಿದರೆ ಸುಮಾರು ೧೦,೦೦೦ ಕ್ಕಿಂತ ಅಧಿಕ ಕಥೆಗಳನ್ನು ಸಂಗ್ರಹಿಸಬಹುದು. ಗ್ರಾಮವೊಂದರಿಂದ ನೂರು ಕಥೆಗಳಂತೆ ಇಟ್ಟುಕೊಂಡರೂ ೮.೧೦೦ ಕಥೆಗಳು ! ಖಂಡಿತ ಇಷ್ಟಲ್ಲ, ಇದಕ್ಕಿಂತ ಎರಡು ಪಟ್ಟು ಅಧಿಕ ಸಾಧ್ಯ ಎಂದು ನನಗನ್ನಿಸುತ್ತದೆ. ಮತ್ತೊಂದು ರೀತಿಯಲ್ಲಿ ಇದನ್ನ ಸಮರ್ಥಿಸುತ್ತೇನೆ. ಹತ್ತಕ್ಕಿಂತ ಹೆಚ್ಚು ಕಥೆಗಳನ್ನು ಹೇಳಿದ ವಕ್ತೃಗಳಿದ್ದಾರೆ. ಪುರುಸೊತ್ತು ಇರುವಾಗ ಮತ್ತೊಮ್ಮೆ ಬನ್ನಿರಿ. ಇನ್ನು ಕೆಲವು ಕಥೆಗಳಿವೆ ಎಂದು ಆಮಂತ್ರಿಸಿದವರು ಇದ್ದಾರೆ. ಈ ಕೆಳಗಿನ ಯಾದಿಯನ್ನು ಗಮನಿಸಿರಿ :

ಅಬ್ದುಲ್ ರಜಾಕ್ ನೆಲ್ಲಿಂಗೇರಿ ೩೦. ಅಂಗಾರ ಮೇರ ಕುದ್ರುಪಲ್ಕೆ ೧೫, ಅಣ್ಣಿಕನಡ ಪಾಡಿಮನೆ ೧೮, ಅಪ್ಪಿ ನಾರಡ್ಕ ೩೫, ಬಿರ್ಕು ಕೊಕ್ರಾಡಿ ೧೬, ಚೆಲುವಮ್ಮ ಪಿಜತ್ತ್ಯರಡ್ಕ ೧೮. ದುಗ್ಗನಲಿಕೆ. ದರ್ಕಾಸು ೧೪, ಎಲಿಜ ಕುದ್ರುಪಲ್ಕೆ ೨೮, ಐತ್ತಪ್ಪ ನೆಲ್ಲಿಂಗೇರಿ ೩೨, ಜಾನಕಿ ಮುಚ್ಚಿರಡ್ಕ ೧೧, ಜಾನು ಪೂಜಾರಿ ನೆಲ್ತ್ಯರಡ್ಕ ೨೫. ಕಮಲ ಪೇರ್ದೊಟ್ಟು ೩೪, ಕಮಲ ಬಂಡಾರ್ತಿ ಪಕಲೊಟ್ಟು ೪೫, ಕರಿಯ ಕುದ್ರುಪಲ್ಕೆ ೩೫, ನೀಲಮ್ಮ ಹಾಲೆಕ್ಕಿ ೪೨. ಓಬಕ್ಕ ಪುನ್ಕೆತ್ತ್ಯರ್ ೨೭. ಓಡಿ, ನೆಲ್ಲಿಂಗೇರಿ ೨೩, ಶಾರದ ನೈಪಾಡಿ ೨೦, ಸಿದ್ಧಪ್ಪ ಮೈಪಲಪಾದೆ ೧೦. ಯಮುನ ಅಂಗಡಿಮನೆ ೧೭. ಇವರೆಲ್ಲರೂ ಬೆಳ್ತಂಗಡಿ ತಾಲೂಕಿಗೆ ಸೇರಿದವರು. ಒಂದು ತಾಲೂಕಿನಿಂದ ಹತ್ತು ಸಾವಿರ ಕಥೆಗಳು. ಎಂಟು ತಾಲೂಕಿನಿಂದ ೮೦,೦೦೦ ಕಥೆಗಳು. ಕಾಸರಗೋಡು ಪರಿಸರದಿಂದ ಮತ್ತೊಂದಷ್ಟು. ಬೇರೆ ಯಾರಾದರೂ ಈ ಲೆಕ್ಕಾಚಾರವನ್ನು ಮುಂದಿಡುತ್ತಿದ್ದರೆ, ಈಗ ನೀವು ಮಾಡುವಂತೆ. ನಾನೂ ತಮಾಷೆ ಎಂದು ನಗುತ್ತಿದ್ದೆ ! "ಇದು ಕಟ್ಟುಕಥೆ ಅಲ್ಲ ವಾಸ್ತವ ಸತ್ಯ" ಎಂದು ಹೇಳುವ ಇತರರೆಂದರೆ ಪ್ರೊ. ಕು. ಶಿ. ಹರಿದಾಸ ಭಟ್ಟರು. ಡಾ. ಬಿಳಿಮಲೆಯವರು ಮತ್ತು ನಮ್ಮ ಯೋಜನೆಯಲ್ಲಿ ಕೆಲಸ ಮಾಡಿದ ಸಹಾಯಕರು. ಸುಮಾರು ೧೬.೦೦೦ ಗೆರೆಗಳ ಸಿರಿಸಂಧಿಯನ್ನು ಸ್ವರ ಕೂಡಿಸಿ ಹಾಡಿದ ಶ್ರೀ ಗೋಪಾಲ ನ್ಯಾಕ ನಮ್ಮ ಜೊತೆಗಿರುವುದು ಈಗ ನಮಗೆ 'ಅಚ್ಚರಿ' ತರಬಹುದು; 'ಅಸಾಧ್ಯ'ವಾಗಿ ಉಳಿದಿಲ್ಲ.

ನಾನು ಹಂಚಿಕೊಂಡಿರುವ ಮಾಹಿತಿಗಳ ಹಿನ್ನೆಲೆಯಲ್ಲಿ ಬದಿಕಾನರು ಏಕಾಂಗಿಯಾಗಿ ಸೀಮಿತ ಅವಧಿಯೊಳಗೆ ಮಾಡಿದ ಕೆಲಸವು ಮಹತ್ತ್ವದ್ದೆಂಬುದು ನನಗೆ ಮನವರಿಕೆಯಾಗಿದೆ. ಅವರು ಮಾಡಿರುವ ಆರಂಭವನ್ನು ವಿಸ್ತರಿಸಬೇಕಾದ ಅಗತ್ಯವಿದೆ. ತನ್ನ ಕೆಲಸದ ಮಿತಿ ಮತ್ತು ಅಧ್ಯಯನ ಮಾಡಬಹುದಾದ ಸಾಧ್ಯತೆಗಳ ಕುರಿತಂತೆ ಬದಿಕಾನರಿಗೆ ಸರಿಯಾದ ತಿಳುವಳಿಕೆಯಿರುವುದರಿಂದ ಆ ನಿಟ್ಟಿನಲ್ಲಿ ಆಕ್ಷೇಪಿಸುವ ಅಗತ್ಯವಿಲ್ಲ. ಮಾಡಬಹುದಾದ ಕೆಲಸಗಳಿಗಿಂತ ಮಾಡಿದ ಕೆಲಸದ ಬಗ್ಗೆ ಗಮನಿಸಬೇಕು. ವರ್ಗಸೂಚಿಯ ತಯಾರಿಗೆ ಸ್ಟಿತ್ ಥಾಮ್ಸನ್ ಮತ್ತು ಅಂಟಿಆರ್ನೆಯವರ 'The Types of Folktales' (೧೯೬೪) ಹಾಗೂ ಆಶಯಸೂಚಿಯ ಸಿದ್ಧತೆಗೆ ಸ್ಟಿತ್‌ಥಾಮ್ಸನ್‌ರ 'Motif Index of Folkliterature' (೧೯೬೬–ಆರು ಸಂಪುಟಗಳು) ಇವುಗಳನ್ನು ಆಧರಿಸಿ ಅಧ್ಯಯನ ನಡೆಸಿದ ಬದಿಕಾನರು ಕೆಲವು ಹೊಸ ಉಪವರ್ಗಗಳನ್ನು ಗುರುತಿಸಿದ್ದಾರೆ. ಮೋಸ ಮಾಡಲು ಹೋದ ನರಿಯು ತನ್ನ ಬಲೆಯಲ್ಲಿ ತಾನೇ ಸಿಲುಕುವುದು (೫೬ F), ಮೀನಿನ ಹೆಂಡತಿ–ತಂಗಿಯ ಮತ್ಸರ (೪೩೩ E) ಅಣ್ಣನು ಮರವಾಗಿ ಪರಿವರ್ತನೆಯಾಗುವುದು (೪೫೦ B), ಸಹಾಯಕ ಎತ್ತುಗಳು (೫೧೧ B), ಮಾಂತ್ರಿಕ ಹಣ್ಣು ತಿಂದು ಮಕ್ಕಳಾಗುವುದು (೫೬೬ A) ಇತ್ಯಾದಿ. ೩೨೦ ಆಶಯಗಳನ್ನು ಪಟ್ಟಿಮಾಡಿದ್ದಾರೆ. ಇದು ಕೇವಲ ನೂರು ಕಥೆಗಳನ್ನು ಆಧರಿಸಿ ನಡೆದ ಅಧ್ಯಯನ. ಒಂದು ಜನಾಂಗದ ಅಥವಾ ಒಂದು ಪ್ರದೇಶದ ಜನಪದ ಕಥೆಗಳ ವರ್ಗ ಮತ್ತು ಆಶಯ ಸೂಚಿಯ ಸಮಗ್ರ ಸಂಪುಟಗಳ ರಚನೆಗೆ ಇಂತಹ ಅಧ್ಯಯನ ಸಹಾಯಕವಾಗುತ್ತದೆ.

ಕತೆಗಳ ರಾಚನಿಕ ಅಧ್ಯಯನ, ಭಾಷಿಕ ಅಧ್ಯಯನ, ಅವುಗಳ ಅಭಿವ್ಯಕ್ತಿ ತಂತ್ರ, ಪುನರಾವರ್ತನೆಯಾಗುವ ವರ್ಣನೆಗಳು ಮತ್ತು ಆಶಯಗಳು, ಕಲ್ಪನೆ ಮತ್ತು ವಾಸ್ತವ, ಜನಪದರ ಮನಸ್ಸು, ವಕ್ತೃಗಳು ಕಥೆಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ವಿನ್ಯಾಸ. ಮಾನಸಿಕ ಪಕ್ಷದ ಪರಿಕಲ್ಪನೆ, ಕಥೆ ಮತ್ತು ಕುಟುಂಬ ವ್ಯವಸ್ಥೆ, ಕಥೆಗಳು ಮತ್ತು ಮೌಲ್ಯ ಪ್ರಸರಣ, ಪುರುಷಕೇಂದ್ರಿತ ಕಥೆಗಳು. ಸ್ತ್ರೀಕೇಂದ್ರಿತ ಕಥೆಗಳು, ಈ ರೀತಿಗಳಲ್ಲಿ ಅಧ್ಯಯನ ಮಾಡಬೇಕಾದರೆ ಮುಖ್ಯವಾಗಿ ನಮಗೆ ಅತ್ಯುತ್ತಮ ಸಂಗ್ರಹಗಳು ಬೇಕಾಗುತ್ತವೆ. ಕಥೆಗಳ ಉಗಮ, ಪ್ರಸರಣ, ರಚನೆ ಮತ್ತು ಅರ್ಥಗಳಿಗೆ ಸಂಬಂಧಪಟ್ಟಂತೆ ವಿವರಣೆ ನೀಡುವ ಸಿದ್ಧಾಂತಗಳನ್ನು ನಾವು ದೇಶೀಯವಾಗಿ ರೂಪಿಸಿಕೊಳ್ಳಬೇಕಾದರೆ ಮೊತ್ತಮೊದಲಿಗೆ ನಾವು ಮಾಡಬೇಕಾದುದು ವ್ಯವಸ್ಥಿತವಾದ ಸಂಗ್ರಹಕಾರ್ಯವನ್ನು. ಕಥೆಗಳನ್ನು ಹೇಳುವವರ ಕುರಿತಂತೆ ವಿವರವಾದ ಮಾಹಿತಿಗಳು ನಮಗೆ ಬೇಕು. ಕಥೆಗಳ ಪ್ರಕಾರದ. ಜೊತೆಗೆ ಅವರು ತಮ್ಮನ್ನು ಶಾವು ಗುರುತಿಸಿ 'ಬದುಕುವ' ರೀತಿ ನಮಗೆ ತಿಳಿದಿರಬೇಕು. ಕಥೆಗಳನ್ನು ಹೆಣೆಯುತ್ತ ಅವುಗಳ ಆಚೀಚೆಗೆ ತೆರಳಿ ಮರಳುವ ಕ್ರಮ, ತಮ್ಮ ಸಾಮಗ್ರಿಗಳ ಕುರಿತಂತೆ ಅವರೇ ಕೊಡುವ ವ್ಯಾಖ್ಯಾನ

ಮತ್ತು ವಿಮರ್ಶೆ ಇವು ಕಥೆಗಳ ಸಂಪಾದನೆ ಮತ್ತು ಅಧ್ಯಯನಗಳಲ್ಲಿ ಪ್ರಸ್ತಾವನೆಯಾಗಿ ಕಾರ್ಯ ನಿರ್ವಹಿಸಬೇಕಾಗಿದೆ.

ಬಹುಮುಖೀ ಪರಂಪರೆಗಳುಳ್ಳ ಈ ದೇಶವನ್ನು ಪ್ರೀತಿಸುವ ಮತ್ತು ಆರೋಗ್ಯಪೂರ್ಣವಾಗಿ ರಕ್ಷಿಸುವ ಕಾಳಜಿಯಿರುವ ಜನರಿಗೆ ನನ್ನದೊಂದು ಕಿವಿಮಾತಿದೆ. ಆದರ್ಶ ಮತ್ತು ಅನುಕರಣೀಯ ಎಂದು ನಾವು ಭಾವಿಸುವ, ಅತ್ಯಂತ ಅಭಿವೃದ್ಧಿ ಹೊಂದಿದ ಪಾಶ್ಚಾತ್ಯ ದೇಶಗಳ ಜೊತೆಗೆ ತಾಂತ್ರಿಕವಾಗಿ ವೈಜ್ಞಾನಿಕವಾಗಿ ಸ್ಪರ್ಧಿಸಿ ಅವರನ್ನು ಮೀರುವುದಕ್ಕೆ ನಮಗೆ ಸಾಧ್ಯವಿಲ್ಲ. ಸ್ಪರ್ಧಿಸಿ ಗೆಲ್ಲುವ ಅಗತ್ಯವೂ ಇಲ್ಲವೆಂದು ಕಾಣುತ್ತದೆ. ನಿಜವಾಗಿ ನಾವು ಸ್ಪರ್ಧಿಸಲೇಬೇಕಾದ ಒಂದು ಕ್ಷೇತ್ರವಿದೆ. ಅದು ಸಂಸ್ಕೃತಿಯ ಕ್ಷೇತ್ರ. ಜಾನಪದ ಕ್ಷೇತ್ರ. ಈ ರಂಗಗಳ ಕೆಲಸವು ನಮಗೆ ಕೈಗಾರಿಕೆಗಳ ಸ್ಥಾಪನೆಯಂತೆ ಪರ್ಯಾಯ ಉದ್ಯಮವಾಗಬೇಕು. ಸಂಗ್ರಹ, ಸಂಪಾದನೆ, ಪ್ರಕಟನೆ, ಪ್ರಸರಣ, ದಾಖಲಾತಿ ಕೇಂದ್ರಗಳು. ಅನ್ವಯಿಕತೆ, ವಿನಿಮಯ, ಪರಿಷ್ಕರಣ ಹೀಗೆ ತುಂಬ ವ್ಯಾಪಕವಾಗಿ ವ್ಯವಸ್ಥಿತವಾಗಿ ಯೋಜನೆಗಳು ಕಾರ್ಯೋನ್ಮುಖವಾಗಬೇಕು. ನಮ್ಮ ಜಾನಪದ ಸಂಸ್ಕೃತಿ ಸಾಮಗ್ರಿಗಳು ಭಾರತದೊಳಗಿರುವ 'ದೇಶ'ಗಳ ಅಮೂಲ್ಯ ಸಂಪತ್ತು ಎಂಬ ತಿಳುವಳಿಕೆ ನಮಗೆ ಬರಬೇಕು. ಆ ವೇಳೆಗೆ ವಿದೇಶೀಯರು ದಂಗಾಗಿ ನಮ್ಮತ್ತ ಕಣ್ದೆರೆದು ನೋಡುತ್ತಾರೆ. (ಹೀಗಾಗದಂತೆ ಅವರು ಈಗಾಗಲೇ ಸಿದ್ಧತೆ ನಡೆಸಿದ್ದಾರೆ. 'ಡಂಕೆಲ್' ಗಮನಿಸಿರಿ). ಬೇರೆಯವರು ನಮ್ಮನ್ನು ಗೌರವ ಮತ್ತು ಜಾಗೃತಿಯಿಂದ ನೋಡುವಂತೆ ಮಾಡಲು ಸಾಧ್ಯವಿರುವುದಾದರೆ ಅದು ನಮ್ಮ ಸಾಂಸ್ಕೃತಿಕವಾದ ಜಾನಪದ ಜಗತ್ತನ್ನು ನಾವೇ ತೆರೆದುತೋರಿಸುವ ಕೆಲಸವನ್ನು ಮಾಡುವುವರ ಮೂಲಕ ಮಾತ್ರ ಎಂದು ನನಗನ್ನಿಸುತ್ತದೆ.

ವಿಶ್ವನಾಥ ಬದಿಕಾನರ ಈ ಕೃತಿಯು ಈ ಬಗೆಯ ಅಧ್ಯಯನಗಳ ಸಾಧ್ಯತೆಗಳ ಕುರಿತಂತೆ ಆಲೋಚಿಸಲು ಪ್ರೇರೇಪಿಸಿದ್ದರಿಂದ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ. ಒಂದು ಒಳ್ಳೆಯ ಕೃತಿ ಹೇಳಬೇಕಾದುದನ್ನು ಹೇಳಿಯೂ ಹೋಗಬೇಕಾದುದರ ಕಡೆಗೆ ತುಡಿಯುತ್ತದೆ. ಸಣ್ಣ ಕೆಲಸ ದೊಡ್ಡ ಸಾಧನೆಗೆ ಕಾರಣವಾಗಿ ಪರಿಣಮಿಸುತ್ತದೆ. ಸಂಶೋಧನೆಯ ಬಹಳ ಮುಖ್ಯ ಜವಾಬ್ದಾರಿಯೊಂದನ್ನು ಈ ರೀತಿಯಲ್ಲಿ ನಿರ್ವಹಿಸಿದ ವಿಶ್ವನಾಥ ಬದಿಕಾನರನ್ನು ನಾನು ಅಭಿನಂದಿಸುತ್ತೇನೆ.

೧೩-೩-೧೯೯೪
ಮಂಗಳಗಂಗೋತ್ರಿ

—ಡಾ. ಕೆ. ಚಿನ್ನಪ್ಪಗೌಡ
ಕನ್ನಡ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ

# ನೆನಕೆ

೧

ಸುಳ್ಯ ಭೌಗೋಳಿಕವಾಗಿ ಮಲೆನಾಡ ತಪ್ಪಲು ಪ್ರದೇಶದಲ್ಲಿದೆ. ತುಳು ಇಲ್ಲಿನ ಪ್ರಧಾನ ಭಾಷೆಯಾದರೂ, 'ಅರೆಬಾಸೆ' (ಅರೆಭಾಷೆ, ಗೌಡ ಕನ್ನಡ ಭಾಷೆ) ಕನ್ನಡ, ಮಲೆಯಾಳಂ, ತಮಿಳು ಭಾಷೆಗಳನ್ನು ಮಾತನಾಡುವವರಿದ್ದಾರೆ.

ಪ್ರಸ್ತುತ ಕೃತಿಯಲ್ಲಿ ಅರೆಬಾಸೆಯಲ್ಲಿ ಹೇಳುವ 'ಅಜ್ಜಿ ಕಥೆ'ಗಳನ್ನು ಸಂಗ್ರಹಿಸಿ, ಅವುಗಳ ಅಧ್ಯಯನ ಮಾಡಲಾಯಿತು. ಕಥೆಗಳನ್ನು ಸಂಗ್ರಹಿಸುವಾಗ ನನಗೆ ಅರೆಬಾಸೆಯ ಸಂಪೂರ್ಣ ಪರಿಚಯವಿರಲಿಲ್ಲ. ಈ ಸಂದರ್ಭದಲ್ಲಿ ಅರೆಬಾಸೆ ಮಾತನಾಡುವ ಪೆರಾಜೆಯ ಒಂದಿಬ್ಬರು ಗೆಳೆಯರು ಸಹಾಯ ಮಾಡಿದರು. ಕ್ಷೇತ್ರ ಕಾರ್ಯದ ಮೊದಲು ಕಥೆ ಹೇಳುವವರು ಇದ್ದಾರೆಯೇ ? ಕಥೆ ಹೇಳುವವರು ಅರೆಬಾಸೆಯಲ್ಲೇ ಮಾತನಾಡುತ್ತಾರೆಯೇ ? – ಹೀಗೆ ಸಮೀಕ್ಷೆ ಮಾಡಲಾಯಿತು. ಈ ಸಂದರ್ಭದಲ್ಲಿ ಒಂದೆರಡು ದಿನ ತುಂಬಾ ನಿರಾಶೆಯಿಂದಿದ್ದೆ. ಎಂದರೆ ಅರೆಬಾಸೆಯಲ್ಲಿ ಕಥೆಗಳೇ ಇಲ್ಲವೆಂದು ಹೇಳಿದವರು ಹೆಚ್ಚು

ಅರೆಬಾಸೆಯ ಅಜ್ಜಿಕಥೆಗಳನ್ನು ಸಂಗ್ರಹಿಸುವುದರೊಂದಿಗೆ ಅರೆಬಾಸೆಯ ಪದಗಳ ಕಡೆಗೆ ನನ್ನ ಗಮನ ಸೆಳೆಯಿತು. ಈ ಸಂದರ್ಭದಲ್ಲಿ ಪ್ರೊ. ಕೆ. ಕುಶಾಲಪ್ಪ ಗೌಡರ 'GOWDA KANNADA' (1970) ಎಂಬ ಕೃತಿ ಅಧ್ಯಯನಕ್ಕೆ ಲಭ್ಯವಾಯಿತು. ಸುಳ್ಯ ಪರಿಸರದ ಗೌಡ ಜನಾಂಗದ ಕುರಿತು ಅಧ್ಯಯನ ಮಾಡಿದ ಬಿಳಿಮಲೆಯವರು ಗೌಡ ಕನ್ನಡದ ಅಜ್ಜಿ ಕಥೆಗಳ ಕಡೆಗೆ ಗಮನಹರಿಸಿಲ್ಲ. ಹೀಗಾಗಿ ನನಗೆ ಅಧ್ಯಯನಕ್ಕೆ ಹೊಸ ಹಾದಿ ಸಿಗಬಹುದೆಂದು ಮನದಟ್ಟಾಯಿತು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವರ ನಿಂದೆಗಳನ್ನು ಕೇಳಿಸಿಕೊಂಡೆ. 'ನೀವ್‌ಗೆ ಏನ್. ನಾಕ್ ಅಜ್ಜಿಗ ಸಿಕ್ಕಿರೆ ಸಾಕ್. ಎಂ.ಫಿಲ್. ಮುಗ್ತ್.' (ನಿಮಗೆ ಏನು, ನಾಲ್ಕು ಅಜ್ಜಿಯರು ಸಿಕ್ಕಿದರೆ ಸಾಕು. ಎಂ.ಫಿಲ್. ಮುಗಿಯಿತು.) ಕ್ಷೇತ್ರ ಕಾರ್ಯ ಸುಲಭವೆಂದು ತಿಳಿದವರೇ ಹೆಚ್ಚು. ಒಬ್ಬ ನಿರೂಪಕನ ಬಾಯಿಯಿಂದ ಕಥೆ ಹೊರ ಬರಬೇಕಾದರೆ ಮೂರು ನಾಲ್ಕು ಬಾರಿಯಾದರೂ ಭೆಟ್ಟಿಯಾಗಬೇಕಿತ್ತು.

ಅವರಿಗೆ ಒಂದೆರಡು ಕಥೆಗಳನ್ನು ಕ್ಯಾಸೆಟ್‌ನಲ್ಲಿ ಹೀಗಿದೆ ಎಂದು ಕೇಳಿಸಲಾಯಿತು. ಆಗ ಅವರು 'ಓ! ಅದಾ! ಅದಕ್ಕಿಂತ ಲಾಯಿಕ್‌ನ ಕಥೆ ನಂಗೆ ಗೊತ್ತುಟ್ಟ್' (ಓ! ಆದಾ! ಅದಕ್ಕಿಂತ ಒಳ್ಳೆಯ ಕಥೆ ನನಗೆ ಗೊತ್ತಿದೆ) – ಎಂದು ಕಥೆ ಹೇಳ ತೊಡಗುತ್ತಿದ್ದರು. ಹೀಗೆ ಒಂದು ತಿಂಗಳ ಅವಧಿಯಲ್ಲಿ ೧೨೦ ಕಥೆಗಳನ್ನು ಸಂಗ್ರಹ ಮಾಡಲಾಯಿತು.

ಕೊನೆ ಕೊನೆಗೆ ಮಾಹಿತಿದಾರರು ಸುಳ್ಯದಲ್ಲಿ ಸಿಕ್ಕಾಗ, "ನೆಂಟ್ರೇ ಮನೆಗೆ ಬಂದರಿಯಾ. ನಮ್ಮ ಕಾಗಡೆ ಮನೆಯುವು ಹೇಳಿಯೊಳ. ಅವುಕ್ಕೆ ಇನ್ನ್‌ನೂ ಕಥೆ ಗೊತ್ತುಟ್ಟ್ ಗಡ. ನೀವ್ ಬರಕಡ. (ನೆಂಟರೇ ಮನೆಗೆ ಬರುತ್ತೀರಾ. ನಮ್ಮ ಕೆಳಗಡೆ ಮನೆಯುವರು ಹೇಳಿದ್ದಾರೆ. ಅವರಿಗೆ ಇನ್ನೂ ಕಥೆ ಗೊತ್ತಿವೆಯುಂತೆ. ನೀವು ಬರಬೇಕಂತೆ) – ಎಂದು ಹೇಳುತ್ತಿದ್ದರು. ಅವರೆಲ್ಲರನ್ನೂ ಈ ಸಂದರ್ಭದಲ್ಲಿ ನೆನೆಯುತ್ತಿದ್ದೇನೆ.

೨

ಈ ಕೃತಿಯು ಎಂ. ಫಿಲ್ ಅಧ್ಯಯನದ ಆವಶ್ಯಕತೆಗಾಗಿ ಸಿದ್ಧಪಡಿಸಿದ ಪ್ರೌಢ ಪ್ರಬಂಧ. ಡಾ. ಪುರುಷೋತ್ತಮ ಬಿಳಿಮಲೆಯವರ ಮಾರ್ಗದರ್ಶನದಲ್ಲಿ ೧೯೯೧ರಲ್ಲಿ ಮಂಗಳೂರು ವಿಶ್ವ ವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಈ ಪ್ರಬಂಧ ವನ್ನು ಸಾದರಪಡಿಸಲಾಯಿತು. ಈಗ ಹಲವು ತಿದ್ದುಪಡಿ ಮತ್ತು ಸೇರ್ಪಡೆ ಯೊಂದಿಗೆ ಪ್ರಕಟವಾಗಿದೆ.

ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ನನಗೆ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಪ್ರೊ. ಬಿ. ಎ. ವಿವೇಕ ರೈಯವರಿಗೆ;

ಗೌಡ ಕನ್ನಡದ ಜನಪದ ಕಥೆಗಳಲ್ಲಿ ಎಂ.ಫಿಲ್. ಅಧ್ಯಯನ ಮಾಡಿ ಎಂದು ಸೂಚಿಸಿದ ಮತ್ತು ಮಾರ್ಗದರ್ಶನ ನೀಡಿದ ಡಾ. ಪುರುಷೋತ್ತಮ ಬಿಳಿಮಲೆ ಯವರಿಗೆ;

ಎಂ.ಫಿಲ್. ಅಧ್ಯಯನ ಮಾಡಿ ಎಂದು ಪ್ರೋತ್ಸಾಹಿಸಿದ ಕನ್ನಡ ಅಧ್ಯಯನ ವಿಭಾಗದ ಉಪನ್ಯಾಸಕರಾದ ಕೆ. ಚಿನ್ನಪ್ಪಗೌಡ, ಶಿವರಾಮಶೆಟ್ಟಿ, ಅರವಿಂದ ಮಾಲಗತ್ತಿ, ಸುಬ್ರಹ್ಮಣ್ಯ ಭಟ್ಟ, ಸಬಿಹಾ ಅವರಿಗೆ;

ಕಥೆಗಳ ಸಂಗ್ರಹಕ್ಕೆ ಕ್ಯಾಸೆಟ್‌ಗಳನ್ನು ಒದಗಿಸಿಕೊಟ್ಟು ಸಹಕರಿಸಿದ ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರವವರಿಗೆ;

ಎಂ.ಫಿಲ್. ಅಧ್ಯಯನದ ಅವಧಿಯಲ್ಲಿ ವಿಷಯದ ಕುರಿತು ಚರ್ಚಿಸಿದ ವೀಣಾ ಬನ್ನಂಜೆ, ಜಾಹ್ನವಿ, ಪ್ರಕಾಶ್ಚಂದ್ರ ಶಿಶಿಲ, ರಾಮ ಪ್ರಸಾದ್, ಅಜಿತ್‌ಕುಮಾರ್, ಶರತ್‌ಕುಮಾರ್ ಟಿ. ಕೆ. ಅವರಿಗೆ;

ಕ್ಷೇತ್ರ ಕಾರ್ಯಕ್ಕೆ ಜೊತೆಯಾಗಿ ಬಂದು ಸಹಕರಿಸಿದ ಲೋಕನಾಥ ಅಮ್ಚೂರು, ನಾಗೇಶ ಕುಂದಲ್ಪಾಡಿ, ಚಂದ್ರಶೇಖರ ಪಾನತ್ತಿಲ, ಶ್ರೀಧರ ಪಾನತ್ತಿಲ, ಜಯಪ್ರಕಾಶ್ ಕನ್ನಿಗುಂಡಿ, ಮೋಹನ ಮುಡ್ರಿಲ ಅವರಿಗೆ;

ಅಧ್ಯಯನ ಮಾಡಿ ಎಂದು ಪ್ರೋತ್ಸಾಹಿಸಿದ ಹಿತೈಷಿಗಳಾದ ಅಪ್ಪಂಗಾಯ ಎಲ್ಯಣ್ಣಗೌಡ, ಕುಕ್ಕೇಟ್ಟಿ ರಾಮಣ್ಣಗೌಡ, ಪ್ರಭಾಕರ ಶಿಶಿಲ, ಶಿವಣ್ಣ ನೆಲೆಮನೆ, ಬೆಳಿಯಪ್ಪಗೌಡ, ಪೂವಪ್ಪ ಕಣಿಯೂರು, ಗಣೇಶ ದುಗ್ಗಾಲ ಅವರಿಗೆ;

ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರಿಗೆ;

ಪುಸ್ತಕ ಪ್ರಕಟಣೆ ಮಾಡಿ ಎಂದು ಪ್ರೋತ್ಸಾಹಿಸಿದ ಎಚ್. ಎಸ್. ರಾಘವೇಂದ್ರ ರಾವ್, ಕೆ. ವಿ. ನಾರಾಯಣ, ಹಿ. ಶಿ. ರಾಮಚಂದ್ರೇಗೌಡ, ಕೆ. ಪಿ. ರಾವ್, ಪುರುಷೋತ್ತಮ ಬಿಳಿಮಲೆ, ಶೋಭಕ್ಕ, ಅಶೋಕ ಆಳ್ವ, ಕಿಶೋರ್‌ಕುಮಾರ್ ಮತ್ತು ಗೆಳತಿ ಸರೋಜ ಅವರಿಗೆ;

ಮದಿಪು ಪ್ರಕಾಶನದಲ್ಲಿ ಈ ಪುಸ್ತಕವನ್ನು ಪ್ರಕಟಿಸುತ್ತೇವೆಂದು ಒಪ್ಪಿಕೊಂಡು ಪ್ರೀತಿಯಿಂದ ಸಹಾಯಕರಾದ ಡಾ. ಶಾಂತಿ ಚಿನ್ನಪ್ಪಗೌಡ ಕೆ. ಅವರಿಗೆ,

ಅಧ್ಯಯನದ ಅವಧಿಯಲ್ಲಿ ಸಹಾಯಮಾಡಿದ ಮಾಧವ ಪೆರಾಜೆ, ಆನಂದ ಕೋಡಿಂಬಳ, ಸಂಜೀವ ಕುದ್ಪಾಜೆ, ಹರೀಶ್‌ಕೋಡಿಯಿಲ, ಡಿ. ಬಿ. ಬಾಲಕೃಷ್ಣ, ತೇಜಪ್ರಸಾದ್ ಅಮ್ಚೂರು, ರುಕ್ಮಿಣಿ ಕುಂದಲ್ಪಾಡಿ, ವೆಂಕಟ್‌ಮೋಂಟಡ್ಕ, ಎಂ. ಬಿ. ಸದಾಶಿವ, ಸೂರಯ್ಯಣ್ಣ, ಜ್ಯೋತಿ, ದಯಾಮಣಿ, ಇಸಾಕ್ ಅಗ್ನಾಡಿ, ಸೀತಾರಾಮ ಕೇವಳ, ಚೆನ್ನಕೇಶವ ಕಾಟೂರು, ಕೆದ್ದಾರ್ ಶಿವಣ್ಣಗೌಡ, ಅಡ್ಡಂತಡ್ಕ, ದೇರಣ್ಣಗೌಡ ಅವರಿಗೆ;

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಥೆ ಹೇಳಿ ಸಹಕರಿಸಿದ ಎಲ್ಲಾ ನಿರೂಪಕರಿಗೆ;

ಅಧ್ಯಯನದ ಯಶಸ್ವಿಗೆ ಮತ್ತು ಪುಸ್ತಕದ ಪ್ರಕಟಣೆಗೆ ಎಲ್ಲಾ ರೀತಿಯಿಂದಲೂ ಹೊಣೆಯಾದ ತಂದೆ ತಾಯಿ ಬದಿಕಾನ ಹೂವಪ್ಪಗೌಡ, ಲಿಂಗಮ್ಮ, ಅಣ್ಣ, ಅತ್ತಿಗೆ, ತಮ್ಮ, ತಂಗಿ, ಅವರಿಗೆ;

ಮುಖಪುಟ ವಿನ್ಯಾಸ ಬರೆದುಕೊಟ್ಟ ಶ್ರೀ ಕೆ. ಮುಕಾಳಿ ಅವರಿಗೆ;

ಅಂದವಾಗಿ ಮುದ್ರಣ ಮಾಡಿಕೊಟ್ಟ ಪ್ರಭು ಪ್ರಿಂಟಿಂಗ್ ಪ್ರೆಸ್ಸಿನ ಮಾಲಕರಾದ ಶಾಂತವೀರ ಜಂಗಮುನಿ ಗೆಳೆಯರಿಗೆ;

ನಾನು

ಈ ಸಂದರ್ಭದಲ್ಲಿ ಕೃತಜ್ಞನಾಗಿದ್ದೇನೆ.

೧೦-೦೩-೧೯೯೪

—ವಿಶ್ವನಾಥ ಬದಿಕಾನ
ಸಂಶೋಧನ ವಿದ್ಯಾರ್ಥಿ
ಕನ್ನಡ ವಿಶ್ವ ವಿದ್ಯಾಲಯ, ಹಂಪಿ

## ಪ್ರಕಾಶಕರ ಮದಿಪು

ತರುಣ ಸಂಶೋಧಕರಾಗಿರುವ ಶ್ರೀ ವಿಶ್ವನಾಥ ಬದಿಕಾನ ಅವರ 'ಗೌಡ ಕನ್ನಡದ ಜನಪದ ಕಥೆಗಳು – ವರ್ಗ ಮತ್ತು ಆಶಯ ಸೂಚಿ' ಕೃತಿಯನ್ನು ಪ್ರಕಟಿಸಿ ಜಾನಪದ ಆಸಕ್ತರಿಗೆ ದೊರಕುವಂತೆ ಮಾಡುವ ಅವಕಾಶವು ಮದಿಪು ಪ್ರಕಾಶನಕ್ಕೆ ಬಂದಿರುವುದು ತುಂಬ ಸಂತೋಷದ ಸಂಗತಿಯಾಗಿದೆ. ಈ ಕೃತಿಯು ಮದಿಪು ಪ್ರಕಾಶನದ ಮೂರನೆಯ ಪ್ರಕಟನೆಯಾಗಿದೆ.

ಡಾ. ಕೆ. ಚಿನ್ನಪ್ಪಗೌಡರ 'ಭೂತಾರಾಧನೆ – ಜಾನಪದೀಯ ಅಧ್ಯಯನ' ಹಾಗೂ ಡಾ. ಪುರುಷೋತ್ತಮ ಬಿಳಿಮಲೆಯವರ 'ಶಿಷ್ಟ ಪರಿಶಿಷ್ಟ' ಗ್ರಂಥಗಳನ್ನು ಈ ಹಿಂದೆ ಪ್ರಕಟಿಸಿದ್ದೆವು. ತಿಳುವಳಿಕೆಯನ್ನು ವಿಸ್ತರಿಸುವ ಇವೆರಡು ಗ್ರಂಥಗಳಿಗೆ ಓದುಗರಿಂದ ಮತ್ತು ವಿಮರ್ಶಕರಿಂದ ದೊರೆತಿರುವ ಮೆಚ್ಚುಗೆ ಮತ್ತು ಪ್ರೋತ್ಸಾಹವು ಅನನ್ಯವಾದುದು.

ಕೆ. ಚಿನ್ನಪ್ಪಗೌಡರ ಸಂಶೋಧನಾತ್ಮಕ ಮಹಾಪ್ರಬಂಧಕ್ಕೆ ಡಾ. ಕೆ. ಶಿವರಾಮ ಕಾರಂತ ಪುರಸ್ಕಾರ ಲಭಿಸಿದೆ (೧೯೯೨). ಪುರುಷೋತ್ತಮ ಬಿಳಿಮಲೆಯವರ ವಿಮರ್ಶಾತ್ಮಕ ಲೇಖನಗಳ ಸಂಕಲನ 'ಶಿಷ್ಟ ಪರಿಶಿಷ್ಟ'ಕ್ಕೆ ಶ್ರೀ ಮಲ್ಲಿಕಾರ್ಜುನ ಮನಸೂರ ಪ್ರಶಸ್ತಿ, ಆರ್ಯಭಟ ಸಾಹಿತ್ಯ ಪ್ರಶಸ್ತಿ ಮತ್ತು ಬಿ. ಎಚ್. ಶ್ರೀಧರ ದತ್ತಿ ಪ್ರಶಸ್ತಿ – ಹೀಗೆ ಮೂರು ಪ್ರಶಸ್ತಿಗಳು ಸಂದಿವೆ (೧೯೯೩). ಮದಿಪು ಪ್ರಕಾಶನಕ್ಕೆ ಇದು ಬಹಳ ಹೆಮ್ಮೆಯ ಸಂಗತಿ. ಪ್ರಕಾಶನದ ಕೆಲಸಗಳನ್ನು ಗುರುತಿಸಿ ಗೌರವಿಸಿದ ಸಂಘಟನೆಗಳಿಗೆ ಕೃತಜ್ಞತೆಗಳು.

ಪ್ರಕಾಶನ ಪ್ರಕಟಿಸಿದ ಪುಸ್ತಕಗಳ ಪ್ರತಿಗಳು ಮಾರಾಟವಾಗಿರುವುದನ್ನು ನೋಡಿದರೆ ಓದುಗರು ತೋರಿಸಿರುವ ಪ್ರೀತಿ ಮತ್ತು ಆಸಕ್ತಿಯನ್ನು ನಾವಿಲ್ಲಿ ಸ್ಮರಿಸಲೇಬೇಕಾಗಿದೆ. ಇವೆಲ್ಲವುಗಳು ವೈಯಕ್ತಿಕ ಸಾಹಸದ ರೂಪದಲ್ಲಿರುವ ಮದಿಪು ಪ್ರಕಾಶನಕ್ಕೆ ಇನ್ನಿಲ್ಲದ ಭರವಸೆಯನ್ನು ತಂದುಕೊಟ್ಟಿವೆ. ಇಂತಹ ಭರವಸೆಯಿಂದಲೇ ತರುಣ ಸಂಶೋಧಕರಾಗಿರುವ ವಿಶ್ವನಾಥ ಬದಿಕಾನರ ಪ್ರೌಢ ಪ್ರಬಂಧವನ್ನು ಪ್ರಕಟಿಸುತ್ತಿದ್ದೇವೆ. ತೀರ ಅಲ್ಪ ಮೊತ್ತದ ಆರ್ಥಿಕ ಸಹಾಯ ಮತ್ತು ಪ್ರತಿಗಳ ಮಾರಾಟದ ಕೆಲಸದಲ್ಲಿ ತೋರಿಸುವ ಆಸಕ್ತಿ – ಕೇವಲ ಈ ಕಾರಣಗಳಿಗಾಗಿ ಬದಿಕಾನರು

ಮದಿಪು ಪ್ರಕಾಶನವನ್ನು ಆಯ್ದುಕೊಂಡಿರುವುದಕ್ಕೆ ವಿದ್ಯಾರ್ಥಿಸ್ನೇಹಿತ ಸಂಬಂಧ ದಲ್ಲಿರುವ ಆತ್ಮೀಯತೆಯೇ ಕಾರಣವಾಗಿದೆ. ಅವರ ಆತ್ಮೀಯತೆ ಮತ್ತು ವಿಶ್ವಾಸಕ್ಕೆ ಪ್ರತಿಯಾಗಿ ಮದಿಪು ಪ್ರಕಾಶನವು ಅವರ ಕೃತಿಯನ್ನು ಪ್ರಕಟನೆಗೆ ಎತ್ತಿಕೊಂಡಿದೆ ಎಂದರೂ ಸರಿಯೆ. ಅವರ ಮುಂದಿನ ಅಧ್ಯಯನ ಮತ್ತು ಬರವಣಿಗೆಗಳಿಗೆ ಈ ಪ್ರಕಟನೆಯು ಉತ್ತೇಜನ ನೀಡಲಿ ಎಂಬುದು ಪ್ರಕಾಶನದ ಆಶಯವಾಗಿದೆ.

ಶಿಷ್ಟ ಪರಿಶಿಷ್ಟ ಕೃತಿ ಪ್ರಕಟನೆಯ ಸಂದರ್ಭದಲ್ಲಿ ಬರೆದಿರುವ ಮಾತುಗಳನ್ನೇ ಮತ್ತೆ ಬರೆಯುತ್ತಿದ್ದೇವೆ. ಮದಿಪು ಪ್ರಕಾಶನಕ್ಕೆ ಹೇಳಿಕೊಳ್ಳುವಂತಹ ಮಾರಾಟದ ವ್ಯವಸ್ಥೆ ಇಲ್ಲ. ದೊಡ್ಡ ಪ್ರಮಾಣದ ಬಂಡವಾಳದ ಸಾಮರ್ಥ್ಯವೂ ಇಲ್ಲ. ಪ್ರಕಾಶನವು ಮುಖ್ಯವಾಗಿ ನಂಬಿಕೆಯಿಂದ ಆಶ್ರಯಿಸಿರುವುದು ಲೇಖಕರು ಮತ್ತು ಪ್ರಕಾಶಕರನ್ನು ನೇರವಾಗಿ ಸಂಪರ್ಕಿಸಿ ಪ್ರತಿಗಳನ್ನು ತರಿಸಿಕೊಳ್ಳುವ ಓದುಗರನ್ನು ಮಾತ್ರ. ಸ್ನೇಹಿತರು ಹಿತೈಷಿಗಳಾಗಿ ಐದೊ ಹತ್ತೊ ಪ್ರತಿಗಳನ್ನು ಮಾರಿಕೊಟ್ಟದ್ದೂ ಇದೆ. ಈ ಹಿಂದೆಯೂ ನೀಡಿರುವಂತೆ ಓದುಗರಿಗೆ ಸೂಕ್ತ ರಿಯಾಯಿತಿಯನ್ನು ನೀಡಿ ಪ್ರತಿಗಳನ್ನು ಒದಗಿಸಲು ಪ್ರಕಾಶನವು ಬದ್ಧವಾಗಿದೆ. ಮೊದಲೆರಡು ಕೃತಿಗಳನ್ನು ಓದುಗರು ಬರಮಾಡಿ ಕೊಂಡಿರುವುದಕ್ಕಿಂತ ಅಧಿಕ ಅಭಿಮಾನದಿಂದ ಈ ಕೃತಿಯನ್ನು ಸ್ವೀಕರಿಸುತ್ತಾರೆ ಎಂಬ ಆಶಯವನ್ನು ಮದಿಪು ಪ್ರಕಾಶನವು ಇಟ್ಟುಕೊಂಡಿದೆ.

ನಿಮಗೆಲ್ಲರಿಗೂ ಪ್ರೀತಿಪೂರ್ವಕ ವಂದನೆಗಳು.

೩–೩–೧೯೮೪
ಮಂಗಳ ಗಂಗೋತ್ರಿ

— ಪ್ರಕಾಶಕರು
ಮದಿಪು ಪ್ರಕಾಶನ

## ಪರಿವಿಡಿ

**ಸಂಕೇತ ಸೂಚಿ :**

೧. ಗೌ.ಕ.ಜ.ಕ. – ಗೌಡ ಕನ್ನಡದ ಜನಪದ ಕಥೆಗಳು

೨. ತು.ಜ.ಕ. (ವಿ) – ತುಳು ಜನಪದ ಕಥೆಗಳು
(ವಿವೇಕ ರೈ ಸಂಗ್ರಹ)

೩. ತು.ಜ.ಕ. (ರಾ) – ತುಳು ಜನಪದ ಕಥೆಗಳು
(ರಾಮಕೃಷ್ಣ ಆಚಾರ್ ಪಾಲ್ತಾಡಿ ಸಂಗ್ರಹ)

೪. ಕ.ಜ.ಕ. (ಸಂ) – ಕನ್ನಡ ಜನಪದ ಕಥೆಗಳು (ಸಂಧ್ಯಾರೆಡ್ಡಿ)

೫. ಕ.ಜ.ಕ. (ವೀ) – ಕಲಬುರಗಿ ಜಿಲ್ಲೆಯ ಜನಪದ ಕಥೆಗಳು
(ವೀರಣ್ಣ ದಂಡೆ)

೬. ಕ.ಜ.ಕ. (ರಾ) – ಕನ್ನಡ ಜನಪದ ಕಥಾ ವರ್ಗಗಳು
(ರಾಮಚಂದ್ರೇಗೌಡ ಹಿ.ಶಿ.)

# ಅಧ್ಯಾಯ – ೧

## ಪ್ರಸ್ತಾವನೆ

೧.೧ ಪ್ರವೇಶ

೧.೨ ಜನಪದ ಕಥೆಗಳಲ್ಲಿ ವರ್ಗ ಮತ್ತು ಆಶಯ

೧.೩ ಕನ್ನಡ ಮತ್ತು ತುಳುವಿನಲ್ಲಿ ವರ್ಗ ಮತ್ತು ಆಶಯ ಸೂಚಿಗಳು

೧.೪ ಪ್ರಕೃತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೫ ಅಧ್ಯಯನದ ವಿಧಾನ

## ೧.೧ ಪ್ರವೇಶ :

ಜಾನಪದ ಕ್ಷೇತ್ರದಲ್ಲಿ ಜನಪದ ಕಥೆಗಳ ಬಗ್ಗೆ ಅಪಾರವಾದ ಕೆಲಸ ನಡೆಯುತ್ತಿದೆ. ಜನಪದ ಕಥೆಗಳನ್ನು ವೈಜ್ಞಾನಿಕವಾಗಿ ಸಂಗ್ರಹಿಸುವುದರಿಂದ ತೊಡಗಿ ಅವು ಗಳನ್ನು ಬಗೆಬಗೆಯಲ್ಲಿ ವರ್ಗೀಕರಿಸುತ್ತಾ ವಿವಿಧ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗುತ್ತಿದೆ. ಅನೇಕ ಜಾನಪದ ಸಿದ್ಧಾಂತಗಳು ಕೂಡಾ ಜನಪದ ಕಥೆ ಗಳನ್ನು ಆಧರಿಸಿಯೇ ಹುಟ್ಟಿಕೊಂಡಿವೆ. ಪಾಶ್ಚಾತ್ಯ ದೇಶಗಳಲ್ಲಿ ನಡೆಯುತ್ತಿರುವ ಜನಪದ ಕಥೆಗಳ ಸಂಗ್ರಹ, ವರ್ಗೀಕರಣ ಮತ್ತು ವ್ಯಾಖ್ಯಾನಗಳನ್ನು ಗಮನದಲ್ಲಿರಿಸಿ ಕೊಂಡು ಭಾರತದಲ್ಲಿಯೂ ಜನಪದ ಕಥೆಗಳ ಸಂಗ್ರಹ, ವರ್ಗೀಕರಣ ಮತ್ತು ಅಧ್ಯಯನ ನಡೆಯುತ್ತಿದೆ.

ಭಾರತದಲ್ಲಿರುವ ವಿವಿಧ ಭಾಷೆಗಳು, ಜಾತಿಗಳು, ಪ್ರಾದೇಶಿಕ ಭಿನ್ನತೆಗಳು ಮತ್ತು ಸಾಂಸ್ಕೃತಿಕ ವೈಶಿಷ್ಟ್ಯ ಗಳಿಂದಾಗಿ ಇಲ್ಲಿನ ಜಾನಪದ ಸಾಮಗ್ರಿಗಳಿಗೆ ವಿಶೇಷ ಆಕರ್ಷಣೆ ಒದಗಿದೆ. ಪಾಶ್ಚಾತ್ಯ ಜಾನಪದ ವಿದ್ವಾಂಸರು ಭಾರತದ ಜಾನಪದ ಸಾಮಗ್ರಿಗಳ ಮಹತ್ವವನ್ನು ಅರಿತು ಕೊಂಡಿದ್ದರೂ ದೇಶೀಯ ವಿದ್ವಾಂಸರು ಅಷ್ಟಾಗಿ ಅದರ

ಮಹತ್ವವನ್ನು ತಿಳಿದಿಲ್ಲ. ಆದರೆ ಈಚಿನ ದಿನಗಳಲ್ಲಿ ವಿಶ್ವವಿದ್ಯಾನಿಲಯ ಮತ್ತು ಇತರೆಡೆಗಳಲ್ಲಿ ಜಾನಪದ ಅಧ್ಯಯನದ ಆಸಕ್ತಿ ಹೆಚ್ಚುತ್ತಿದೆ. ಈ ಆಸಕ್ತಿಯು ಜಾನಪದದ ಬಹುಮುಖ್ಯ ಪ್ರಕಾರವಾದ ಹಾಡುಗಳತ್ತಲೇ ಹೊರಳಿರುವುದು ಎದ್ದು ಕಾಣುವ ವಿಷಯವಾಗಿದೆ. ಈ ನಿಟ್ಟಿನಲ್ಲಿ ನೋಡಿದಾಗ ಭಾರತದಲ್ಲಿ ಜನಪದ ಕಥೆಗಳ ಬಗ್ಗೆ ನಡೆದ ಅಧ್ಯಯನ ಸ್ವಲ್ಪ ಮಟ್ಟಿಗೆ ನಿರಾಶೆ ಉಂಟುಮಾಡುತ್ತದೆ.

ಜಾನಪದವನ್ನು ವೈಜ್ಞಾನಿಕವಾಗಿ ವರ್ಗೀಕರಿಸಿದ ಆರ್. ಎಸ್. ಬಾಗ್ಸ್ ಎಂಬ ವಿದ್ವಾಂಸ ಜನಪದ ಕಥೆಗಳನ್ನು ಸಾಹಿತ್ಯಿಕ ವರ್ಗಕ್ಕೆ ಸೇರಿಸಿದ್ದಾನೆ (೧೯೪೯–೧೧೪೨). ಅವನ ಪ್ರಕಾರ ತಲೆಮಾರಿನಿಂದ ತಲೆಮಾರಿಗೆ ವಾಗ್‌ರೂಪದಲ್ಲಿ ಬಂದ ಕಥಾ ನಿರೂಪಣೆಯೇ ಜನಪದ ಕಥೆ. ಗದ್ಯರೂಪದಲ್ಲಿರುವ ಮೌಖಿಕ ಸಂಪ್ರದಾಯದ ಜನಪದ ಕಥೆಗಳನ್ನು ಅವನು ಮತ್ತೆ ಪುರಾಣ, ಐತಿಹ್ಯ ಮತ್ತು ಕಥೆಗಳೆಂದು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದಾನೆ. ಆತ ಕೊಡುವ ವಿವರಣೆಯಂತೆ, 'ಕಥೆ ಘಟನೆಗಳ ಸರಳವಾದ ಅಥವಾ ಸಂಕೀರ್ಣವಾದ ರಚನೆಯಾಗಿದ್ದು ಅದು ನಿರ್ದಿಷ್ಟ ವ್ಯಕ್ತಿ, ಕಾಲ, ಸ್ಥಳಗಳನ್ನು ಅವಲಂಬಿಸಿರುವದಿಲ್ಲ'. ಈ ಗುಣದಿಂದಾಗಿಯೇ ಅದು ಪುರಾಣ ಮತ್ತು ಐತಿಹ್ಯಗಳಿಂದ ಬೇರೆಯಾಗುತ್ತದೆ.

ಆದರೆ ಎಷ್ಟೋ ಮಂದಿ ವಿದ್ವಾಂಸರು 'ಜನಪದ ಕಥೆ' ಎನ್ನುವ ಪದವನ್ನು 'ಸಾಂಪ್ರದಾಯಿಕ ಗದ್ಯ ಕಥೆ' ಎನ್ನುವ ವಿಶಾಲ ಅರ್ಥದಲ್ಲಿ ಗ್ರಹಿಸಿದ್ದಾರೆ'[೧] (Thompson Stith ೧೯೫೧.೪). ಈ ವಿವರಗಳು ಬಾಗ್ಸ್ ಹೇಳುವ ಗದ್ಯ ನಿರೂಪಣೆ (Pross Narrative)ಗೆ ಸಮಾನವಾಗಿದೆ. ಆದರೆ ಥಾಮ್ಸನ್ನರು ಗದ್ಯ ನಿರೂಪಣೆ ಎಂಬ ಪದವನ್ನು ಜನಪದ ಕಥೆ ಎನ್ನುವ ಪದ ಸಂವಾದಿಯಾಗಿ ಬಳಸಿದ್ದಾರೆ. ಇದು ಸಾಕಷ್ಟು ಗೊಂದಲಗಳಿಗೆ ಎಡೆಮಾಡಿಕೊಟ್ಟಿದೆ. ಮುಖ್ಯವಾಗಿ ಥಾಮ್ಸನ್ನರ ವಾದ ಜನಪದ ಕಥೆಗೂ ಗದ್ಯ ನಿರೂಪಣೆಗೂ ಇರುವ ವ್ಯತ್ಯಾಸವನ್ನು ಅಳಿಸಿಹಾಕುತ್ತದೆ. ವಾಸ್ತವವಾಗಿ ಗದ್ಯ ನಿರೂಪಣೆ ಎನ್ನುವ ಪದದ ವ್ಯಾಪ್ತಿ ಜನಪದ ಕಥೆಗಿಂತ ಹೆಚ್ಚು ವ್ಯಾಪಕವಾದುದು. ಈ ಅರಿವಿಲ್ಲದುದರಿಂದ ಥಾಮ್ಸನ್ನರು ತಮ್ಮ ಪ್ರಖ್ಯಾತವಾದ 'ದಿ ಫೋಕ್ ಟೇಲ್' (The Folktale) ಎನ್ನುವ ಗ್ರಂಥದಲ್ಲಿ ಪುರಾಣ ಐತಿಹ್ಯಗಳನ್ನು ಜನಪದ ಕಥೆಯ ಪ್ರಕಾರಗಳೆಂದೇ ವಿಶ್ಲೇಷಿಸಿದ್ದಾರೆ. (೧೯೫೧:೪) ಈಚಿನ ದಿನಗಳಲ್ಲಿ ಈ ಗೊಂದಲ ಮಾಯವಾಗಿದ್ದು ಜನಪದ ಕಥೆಯನ್ನು ಪುರಾಣ ಮತ್ತು ಐತಿಹ್ಯಗಳಿಗಿಂತ ಭಿನ್ನವಾಗಿ ನಿರ್ವಚಿಸಿಕೊಳ್ಳಲಾಗಿದೆ.

ಇಂಗ್ಲೀಷನಲ್ಲಿ ಜನಪದ ಕಥೆಗೆ 'Folktale' ಎಂಬ ಪದವನ್ನು ಬಳಸಲಾಗಿದ್ದರೂ, ಕೆಲವು ಬಾರಿ 'Fairy Tale' ಎಂಬ ಪದವನ್ನು ಬಳಸಲಾಗಿದೆ. ಈಚಿನ ದಿನಗಳಲ್ಲಿ ಈ ಗೊಂದಲವನ್ನು ನಿರಾಕರಿಸಿ 'Fairy Tale' ಜನಪದ ಕಥೆಯ ಒಂದು ಪ್ರಕಾರ ಮಾತ್ರ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.[೨] ಹೀಗೆ ಜನಪದ ಕಥೆ ಎಂಬ

ಪದದ ವ್ಯಾಪ್ತಿ ಮತ್ತು ಲಕ್ಷಣದ ಬಗೆಗೆ ಸಾಕಷ್ಟು ಚರ್ಚೆಗಳು ನಡೆದಿವೆ. ಬಾಗ್ಸ್ ಅವರು ಈ ಎಲ್ಲಾ ಚರ್ಚೆಗಳನ್ನು ಕೊನೆಗೊಳಿಸಿ, ಶಾಸ್ತ್ರೀಯ ವ್ಯಾಖ್ಯಾನವನ್ನು ನೀಡಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಬಾಗ್ಸ್ ಅವರ ವಿವರಣೆಯನ್ನೇ ಗಮನದಲ್ಲಿ ಇರಿಸಿಕೊಳ್ಳಲಾಗಿದೆ.

ಕನ್ನಡದಲ್ಲಿ 'ಜನಪದ ಕಥೆ' ಎಂಬ ಪದ ವಿದ್ವಾಂಸರಲ್ಲಿ ಬಳಕೆಯಾಗುತ್ತಿದ್ದರೂ, ಜನರಲ್ಲಿ ಬಳಕೆಯಲ್ಲಿರುವ ಪದವೆಂದರೆ 'ಅಜ್ಜಿ ಕಥೆ', 'ಹೂಂಗುಡುವ ಕಥೆ', 'ಕಟ್ಟು ಕಥೆ', 'ಸುಳ್ಳು ಕಥೆ' ಮೊದಲಾದ ಹೆಸರುಗಳು ಬಳಕೆಯಲ್ಲಿದ್ದರೂ ಅಜ್ಜಿ ಕಥೆ ಎಂಬುದೇ ಹೆಚ್ಚು ಜನಪ್ರಿಯ. ಅಜ್ಜಿಯು ತನ್ನ ಮೊಮ್ಮಕ್ಕಳಿಗೆ ಹೇಳುವ ಕಥೆ ಎಂಬ ಅರ್ಥದಲ್ಲಿ 'ಅಜ್ಜಿ ಕಥೆ' ಎಂಬ ಪದ ಬಳಕೆಯಲ್ಲಿದೆ. ಕಥೆಯನ್ನು ಹೇಳುವಾಗ ಕಥೆ ಕೇಳುವವರು ಹುಂ…ಗುಡಬೇಕಾಗಿರುವುದರಿಂದ 'ಹೂಂಗುಟ್ಟುವ ಕಥೆ' ಎಂಬ ಪದ ಬಳಕೆಗೆ ಬಂದಿದೆ. ಕಲ್ಪನೆಯಿಂದ ಹೆಣೆದ ಸಂಗತಿಗಳೇ ಪ್ರಧಾನವಾಗಿರುವುದರಿಂದ ಕಟ್ಟುಕಥೆ ಎಂಬ ಪದವು ಬಳಕೆಗೆ ಬಂದಿದೆ.

ಕನ್ನಡದ ಸಂದರ್ಭದಲ್ಲಿ ಈ ಬಗೆಯ ಕಥೆಗಳ ಸಂಗ್ರಹ ಕಾರ್ಯಕ್ಕೆ ಪ್ರಚೋದನೆ ನೀಡಿದ್ದು ಕ್ರೈಸ್ತ ಮಿಷನರಿಗಳು ಮತ್ತು ಪಾಶ್ಚಾತ್ಯ ವಿದ್ವಾಂಸರು.[೨] ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಜಾನಪದ ಅಧ್ಯಯನ ಆರಂಭವಾದ ಮೇಲೆ ಅದಕ್ಕೊಂದು ಖಚಿತ ರೂಪ ಪ್ರಾಪ್ತಿಸಿತು.

### ೧.೨ ಜನಪದ ಕಥೆಗಳಲ್ಲಿ ವರ್ಗ ಮತ್ತು ಆಶಯ :

ಜನಪದ ಕಥೆಗಳನ್ನು ವರ್ಗೀಕರಿಸುವ ವಿವಿಧ ಬಗೆಗಳಲ್ಲಿ ವರ್ಗ ಮತ್ತು ಆಶಯಸೂಚಿಗಳ ಸಿದ್ಧತೆಯೂ ಒಂದು. ಜನಪದ ಕಥೆ ವಿಶ್ವವ್ಯಾಪಕ ಜನಪದ ಪ್ರಕಾರವಾಗಿದ್ದು, ಅಚ್ಚರಿಗೊಳಿಸುವಷ್ಟು ವೈವಿಧ್ಯಮಯವಾದ, ವಿಶಾಲವಾದ ಕಥಾ ರಾಶಿಯನ್ನು ಹೊಂದಿದೆ. ಅಷ್ಟೊಂದು ವಿಪುಲ ಕಥಾ ಸಾಮಗ್ರಿ ಪ್ರತಿಯೊಬ್ಬ ಜಾನಪದ ಅಭ್ಯಾಸಕನಿಗೂ ದೊರೆಯಬೇಕಾದರೆ ಅದನ್ನು ಒಂದು ಕ್ರಮಬದ್ಧವಾದ, ಅಡಕವಾದ ವರ್ಗೀಕರಣದಲ್ಲಿ ಸಂಗ್ರಹಿಸಬೇಕಾಗುತ್ತದೆ. ಮಂಡಿಸಬೇಕಾಗುತ್ತದೆ. ವರ್ಗ ಮತ್ತು ಆಶಯಗಳಿಗನುಸಾರವಾಗಿ ಕತೆಗಳನ್ನು ವರ್ಗೀಕರಿಸುವುದಕ್ಕೆ ನಾಂದಿಯಾಯಿತು. ಆರ್ನೆ ಥಾಮ್ಸನ್ನರು ವರ್ಗ ಮತ್ತು ಆಶಯ ಕಲ್ಪನೆಯನ್ನು ಕಥಾ ಪ್ರಪಂಚಕ್ಕೆ ಅನ್ವಯಿಸಿದ ಕಾರಣ ಪುರುಷರು.

#### ೧.೨.೧ ವರ್ಗ :

ಥಾಮ್ಸನ್ನರ ಪ್ರಕಾರ 'ವರ್ಗ' ಎಂದರೆ ಸ್ವತಂತ್ರ ಅಸ್ತಿತ್ವದಲ್ಲಿ ಇರಬಹುದಾದ ಸಾಂಪ್ರದಾಯಿಕ ಕಥೆ. ಇದು ಸ್ವಯಂಪೂರ್ಣವಾಗಿದ್ದು ತನ್ನ ಅರ್ಥಕ್ಕಾಗಿ

ಮತ್ತೊಂದು ಕಥೆಯನ್ನು ಅವಲಂಬಿಸಿರುವುದಿಲ್ಲ. ಇಂತಹ ಪ್ರತಿಯೊಂದು ವರ್ಗದಲ್ಲಿಯೂ ಒಂದು ಅಥವಾ ಹಲವಾರು ಆಶಯಗಳಿರುತ್ತವೆ.[೪] ಈ ಹಿನ್ನೆಲೆಯಲ್ಲಿ ಆರ್ನೆ ಥಾಮ್ಸನ್ನರು ಜನಪದ ಕಥೆಯ ವರ್ಗಗಳು (Types of the Folktale) ಎಂಬ ಬೃಹತ್ ಗ್ರಂಥವನ್ನು ಸಿದ್ಧಪಡಿಸಿದರು. ಇದರಿಂದಾಗಿ ಜಗತ್ತಿನ ಕಥೆಗಳನ್ನು ತೌಲನಿಕವಾಗಿ ಅಭ್ಯಸಿಸಲು ಸಾಧ್ಯವಾಯಿತು. ಕಥೆಗಳನ್ನು ಐದು ವಿಭಾಗಗಳನ್ನಾಗಿ ಮಾಡಿಕೊಂಡ ಅವರು ಪ್ರತಿಯೊಂದು ವರ್ಗದ ಪಕ್ಕದಲ್ಲಿ ಅವಕ್ಕೆ ಸಂಬಂಧಿಸಿದ ಇನ್ನೊಂದು ವರ್ಗವನ್ನು ಕೊಟ್ಟಿದ್ದಾರೆ. ಯಾವ ಕಥೆ ಯಾವ ದೇಶದ್ದು, ಯಾವ ಗ್ರಂಥದ್ದು ಎಂಬ ವಿವರವನ್ನು ನೀಡಿದ್ದಾರೆ. ಕಥೆಗಳಿಗೆ ೧ ರಿಂದ ೨೪೯೯ರ ವರೆಗೆ ಸೂಚಿ ಅಂಕಗಳನ್ನು ನೀಡಿದ್ದಾರೆ. ಕಥೆಯನ್ನು ಅಭ್ಯಸಿಸುವವರಿಗೆ ಈ ರೀತಿಯ ವರ್ಗ ಸೂಚಿಯಿಂದ ಒಂದು ಕಥೆಯ ನಿಖರವಾದ ಪಾಠ, ಅದು ತಳೆದಿರುವ ಭಿನ್ನ ರೂಪಗಳು, ಅದು ಪ್ರಚಲಿತವಿರುವ ಪ್ರದೇಶ ಇತ್ಯಾದಿ ಅನೇಕ ಉಪಯುಕ್ತ ಅಂಶಗಳು ದೊರೆಯುವಂತಾಯಿತು. ಭಾಷಾ ಭೇದದ ಕಾರಣದಿಂದ ಅಪರಿಚಿತವಾಗಿ ಉಳಿದಿದ್ದ ಬೇರೆ ಬೇರೆ ದೇಶಗಳ ಕಥಾ ಸಂಪತ್ತು ಆರ್ನೆ ಥಾಮ್ಸನ್ನರ ಪ್ರಯತ್ನದಿಂದ ಎಲ್ಲರಿಗೂ ಒದಗುವಂತಾಯಿತು.

ಇಷ್ಟಿದ್ದರೂ ಆರ್ನೆ ಥಾಮ್ಸನ್ನರ ಈ ವರ್ಗ ಸೂಚಿ ಸಮಗ್ರವಾಗಿ ಇಲ್ಲದಿರುವುದೇ ಅದರ ಪ್ರಧಾನ ದೋಷ. ಥಾಮ್ಸನ್ನರು ವರ್ಗ ಸೂಚಿಯನ್ನು ತಯಾರಿಸುವ ಕಾಲಕ್ಕೆ ಇನ್ನೂ ಜನಪದ ಕಥೆಗಳ ಸಂಗ್ರಹ ವ್ಯಾಪಕವಾಗಿ ನಡೆದಿರಲಿಲ್ಲ. ಜಗತ್ತಿನ ಎಲ್ಲ ಪ್ರದೇಶದಿಂದಲೂ ಪ್ರಾತಿನಿಧಿಕ ಕಥಾಸಂಗ್ರಹಗಳು ಬಂದಿರಲಿಲ್ಲ. ಹಾಗಾಗಿ ಈ ವರ್ಗ ಸೂಚಿಯಲ್ಲಿ ಕೊಟ್ಟಿರುವ ಭಿನ್ನ ಪಾಠಗಳು ಸೀಮಿತವಾಗಿವೆ. ಹೀಗಾಗಿ ಇಂದು ಆರ್ನೆ ಥಾಮ್ಸನ್ನರ ವರ್ಗಸೂಚಿ ಒಂದು ಮಾರ್ಗದರ್ಶಕ ವರ್ಗಸೂಚಿಯಾಗಿ ಮಾತ್ರ ಸಹಕರಿಸುತ್ತದೆಯೇ ವಿನಹ ಆಕರ ಸಾಮಗ್ರಿಯಾಗಿ ಅಲ್ಲ. ಈಚಿನ ದಿನಗಳಲ್ಲಿ ಕಥನ ವರ್ಗದ ಕಲ್ಪನೆಯನ್ನು ಅನೇಕರು ಒಪ್ಪಿಕೊಳ್ಳುತ್ತಿಲ್ಲವಾದರೂ ತೌಲನಿಕ ಅಧ್ಯಯನಕ್ಕೆ ಈ ಬಗೆಯ ಕೆಲಸಗಳು ಸಹಕಾರಿಯಾಗುವುದನ್ನು ಮರೆಯುವಂತಿಲ್ಲ.

### ೧.೨.೨ ಆಶಯ :

ಜಾನಪದದ ಒಂದು ಅಂಶವನ್ನು ವಿಶ್ಲೇಷಣಾತ್ಮಕವಾಗಿ ಒಳಗೊಂಡಿರುವ ಯಾವುದೇ ವಿಷಯವಾಗಿರಲಿ ಅದನ್ನು 'ಆಶಯ'ವೆಂದು ವಿಶ್ಲೇಷಿಸಲಾಗುತ್ತದೆ. ಜನಪದ ಕಲೆಯಲ್ಲಿ ವಿನ್ಯಾಸ ಪ್ರಕಾರಗಳಿಗೆ ಸಂಬಂಧಿಸಿದ ಆಶಯಗಳಿರುತ್ತವೆ. ಜನಪದ ಸಂಗೀತ, ಹಾಡು, ಕಥೆಗಳಲ್ಲಿ ಅವುಗಳ ನಿರೂಪಣೆ, ರಚನೆಗೆ ಸಂಬಂಧಿಸದ ಆಶಯಗಳಿರುತ್ತವೆ. ಜಾನಪದದ ಯಾವುದೇ ಪ್ರಕಾರದ ಕನಿಷ್ಠ ಘಟಕವಾಗಿರುವ ಈ ಆಶಯಗಳು ಆಯಾ ಪ್ರಕಾರಗಳ ಸ್ವರೂಪವನ್ನು ನಿರ್ಧರಿಸುತ್ತವೆ. ಒಂದು

ಪ್ರಕಾರವನ್ನು ಮತ್ತೊಂದು ಪ್ರಕಾರದಿಂದ ಬೇರ್ಪಡಿಸುವುದಕ್ಕಾಗಲೀ, ಒಂದು ಪ್ರಕಾರವನ್ನೇ ಮತ್ತೆ ಕೆಲವು ವರ್ಗಗಳಾಗಿ ವಿಂಗಡಿಸುವುದಕ್ಕಾಗಲೀ ಆಶಯಗಳೇ ಸಹಕರಿಸುತ್ತವೆ. ಸ್ಟಿತ್ ಥಾಮ್ಸನ್ನರು ಕಥೆಗಳನ್ನು ಗಮನದಲ್ಲಿರಿಸಿಕೊಂಡು 'Motif Index of Folk literature' ಎಂಬ ಆರು ಸಂಪುಟಗಳ ಬೃಹತ್ ಗ್ರಂಥವೊಂದನ್ನು ಸಿದ್ಧಪಡಿಸಿದ್ದಾರೆ (೧೯೬೪). ಥಾಮ್ಸನ್ನರ ಪ್ರಕಾರ, 'ಆಶಯ' ಎಂದರೆ 'ಪರಂಪರೆಯಲ್ಲಿ ಉಳಿದುಬರುವಂತಹ ಕಥೆಯ ಕನಿಷ್ಠ ಘಟಕ'.[೫] ಆಶಯ ಎನಿಸಿಕೊಳ್ಳಬೇಕಾದರೆ ಅದರಲ್ಲಿ ಏನೋ ಒಂದು ಅಸಾಮಾನ್ಯತೆ, ವಿಶೇಷತೆ ಇರಬೇಕಾಗುತ್ತದೆ. ಥಾಮ್ಸನ್ನರ ಪ್ರಕಾರ ಈ ವಿಶೇಷತೆಯು ಪಾತ್ರಗಳು, ವಸ್ತುಗಳು ಮತ್ತು ಬಿಡಿ ಘಟನೆಗಳಲ್ಲಿ ಕಾಣಸಿಗುತ್ತವೆ. ಜಗತ್ತಿನಾದ್ಯಂತ ಇರುವ ಕಥೆಗಳ ಆಶಯದಲ್ಲಿ ಹೀಗಾಗಿಯೇ ಅಪಾರ ಸಾಮ್ಯತೆಗಳು ಕಾಣಿಸಿಕೊಳ್ಳುತ್ತವೆ. ಒಟ್ಟು ಆಶಯವನ್ನು ೨೩ ಒಳ ವಿಭಾಗಗಳನ್ನಾಗಿ ಮಾಡಿಕೊಂಡ ಥಾಮ್ಸನ್ನರು ಅದಕ್ಕೆ ಇಂಗ್ಲೀಷ್ ವರ್ಣಮಾಲೆಯ ಹೆಸರುಗಳನ್ನು ನೀಡಿದ್ದಾರೆ. ಇಂಗ್ಲೀಷ್ ಅಕ್ಷರಗಳು I.O.U. ಗಳನ್ನು ಬಿಟ್ಟಿದ್ದಾರೆ.

### ೧.೩ ಕನ್ನಡ ಮತ್ತು ತುಳುವಿನಲ್ಲಿ ಆಶಯ ಮತ್ತು ವರ್ಗ ಸೂಚಿಗಳು :

ಭಾರತದಲ್ಲಿ ಜನಪದ ಕಥೆಗಳ ವರ್ಗ ಮತ್ತು ಆಶಯ ಸೂಚಿಗಳ ಸಿದ್ಧತೆ ಹೆಚ್ಚು ತೀವ್ರವಾಗಿ ನಡೆದಿಲ್ಲ. ಆದರೆ ಕನ್ನಡ ಮತ್ತು ತುಳುವಿನಲ್ಲಿ ಅಂತಹ ಕೆಲವು ಪ್ರಯತ್ನಗಳು ನಡೆದಿವೆ. ಅವು ಕೆಳಗಿನಂತಿವೆ:

ಜೀ. ಶಂ. ಪರಮಶಿವಯ್ಯ ಅವರು ತಮ್ಮ 'ಕನ್ನಡ ಜನಪದ ಕಥೆಗಳು' (೧೯೭೦) ಎಂಬ ಸಂಗ್ರಹದ ಪ್ರಸ್ತಾವನೆಯಲ್ಲಿ ಪ್ರಪಂಚದಾದ್ಯಂತ ಪ್ರಚಲಿತದಲ್ಲಿರುವ ೨೫ ಕಥಾವರ್ಗಗಳಿಗೆ ಕನ್ನಡ ಜನಪದ ಕಥೆಗಳನ್ನು ಉದಾಹರಣೆಯಾಗಿ ನೀಡಿದ್ದಾರೆ. ಇದುವೇ ಕನ್ನಡದಲ್ಲಿ ನಡೆದ ಶಾಸ್ತ್ರೀಯ ಪ್ರಯತ್ನದ ಮೊದಲ ಹೆಜ್ಜೆ ಎನ್ನಬಹುದು.

ಕೆ. ಆರ್. ಸಂಧ್ಯಾರೆಡ್ಡಿ ಅವರು 'ಕನ್ನಡ ಜನಪದ ಕಥೆ'ಗಳು ಎಂಬ ವಿಷಯವನ್ನು ಕುರಿತು, ಸಿ.ಪಿ.ಕೆ. ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ, ೧೯೮೦ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪಡೆದಿದ್ದಾರೆ. ಈ ಪ್ರಬಂಧ ೧೯೮೨ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರಿಂದ ಪ್ರಕಟವೂ ಆಗಿದೆ. ಈ ಪ್ರಬಂಧದಲ್ಲಿ ಆವರೆಗೆ ಇಂಗ್ಲೀಷ್‌ನಲ್ಲಿ ಬಂದ ಅಧ್ಯಯನಗಳನ್ನು ಅವಲೋಕಿಸಿದ್ದಾರೆ. ಕನ್ನಡದಲ್ಲಿ ಸಂಗ್ರಹವಾದ ೨೨ ಕಥಾ ಸಂಕಲನಗಳನ್ನು ಸಂಕ್ಷಿಪ್ತವಾಗಿ ವರ್ಗಸೂಚಿಗೆ ಬಳಸಿಕೊಂಡಿದ್ದಾರೆ.

ಜೀ. ಶಂ. ಪರಮಶಿವಯ್ಯ ಅವರ ಮಾರ್ಗದರ್ಶನದಲ್ಲಿ ಹಿ. ಶಿ. ರಾಮಚಂದ್ರೇಗೌಡ ಅವರು – 'ಕನ್ನಡ ಜನಪದ ಕಥಾವರ್ಗಗಳು' ಎಂಬ ವಿಷಯದ ಮೇಲೆ ಸಂಶೋಧನೆ ನಡೆಸಿ, ಮೈಸೂರು ವಿಶ್ವವಿದ್ಯಾಲಯದಿಂದ ೧೯೮೨ ರಲ್ಲಿ ಪಿಎಚ್.ಡಿ.

ಪಡೆದಿದ್ದಾರೆ. ಈ ಅಪ್ರಕಟಿತ ಪ್ರಬಂಧವಲ್ಲಿ ೧೬೭ ಮುಖ್ಯ ಕಥಾವರ್ಗಗಳೂ. ೨೨೬ ಸಹ ಕಥಾವರ್ಗಗಳೂ ಮತ್ತು ೧೧೧ ಕನ್ನಡ ಪ್ರಾದೇಶಿಕ ವರ್ಗಗಳನ್ನೂ ಗುರುತಿಸಿದ್ದಾರೆ.

ವೀರಣ್ಣ ದಂಡೆಯುವರು 'ಕಲಬುರ್ಗಿ ಜಿಲ್ಲೆಯ ಜನಪದ ಕಥೆಗಳ ಆಶಯ ಮತ್ತು ಮಾದರಿ ಸೂಚಿಗಳು' ಎಂಬ ವಿಷಯ ಕುರಿತು ಬಿ. ಬಿ. ಹೆಂಡಿಯವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ೧೯೮೩ ರಲ್ಲಿ ಪಿಎಚ್.ಡಿ. ಪಡೆದಿದ್ದಾರೆ. ಈ ಅಭ್ಯಾಸ ಪ್ರಾದೇಶಿಕ ಕಥೆಗಳನ್ನು ಕುರಿತದ್ದಾದುದರಿಂದ ಇಲ್ಲಿನ ಕಥೆಗಳನ್ನು ನೋಡುವ ದೃಷ್ಟಿ ವಿಶಿಷ್ಟವಾಗಿದೆ. ಪ್ರಾದೇಶಿಕ ಮಟ್ಟದಲ್ಲಿ ಕಥೆಗಳ ವಿವರವಾದ ಸಾಂಸ್ಕೃತಿಕ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ. ಇದೊಂದು ಹೊಸ ಪ್ರಯೋಗ. ಕನ್ನಡದ ಶಾಸನಗಳು ಕೊಡುವ ಅನೇಕ ಮಹತ್ವದ ಸಂಗತಿಗಳಿಗೂ ಮಿಕ್ಕಿದ ಅನೇಕ ಸಾಂಸ್ಕೃತಿಕ ದಾಖಲೆಗಳನ್ನು ಕಥೆಗಳು ಕೊಡಬಲ್ಲವು ಎಂಬುವನ್ನು ಇಲ್ಲಿ ಕಾಣಬಹುದು. ಥಾಮ್ಸನ್ನರ 'ಆಶಯಸೂಚಿ' ಮತ್ತು ಆರ್ನೆ ಥಾಮ್ಸನ್ನರ 'ವರ್ಗಸೂಚಿ'ಗಳ ಹಿನ್ನೆಲೆಯಲ್ಲಿ ಇಲ್ಲಿನ ಕಥೆಗಳನ್ನು ತೌಲನಿಕವಾಗಿ ನೋಡಲಾಗಿದೆ. ಸುಮಾರು ೫೦೦ ಕಥೆಗಳನ್ನು ಆಧಾರವಾಗಿಟ್ಟುಕೊಂಡು, ಆರ್ನೆ ಥಾಮ್ಸನ್ನರ ವರ್ಗಸೂಚಿಯಲ್ಲಿ ದೊರೆಯುವ ೧೫೫ ವರ್ಗಗಳಲ್ಲದೆ, ೮೭ ಹೊಸ ವರ್ಗಗಳನ್ನು ಗುರುತಿಸಿಕೊಳ್ಳಲಾಗಿದೆ. ಹೀಗೆ ಒಟ್ಟು ೨೪೨ ವರ್ಗಗಳನ್ನು ಅನೇಕ ಪಾಠಗಳನ್ನು ಗಮನಿಸಿ ಶಾಸ್ತ್ರೀಯ ದೃಷ್ಟಿಯಿಂದ ವರ್ಗಗಳನ್ನು ರಚಿಸಿಕೊಂಡಿದ್ದಾರೆ. ಸುಮಾರು ೪೦೦ ಪುಟಗಳ ಸುದೀರ್ಘ ಆಶಯ ಸೂಚಿಯನ್ನು ತಯಾರಿಸಿದ್ದು, ಅವುಗಳಲ್ಲಿ ೧೩೦೦ ಆಶಯಗಳಿವೆ. ಈ ಕೃತಿ ಪ್ರಕಟವಾಗದೇ ಇರುವುದರಿಂದ ಮುಂದಿನ ಅಧ್ಯಯನ ಕಾರರಿಗೆ ತೊಂದರೆಯಾಗಿದೆ.

ದಂಡೆಯವರು ತಮ್ಮ ಕೃತಿಯಲ್ಲಿ ವರ್ಗಕ್ಕೆ 'ಮಾದರಿ' ಎಂಬ ಪದವನ್ನು ಬಳಸಿಕೊಂಡಿದ್ದಾರೆ.

ಬಿ. ಎ. ವಿವೇಕ ರೈಯವರು 'ತುಳು ಜನಪದ ಸಾಹಿತ್ಯ' ಎಂಬ ವಿಷಯದ ಕುರಿತು ಹಾ. ಮಾ. ನಾಯಕರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ, ಪಿಎಚ್.ಡಿ. ಪದವಿ ಪಡೆದಿದ್ದಾರೆ. ಈ ಮಹಾಪ್ರಬಂಧವು ೧೯೮೫ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಪ್ರಕಟವೂ ಆಗಿದೆ. ಇದು ಜನಪದ ಮತ್ತು ಮಾನವ ವಿಜ್ಞಾನದ ಹಿನ್ನೆಲೆಯಲ್ಲಿ ಆದಂತಹ ಅಧ್ಯಯನ ಕೆಲಸ. ಒಟ್ಟು ಆರು ಅಧ್ಯಾಯಗಳಿರುವ ಈ ಮಹಾಪ್ರಬಂಧವಲ್ಲಿ, ಮೂರನೇ ಅಧ್ಯಾಯ ತುಳು ಜನಪದ ಕಥೆಗಳ ವರ್ಗ ಮತ್ತು ಆಶಯ ಸೂಚಿಯನ್ನು ಕುರಿತಾಗಿದೆ. ಅಲ್ಲಿ ೫೦ ತುಳು ಜನಪದ ಕಥೆಗಳನ್ನು ಆಧರಿಸಿಕೊಂಡು ಅವುಗಳ ವರ್ಗ ಮತ್ತು ಆಶಯಗಳನ್ನು ಗುರುತಿಸಲಾಗಿದೆ.

ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ 'ತುಳುವರ ಜನಪದ ಕಥೆಗಳು' (೧೯೮೭) ತುಳುನಾಡಿನ ಜನಪದ ಕಥೆಗಳ ವೈವಿಧ್ಯತೆಯನ್ನು ಸಮರ್ಪಕವಾಗಿ ತೋರಿಸಿಕೊಡುವ ಒಂದು ಮುಖ್ಯ ಸಂಕಲನ. ಈ ಸಂಕಲನದಲ್ಲಿ ೧೩ ಕಥೆಗಳಿವೆ. ಸಂಕಲನದ ಪ್ರಸ್ತಾವನೆ ಬರೆದ ವಿವೇಕ ರೈಯವರು ಈ ಕಥೆಗಳ ವರ್ಗವನ್ನು ಗುರುತಿಸಿದ್ದಾರೆ.

ಹೀಗೆ ಒಟ್ಟು ಆರು ವರ್ಗಸೂಚಿಗಳು ಕನ್ನಡದಲ್ಲಿ ಪ್ರಕಟವಾಗಿವೆ. ಕನ್ನಡದಲ್ಲಿ ಮತ್ತು ತುಳುವಿನಲ್ಲಿ ಅಸ್ತಿತ್ವದಲ್ಲಿರುವ ಕಥೆಗಳನ್ನು ಗಮನಿಸಿದರೆ ಈ ವರ್ಗ ಸೂಚಿಗಳು ಸಮಗ್ರವೂ ವ್ಯಾಪಕವೂ ಆಗಿಲ್ಲದಿರುವುದು ಎದ್ದುಕಾಣುತ್ತದೆ. ಜನಪದ ಕಥೆಗಳ ವಿಸ್ತೃತವಾದ ಸಂಗ್ರಹಗಳಿಲ್ಲದಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ.

### ೧.೪ ಪ್ರಕೃತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಕನ್ನಡ ಜನಪದ ಕಥೆಗಳ ವ್ಯಾಪ್ತಿ ಬಹಳ ವಿಸ್ತಾರವಾದುದು. ಅದಕ್ಕೊಂದು ಸಮಗ್ರವಾದ ವರ್ಗ ಮತ್ತು ಆಶಯ ಸೂಚಿಯನ್ನು ಸಿದ್ಧಪಡಿಸಲು ಅಪಾರವಾದ ಶ್ರಮ ಮತ್ತು ಆಳವಾದ ಅಭ್ಯಾಸ ಬೇಕಾಗುತ್ತದೆ. ಕನ್ನಡದ ಅನೇಕ ಉಪಭಾಷೆ ಗಳಲ್ಲಿಯೂ ಜನಪದ ಕಥೆಗಳು ಉಪಲಬ್ಧವಿದ್ದು, ಅವುಗಳನ್ನು ವರ್ಗ ಮತ್ತು ಆಶಯ ಸೂಚಿಗೆ ಸೇರಿಸಿಕೊಂಡರೆ ಅದರ ವ್ಯಾಪ್ತಿ ಇನ್ನೂ ವಿಸ್ತಾರವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡದ ಪ್ರತಿಯೊಂದು ಉಪಭಾಷೆ ಅಥವಾ ಪ್ರಾದೇಶಿಕ ವ್ಯತ್ಯಾಸಗಳನ್ನು ಅನುಸರಿಸಿ ಕೊಂಡು ಬೇರೆ ಬೇರೆ ವರ್ಗ ಮತ್ತು ಆಶಯ ಸೂಚಿಗಳು ಸಿದ್ಧವಾಗುವುದು ಪ್ರಾಯೋಗಿಕ ದೃಷ್ಟಿಯಿಂದ ಅಗತ್ಯ. ಇಂತಹ ಹಲವು ವರ್ಗ ಮತ್ತು ಆಶಯ ಸೂಚಿಗಳು ಸಿದ್ಧವಾದ ಅನಂತರ ಸಮಗ್ರವಾದ ಒಂದು ಗ್ರಂಥವನ್ನು ಸಿದ್ಧ ಪಡಿಸುವುದು ಸುಲಭ.

ಈ ಹಿನ್ನೆಲೆಯಲ್ಲಿ ಪ್ರಕೃತ ಅಧ್ಯಯನದಲ್ಲಿ ಸುಳ್ಯ ಪರಿಸರದಲ್ಲಿ ಜನಪ್ರಿಯ ವಾಗಿರುವ ಗೌಡ ಕನ್ನಡದಲ್ಲಿ ಉಪಲಬ್ಧವಿರುವ ಜನಪದ ಕಥೆಗಳನ್ನು ಸಂಗ್ರಹಿಸಿ ವರ್ಗ ಮತ್ತು ಆಶಯ ಸೂಚಿಯನ್ನು ಸಿದ್ಧಪಡಿಸಲು ಪ್ರಯತ್ನಿಸಲಾಗಿದೆ. ಈ ಕಥೆಗಳಲ್ಲಿ ಅಭ್ಯಸಿಸಬೇಕಾದ ಇತರ ಅನೇಕ ಅಂಶಗಳಿದ್ದರೂ ಅವನ್ನು ಇಲ್ಲಿ ಕೈ ಬಿಡಲಾಗಿದೆ. ಒಂದು ಪ್ರದೇಶದ ಕಥೆಗಳನ್ನು ಗಮನದಲ್ಲಿರಿಸಿಕೊಂಡಾಗ ಆ ಕಥೆಗಳ ಭಾಷಿಕ ಅಧ್ಯಯನ ನಡೆಸಲು ಸಾಧ್ಯವಿದೆ. ಅವುಗಳ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಇತರ ಪ್ರದೇಶದ ಕಥೆಗಳೊಡನೆ ಅವುಗಳನ್ನು ತೌಲನಿಕವಾಗಿ ಅಭ್ಯಸಿಸಬಹುದು. ಕಥೆಗಳ ಶೈಲಿ ಮತ್ತು ತಂತ್ರಗಳನ್ನು ವಿವರಿಸಲು ಸಾಧ್ಯವಿದೆ. ಕಥೆಗಳ ಸಾಹಿತ್ಯಿಕ ಸೌಂದರ್ಯ, ಸಾಂಸ್ಕೃತಿಕ ಮಹತ್ವಗಳನ್ನು ವಿವರಿಸಬಹುದು. ಜಾನಪದ ಸಿದ್ಧಾಂತಗಳ ಚೌಕಟ್ಟಿನಲ್ಲಿ ಪ್ರತಿಯೊಂದು ಕಥೆಗಳನ್ನು ವಿಶ್ಲೇಷಿಸಬಹುದು.

ಕಥೆಗಳ ಭಿನ್ನ ಪಾಠಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ನಡೆಸಬಹುದು. ಆದರೆ ಪ್ರಕೃತ ಅಧ್ಯಯನದಲ್ಲಿ ಆ ಬಗೆಯ ಪ್ರಯತ್ನವನ್ನು ಮಾಡಲಾಗಿಲ್ಲ. ಇದಕ್ಕೆ ಮುಖ್ಯವಾದ ಕಾರಣಗಳು ಎರಡು.

೧.೪.೧

ಪ್ರಕೃತ ಪ್ರೌಢ ಪ್ರಬಂಧವನ್ನು ಎಂ. ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಸಿದ್ಧಪಡಿಸಲಾಗಿದೆ. ಅಂದರೆ ಈ ಅಧ್ಯಯನಕ್ಕೆ ಸಿಗುವ ಕಾಲಾವಕಾಶ ತುಂಬಾ ಕಡಿಮೆ. ಸೀಮಿತವಾದ ಕಾಲವಧಿಯಲ್ಲಿ ಬೃಹತ್ ಸಂಪುಟವೊಂದನ್ನು ಸಿದ್ಧಪಡಿಸುವುದು ಅಸಾಧ್ಯವಾದ ಕೆಲಸ.

೧.೪.೨

ಗೌಡ ಕನ್ನಡದಲ್ಲಿ ಉಪಲಬ್ಧವಿರುವ ಜನಪದ ಕಥೆಗಳನ್ನು ಇದುವರೆಗೆ ಯಾರೂ ಸಂಗ್ರಹಿಸಿಲ್ಲ. ಹಾಗಾಗಿ ಅಧ್ಯಯನದ ಮೊದಲ ಹಂತವಾದ ಸಂಗ್ರಹ ಕಾರ್ಯಕ್ಕೆ ಸಾಕಷ್ಟು ಸಮಯ ಬೇಕಾಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ ಸಂಗ್ರಹ ಕಾರ್ಯವೇ ಇಲ್ಲಿ ಮಹತ್ವದ ಕೆಲಸವಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಕೃತ ವರ್ಗಸೂಚಿ ಮತ್ತು ಆಶಯಸೂಚಿಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಗೌಡ ಕನ್ನಡದಲ್ಲಿ ಲಭ್ಯವಿರುವ ಎಲ್ಲ ಜನಪದ ಕಥೆಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿಲ್ಲ. ವರ್ಗಸೂಚಿ ಮತ್ತು ಆಶಯಸೂಚಿಯನ್ನು ಸಿದ್ಧಪಡಿಸುವಾಗ ಸಂಶೋಧಕನು ಎದುರಿಸಬೇಕಾಗುವ ಸಮಸ್ಯೆಗಳನ್ನು ಪ್ರಾಯೋಗಿಕವಾಗಿ ಪರಿಶೀಲಿಸಿಕೊಳ್ಳಲು ಒಟ್ಟು ನೂರು ಕಥೆಗಳನ್ನು ಮಾತ್ರ ಗಮನಿಸಿಕೊಳ್ಳಲಾಗಿದೆ. ಈ ಕಥೆಗಳನ್ನು ಸುಳ್ಯ ಪೇಟೆಯ ಸುತ್ತಮುತ್ತ ಮಡಿಕೇರಿ ತಾಲೂಕಿನ ಪೆರಾಜೆ ಗ್ರಾಮದಿಂದ ಸಂಗ್ರಹಿಸಲಾಗಿದೆ. ಸುಳ್ಯ ಪರಿಸರದಲ್ಲಿ ಗೌಡಕನ್ನಡ ಮಾತನಾಡುವ ಜನರಿರುವುದು ಹೌದಾದರೂ ಅವರಲ್ಲಿ ಬಹಳ ಜನರಿಗೆ ತುಳು ಭಾಷೆಯೂ ಗೊತ್ತಿರುತ್ತದೆ. ಆದರೆ ಪೆರಾಜೆ ಗ್ರಾಮದಲ್ಲಿರುವ ಬಹಳ ಜನ ಗೌಡಕನ್ನಡದಲ್ಲಿ ಮಾತ್ರ ವ್ಯವಹರಿಸುತ್ತಾರೆ. ಮೇಲಾಗಿ ಆಡಳಿತಾತ್ಮಕವಾಗಿ ಪೆರಾಜೆ ಮಡಿಕೇರಿ ತಾಲೂಕಿಗೆ ಸೇರಿದರೂ ಸಾಂಸ್ಕೃತಿಕವಾಗಿ ಸುಳ್ಯದೊಂದಿಗೆ ಸಂಬಂಧ ಹೊಂದಿದೆ. ಹೀಗೆ ಪೆರಾಜೆಯನ್ನು ಒಳಗೊಂಡು ಸುಳ್ಯ ಪರಿಸರದ ಒಟ್ಟು ಹದಿಮೂರು ಗ್ರಾಮಗಳಿಂದ




ಕ್ಷೇತ್ರಕಾರ್ಯ ಮಾಡಿದ ಗ್ರಾಮಗಳು ಚಿತ್ರ ಸಂಖ್ಯೆ: ೧

ಇಲ್ಲಿನ ಕಥೆಗಳನ್ನು ಸಂಗ್ರಹಿಸಲಾಗಿದೆ (ಕಥೆಗಳನ್ನು ಸಂಗ್ರಹಿಸಿದ ಪ್ರದೇಶದ ವಿವರಗಳಿಗಾಗಿ ನೋಡಿ ಚಿತ್ರ ಸಂಖ್ಯೆ ೧).

**೧.೫ ಅಧ್ಯಯನದ ವಿಧಾನ :**

ಸುಳ್ಯ ಭೌಗೋಳಿಕವಾಗಿ ಮಲೆನಾಡ ತಪ್ಪಲಲ್ಲಿದೆ. ಪೂರ್ವಕ್ಕೆ ಕೊಡಗು, ದಕ್ಷಿಣಕ್ಕೆ ಕಾಸರಗೋಡು, ಪಶ್ಚಿಮಕ್ಕೆ ದಕ್ಷಿಣ ಕನ್ನಡದ ಇತರ ತಾಲೂಕುಗಳು ಮತ್ತು ಉತ್ತರಕ್ಕೆ ಹಾಸನ ಜಿಲ್ಲೆ ಸಿಗುತ್ತದೆ. ಸುಳ್ಯ ಪ್ರಾಕೃತಿಕವಾಗಿ ಸಂಪದ್ಭರಿತ ವಾಗಿದೆ. ತೆಂಗು. ಅಡಿಕೆ. ರಬ್ಬರ್, ಕೊಕೋ, ಕರಿಮೆಣಸು, ಜೇನು ಸಾಕಣೆ ಇಲ್ಲಿನ ಪ್ರಧಾನ ಬೆಳೆಗಳು. ಭಾಷಾ ದೃಷ್ಟಿಯಲ್ಲೂ ತುಳು. ಕನ್ನಡ, ಮಲೆಯಾಳಂ, ಅರೆಕನ್ನಡ. ತಮಿಳು ಬಲ್ಲವರು ಹೆಚ್ಚು. ಇಲ್ಲಿನ ಜನಪದರು ಬೇಟೆಯಾಡುವ. ಕೋಳಿ ಅಂಕಕ್ಕೆ ಹೋಗುವ ಹವ್ಯಾಸವನ್ನು ಇಟ್ಟುಕೊಂಡಿದ್ದಾರೆ. ಭೂತಕೋಲ. ಒತ್ತೆಕೋಲ. ಜಾತ್ರೆ. ನೇಮ, ಸಿದ್ಧವೇಶ, ಆಟಿಕಳೆಂಜ, ಮದಿಮಾಯ ಮದಿಮಾಳ್ ಮೊದಲಾದ ಸಾಂಪ್ರದಾಯಿಕ ಆಚರಣೆಗಳು, ಕುಣಿತಗಳು ಇಲ್ಲಿ ನಡೆಯುತ್ತವೆ. ಜನಪದ ಕಥೆ, ಒಗಟು. ಗಾದೆ, ನೇಜಿ ಹಾಡುಗಳು, ಪಾಡ್ದನಗಳು, ಉರಳ್‌ಗಳು ಇಲ್ಲಿ ಉಪಲಬ್ಧವಿವೆ. ಇಂತಹ ಪ್ರದೇಶದಲ್ಲಿ ಜನಪದ ಕಥೆಗಳನ್ನು ಸಂಗ್ರಹಿಸುವುದು ಸುಲಭದ ಕೆಲಸವೇನೂ ಅಲ್ಲ. ವಾಸ್ತವವಾಗಿ ವರ್ಗ ಮತ್ತು ಆಶಯಸೂಚಿಯನ್ನು ಸಿದ್ಧಪಡಿಸುವಾಗ ಜನಪದ ಕಥೆಗಳ ರೂಪವನ್ನು ಮಾತ್ರ ಗಮನಿಸಿದರೆ ಸಾಕಾ ಗುತ್ತದೆ. ಆದರೆ ನನ್ನ ಅಧ್ಯಯನದ ಸಂದರ್ಭದಲ್ಲಿ ಕಥೆಗಳ ರೂಪವನ್ನು ಮಾತ್ರ ಸಂಗ್ರಹಿಸದೆ ಕಥೆಯ ಸಾಂದರ್ಭಿಕ ವಿವರಗಳನ್ನೂ ಸಂಗ್ರಹಿಸಿಕೊಂಡಿದ್ದೇನೆ. ಈ ಸಾಂದರ್ಭಿಕ ವಿವರಗಳು ಪ್ರಕೃತ ಅಧ್ಯಯನಕ್ಕೆ ಅಗತ್ಯವಿಲ್ಲದಿದ್ದರೂ ಸಂಗ್ರಹ ಕಾರ್ಯ ವೈಜ್ಞಾನಿಕವಾಗಿರಲಿ ಎಂಬ ಕಾರಣಕ್ಕೆ ಹಾಗೆ ಮಾಡಲಾಗಿದೆ.

ಗೌಡ ಕನ್ನಡದಲ್ಲಿ ಜನಪದ ಕಥೆಗಳು ಇವೆಯೇ ಎಂಬ ಬಗ್ಗೆ ನನಗೆ ಖಚಿತವಾದ ಅಭಿಪ್ರಾಯಗಳಿರಲಿಲ್ಲ. ಈ ಬಗ್ಗೆ ಡಾ. ಕೆ. ಕುಶಾಲಪ್ಪಗೌಡ (೧೯೭೦) ಮತ್ತು ಡಾ. ಬಿ. ಪುರುಷೋತ್ತಮ (೧೯೮೫) ಅವರ ಕೃತಿಗಳಲ್ಲಿ ಯಾವ ಉಲ್ಲೇಖವೂ ಇರಲಿಲ್ಲ. ಹೀಗಾಗಿ ಕಥೆಗಳು ಲಭ್ಯ ಇವೆಯೇ ಎಂದು ಆರಂಭದಲ್ಲಿ ವಿಸ್ತಾರವಾದ ಸಮೀಕ್ಷೆ ಮಾಡಿದೆ. ಕಥೆಗಳು ಲಭ್ಯ ಇವೆ ಎಂದು ಕೆಲವರು ತಿಳಿಸಿದರು. ಅನಂತರ ನನ್ನ ಅಧ್ಯಯನದ ಸೀಮಿತ ಕಾಲಾವಧಿಯಲ್ಲಿ ಎಷ್ಟು ಕ್ಷೇತ್ರಕಾರ್ಯ ನಡೆಸಲು ಸಾಧ್ಯ ಮತ್ತು ಎಷ್ಟು ಕಥೆಗಳನ್ನು ಸಂಗ್ರಹಿಸಲು ಸಾಧ್ಯ ಎಂಬ ಬಗ್ಗೆ ಸ್ಥೂಲವಾದ ಒಂದು ಅಭಿಪ್ರಾಯ ರೂಪಿಸಿಕೊಂಡೆ. ಜೊತೆಗೆ ಯಾವ ಮಾಧ್ಯಮದಲ್ಲಿ ಕಥೆಗಳನ್ನು ಸಂಗ್ರಹಿ ಸುವುದು ಉಪಯುಕ್ತ ಎಂಬುದನ್ನು ತೀರ್ಮಾನಿಸಿಕೊಂಡೆ. ಕಥೆಗಳ ಸಂಗ್ರಹ ಮಾಡುವುದರಿಂದ ನಾನೇ ಕ್ಷೇತ್ರ ಕಾರ್ಯಕ್ಕೆ ಹೋಗುವ ಬದಲು ನಿರೂಪಕರನ್ನು ಒಂದು

ನಿರ್ದಿಷ್ಟ ಸ್ಥಳದಲ್ಲಿ ಒಟ್ಟುಗೂಡಿಸಿ ಕಥೆಗಳನ್ನು ಸಂಗ್ರಹಿಸಬಹುದೆಂದು ಯೋಜಿಸಿಕೊಂಡೆ. ಆದರೆ ಈ ಕೆಲಸದಲ್ಲಿ ನಾನು ಪ್ರಾಯೋಗಿಕವಾಗಿ ಸಫಲನಾಗಲಿಲ್ಲ. ಹಾಗಾಗಿ ನಿರೂಪಕರನ್ನು ಒಟ್ಟುಸೇರಿಸುವ ಕೆಲಸವನ್ನು ಬಿಟ್ಟು ನಾನೇ ನಿರೂಪಕರ ಮನೆಗೆ ಹೋಗಿ ಕಥೆಗಳನ್ನು ಸಂಗ್ರಹಿಸಿದೆ. ಕಥಾ ನಿರೂಪಕರ ಮಾಹಿತಿಗಾಗಿ ಉಡುಪಿಯ ಪ್ರಾದೇಶಿಕ ರಂಗ ಕಲೆಗಳ ಅಧ್ಯಯನ ಕೇಂದ್ರದವರು ಸಿದ್ಧಪಡಿಸಿದ ಕ್ಷೇತ್ರಕಾರ್ಯ ಪಟ್ಟಿಕೆಯನ್ನು ಬಳಸಿಕೊಂಡೆ.[೬] ಕಥೆಗಳನ್ನು ಕ್ಯಾಸೆಟ್ಟುಗಳ ಮೂಲಕ ಸಂಗ್ರಹಿಸಿಕೊಳ್ಳಲಾಯಿತು.[೭] ಕ್ಷೇತ್ರ ಕಾರ್ಯದ ಅನಂತರ ಸಂಗ್ರಹಿಸಿದ ಕಥೆಯನ್ನು ಪ್ರತಿ ಮಾಡಿ ಅಧ್ಯಯನದ ಸೌಕರ್ಯಕ್ಕಾಗಿ ಅವುಗಳಿಗೆ ಗೌಡ ಕನ್ನಡದ ಜನಪದ ಕಥೆಗಳು ಎಂಬ ಹೆಸರಿನಲ್ಲಿ ಕ್ರಮಾಂಕವನ್ನು ನೀಡಲಾಯಿತು. ಮುಂದಿನ ಅಧ್ಯಾಯದಲ್ಲಿ ಸಂಗ್ರಹಿಸಿದ ಕಥೆಗಳ ವಿವರ ಮತ್ತು ಆಶಯಸೂಚಿಯನ್ನು ಸಿದ್ಧಪಡಿಸುವಾಗ ಎರಡು ಮಹತ್ವದ ಕೃತಿಗಳನ್ನು ಆಧರಿಸಿಕೊಳ್ಳಲಾಗಿದೆ. ಮೊದಲನೆಯದು, ವರ್ಗ ಸೂಚಿಯ ಸಿದ್ಧತೆಗಾಗಿ ಸ್ಟಿತ್ ಥಾಮ್ಸನ್ ಮತ್ತು ಆಂಟಿ ಆರ್ನೆ ಅವರ 'The Types of Folktales' (೧೯೬೪) ಕೃತಿಯನ್ನು ಆಧರಿಸಿಕೊಂಡರೆ ಎರಡನೆಯದಾಗಿ, ಆಶಯ ಸೂಚಿಯ ಸಿದ್ಧತೆಗೆ ಸ್ಟಿತ್ ಥಾಮ್ಸನ್ನರ 'Motif Index of Folkliterature' (೧೯೬೬) ಎಂಬ ಆರು ಸಂಪುಟದ ಬೃಹತ್ ಗ್ರಂಥವನ್ನು ಆಧರಿಸಿಕೊಳ್ಳಲಾಗಿದೆ. ಇದರ ಜೊತೆಗೆ ಕನ್ನಡ ಮತ್ತು ತುಳು ಕಥೆಗಳನ್ನು ಆಧರಿಸಿ ಸಿದ್ಧಪಸಿದ ಒಟ್ಟು ಆರು ವರ್ಗ ಮತ್ತು ಆಶಯಸೂಚಿ ಕೃತಿಗಳನ್ನು ಗಮನಿಸಿಕೊಳ್ಳಲಾಗಿದೆ.

ಈ ಇಡೀ ಅಧ್ಯಯನಕ್ಕೆ ಹಿನ್ನೆಲೆಯಾಗಿ ಗೌಡ ಕನ್ನಡವನ್ನಾಡುವ ಗೌಡ ಜನಾಂಗದ ಪರಿಚಯವನ್ನು ಸ್ಥೂಲವಾಗಿ ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

○

# ಅಧ್ಯಾಯ – ೨

**ಗೌಡ ಜನಾಂಗದ ಪರಿಚಯ :**

೨.೧ ಗೌಡ ಜನಾಂಗದ ಭೌಗೋಳಿಕ ಪರಿಸರ

೨.೨ 'ಗೌಡ' ಶಬ್ದದ ಪ್ರಾಚೀನತೆ ಮತ್ತು ಅರ್ಥ

೨.೩ 'ಗೌಡ' ಶಬ್ದದ ನಿಶ್ಪತ್ತಿ

೨.೪ ಗೌಡರ ಪೂರ್ವ ಪರಿಚಯ

೨.೫ ಗೌಡರ ಕುಟುಂಬ ಪದ್ಧತಿ

೨.೬ ಗೌಡ ಕನ್ನಡ ಭಾಷೆಯ ಸಾಮಾನ್ಯ ಪರಿಚಯ

## ೨.೧ ಗೌಡ ಜನಾಂಗದ ಭೌಗೋಳಿಕ ಪರಿಸರ :

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ, ಬಂಟ್ವಾಳ, ವಿಟ್ಲ ಮತ್ತು ಕಾಸರಗೋಡು ಪರಿಸರದಲ್ಲಿ ಗೌಡರು ವಾಸಿಸುತ್ತಾರೆ. ಅಂದಾಜು ಲೆಕ್ಕ ದಲ್ಲಿ ಎರಡು ಲಕ್ಷಕ್ಕೂ ಹೆಚ್ಚು ಗೌಡರು ಇದ್ದಾರೆ. ಸುಳ್ಯ ದಿಂದ ವಲಸೆ ಹೋಗಿ ಭಾಗಮಂಡಲದ ಸುತ್ತ ಮುತ್ತ ಮಡಿಕೇರಿಯ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಸುಮಾರು ಅರುವತ್ತು ಸಾವಿರದಷ್ಟು ಗೌಡರು ವಾಸಿಸುತ್ತಿದ್ದಾರೆ. (ನೋಡಿ ನಕ್ಷೆ ೨).

ಪುತ್ತೂರು, ಬೆಳ್ತಂಗಡಿ, ವಿಟ್ಲದ ಕಡೆ ವಾಸಿಸು ತ್ತಿರುವ ಗೌಡರ ಮಾತೃಭಾಷೆ ತುಳುವಾಗಿದೆ. ಈ ಗೌಡರ ಮೇಲೆ ಬಂಟರ, ಬಿಲ್ಲವರ ಪ್ರಭಾವ ಸಾಕಷ್ಟಿದೆ. ಸುಳ್ಯ ತಾಲೂಕಿನ ಗೌಡರು ಮುಖ್ಯವಾಗಿ ಗೌಡ ಕನ್ನಡವನ್ನೇ ಆಡುತ್ತಾರೆ. ಭಾಗಮಂಡಲದ ಗೌಡರ ಮೇಲೆ ಅಲ್ಲಿನ ಬಹುಸಂಖ್ಯಾಕರೆನಿಸಿಕೊಂಡ ಕೊಡವರ ಪ್ರಭಾವವಿದೆ. ಆದರೂ ಭಾಗಮಂಡಲದ ಗೌಡರು 'ಗೌಡ ಕನ್ನಡ'ವನ್ನೇ ಮಾತೃಭಾಷೆಯಾಗಿ ಬಳಸುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೌಡರು




ಕೃಪೆ: ಪುರುಷೋತ್ತಮ ಬಿಳಿಮಲೆ ಚಿತ್ರ ಸಂಖ್ಯೆ – ೨

## ೨.೨ 'ಗೌಡ' ಶಬ್ದದ ಪ್ರಾಚೀನತೆ ಮತ್ತು ಅರ್ಥ :

'ಗೌಡ' ಪದ ಈಗ ಜನಾಂಗ ಸೂಚಿಯಾಗಿದೆ. ಕ್ರಿ.ಶ. ೭೨೫ ರ ಧಾರವಾಡದ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಶಾಸನದಲ್ಲಿರುವ 'ನಾಡಗಾವುಂಡ' ಎಂಬ ಶಬ್ದವೇ 'ಗೌಡ' ವೃತ್ತಿಯ ಬಗ್ಗೆ ನಮಗೆ ಸಿಗುವ ಅತ್ಯಂತ ಪ್ರಾಚೀನ ಉಲ್ಲೇಖ. ಕ್ರಿ.ಶ. ೭೫೦ ರ ಧಾರವಾಡದ ಹಾನಗಲ್ಲಿನ ಅಡೂರಿನ ಶಾಸನದಲ್ಲಿ ಸಿಗುವ 'ದೋಣ ಗಾಮುಣ್ಡ' ಮತ್ತು 'ಎಳಗಾಮುಣ್ಡ' ಪದಗಳು ವ್ಯಕ್ತಿ ನಾಮದೊಂದಿಗೆ ವೃತ್ತಿ ಸ್ಥಾನವೂ ಹೆಣೆದುಕೊಂಡಿದ್ದಕ್ಕೆ ಪ್ರಾಚೀನ ಉದಾಹರಣೆ. 'ಊರಿನಿಂದ ರಾಜನಿಗೆ ಸಲ್ಲಿಸಬೇಕಾಗಿರುವ ಆದಾಯವನ್ನು ಸಂಗ್ರಹಿಸುವ ಕೆಲಸ ಊರಿನ ಕ್ಷೇಮ ಸಮಾಚಾರ ವನ್ನು ನೋಡಿಕೊಳ್ಳುವ ಕೆಲಸ ಗಾಮುಣ್ಡರದ್ದು ಆಗಿತ್ತು. ಪ್ರಭುಗಾಮುಣ್ಡ, ಪ್ರಭು ಪೆರ್ಗಡೆ, ನಾಯಕ ಪದಗಳು ಗಾಮುಣ್ಡ ಪದಕ್ಕೆ ಸಂವಾದಿಯಾಗಿ ಶಾಸನಗಳಲ್ಲಿ ಬಳಕೆಯಾಗಿವೆ'.

"ವರ್ತಮಾನ ಕಾಲದಲ್ಲಿ ಜಾತಿ ಸೂಚಕವಾಗಿ ಬಳಕೆಯಾಗಿರುವ ಗೌಡ ಶಬ್ದವು ಮೂಲದಲ್ಲಿ ಒಬ್ಬ ವ್ಯಕ್ತಿಯ ಸ್ಥಾನ ಸೂಚಕವಾಗಿತ್ತು". (ಪುರುಷೋತ್ತಮ ಬಿ. ೧೯೮೫:೯) ಕಿಟ್ಟೆಲ್ ನಿಘಂಟುವಿನಲ್ಲಿ ಈ ಶಬ್ದಕ್ಕೆ 'The Chief officer of a Village' (Sudra) ಎಂಬ ಅರ್ಥವಿದೆ. (ಕಿಟ್ಟೆಲ್ ೧೯೭೭-೫೬೭) ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಪಡಿಸಿದ ನಿಘಂಟುವಿನಲ್ಲಿ 'ಗ್ರಾಮದ ಮುಖ್ಯಸ್ಥ' 'ಗಾಮುಂಡ' ಎಂಬ ವಿವರಣೆಯಿದೆ. (ವೆಂಕಟ ಸುಬ್ಬಯ್ಯ ೧೯೭೫:೩೧೯). 'ಅಳಿದ ಊರಿಗೆ ಉಳಿದವನೇ ಗೌಡ' ಎಂಬ ಜನಪ್ರಿಯ ನುಡಿಗಟ್ಟಿನಲ್ಲಿಯೂ ಇದೇ ಅರ್ಥದ ವಿವರವಿದೆ. ಶಾಸನಗಳಲ್ಲಿ ಸ್ಥಾನ ಸೂಚಕವಾದ ಅರ್ಥವಿದೆ. ಗ್ರಾಮದ ಹಿತರಕ್ಷಣೆಗೋಸ್ಕರ ಇನ್ನಿತರ ಕೆಲವು ಅಧಿಕಾರಿಗಳೊಂದಿಗೆ ದುಡಿಯು ವವನೇ 'ಗೌಡ', ಶ್ಯಾನುಭೋಗ, ಪಟೇಲ, ಕರಣಿಕ, ಗುರಿಕಾರ ಮೊದಲಾದವು ಗೌಡನೊಂದಿಗೆ ಇದ್ದ ಇತರ ಸ್ಥಾನಗಳು.

'ಗಾಮುಣ್ಡ' ವೃತ್ತಿ ಅನುವಂಶಿಕವಾಗಿ ಬರುತ್ತಿದ್ದುದರಿಂದಲೇ ಅದೊಂದು ಪ್ರತ್ಯೇಕ ಜಾತಿಯಾಗಲು ಕಾರಣವಾಯಿತು ಎಂದು ಊಹಿಸಬಹುದು. ಕ್ರಿ.ಶ. ೧೧೭೯ರ ಅರಸಿಕೆರೆ ಶಾಸನದಲ್ಲಿ, ಗಂಡು ಮಕ್ಕಳಿಲ್ಲದ ಕಾರಣ ಬಾಚಲದೇವಿಯೇ 'ಗೌಡಿಕೆ ದನ' ಸ್ವೀಕರಿಸಿದ್ದರ ಬಗ್ಗೆ ಉಲ್ಲೇಖವಿದೆ. ವಿಜಯನಗರ ಕಾಲಕ್ಕೆ 'ಗ್ರಾಮ ಗವುಡ'ನಿದ್ದಂತೆ 'ಸ್ಥಳದ ಗವುಡಿಕೆ' ಎಂಬ ಹುದ್ದೆಯಿತ್ತು. ಈ ವೃತ್ತಿಯಿಂದ ಗವುಡುಗಳ ಸಂಖ್ಯೆ ಇನ್ನಷ್ಟು ಹೆಚ್ಚಾಗಿದೆ ಎಂಬುದು ಮುಖ್ಯ.

೮ ಮತ್ತು ೯ನೇ ಶತಮಾನದಲ್ಲಿ ಸ್ಪಷ್ಟವಾಗಿ ವೃತ್ತಿ ಅಥವಾ ಸ್ಥಾನ ಸೂಚಕ ವಾಗಿದ್ದ 'ಗಾಮುಣ್ಡ' ಶಬ್ದವು ೧೩ನೇ ಶತಮಾನದ ಕೊನೆಯ ಭಾಗದಲ್ಲಿ ತನ್ನ

ಅರ್ಥವನ್ನು ಹಿಗ್ಗಿಸಿಕೊಂಡಿತು. ೧೪ನೇ ಶತಮಾನದ ಕೊನೆಯ ಭಾಗಕ್ಕಾಗುವಾಗ ಸಮಸ್ತ ಪ್ರಜೆಗಳಿಗೂ ಅನ್ವಯಿಸುವಷ್ಟು ವಿಶಾಲಾರ್ಥವನ್ನು ಪಡೆದುಕೊಂಡಿತು. 'ಗೌಡಿಕೆ' ವೃತ್ತಿ ಮಾಡಿದವರೋ, ಅವರ ಮನೆಯವರೂ ಅನುವಂಶಿಕವಾಗಿ 'ಗವುಡ'ರೆಂದೇ ಕರೆಯಿಸಿಕೊಂಡದ್ದು ಶಾಸನಗಳಿಂದ ಖಚಿತವಾಗಿ ತಿಳಿದು ಬರುತ್ತದೆ.

**೨.೩ 'ಗೌಡ' ಶಬ್ದ ನಿಷ್ಪತ್ತಿ :**

ಗೌಡ ಶಬ್ದದ ಬಗೆ ವಿದ್ವಾಂಸರು ಮಂಡಿಸಿದ ವಾದಗಳು ಈ ಕೆಳಗಿನಂತಿವೆ :

ಅ) 'ಗ್ರಾಮವೃದ್ಧ' ಎಂಬ ಶಬ್ದದಿಂದ 'ಗಾವುಂಡ' ಸಿದ್ಧಿಸಿದೆ, ಕಾಲಾಂತರ ದಲ್ಲಿ ಇದುವೇ 'ಗೌಡ' ಎಂದಾಗಿದೆ. (ನರಸಿಂಹಯ್ಯ ೧೯೬೧ : ೧೧೦)

ಆ) ಸಂಸ್ಕೃತದ 'ಗೋವು' ಪದದಿಂದ ಗೌಡಪದ ನಿಷ್ಪನ್ನವಾಗಿದೆ. (ಸ್ಟುವರ್ಟ್ ೧೮೯೧ : ೧೬)

ಇ) ದ್ರಾವಿಡ ಮೂಲದ್ದಾದ ಗೌಡ ಶಬ್ದವು 'ಬೆಟ್ಟ' ಎಂಬರ್ಥವನ್ನು ಕೊಡುತ್ತದೆ. (ಒಪೆರ್ಟ್ ೧೮೯೧ : ೧೦೩)

ಈ) 'ಗೌಡ' ಎಂದರೆ ಯಜಮಾನ ಎಂದರ್ಥ. ಅದು ರಾಜ್ಯದ ಆಡಳಿ ತಾಂಗದ ಒಂದು ಹುದ್ದೆಯ ಹೆಸರನ್ನು ಸೂಚಿಸುತ್ತದೆ. (ದೊಡ್ಡಪ್ಪ ಗೌಡ ೧೯೭೮ : ೧೮-೧೯)

ಉ) 'ಗೂಡ್' ಎಂದರೆ 'ಬೆಲ್ಲ' ಎಂದರ್ಥ, ಬಂಗಾಳದಲ್ಲಿ ಕಬ್ಬು ಬೆಳೆಯು ವುದರಿಂದ ಅದನ್ನು 'ಗೂಡ್ ದೇಶ' ಎಂದು ಕರೆಯುತ್ತಾರೆ. ಗೌಡರು ಮೂಲತಃ ಬಂಗಾಳದವರು. ಅಂದರೆ ಬೆಲ್ಲ ಮಾಡುವವರು ಎಂಬ ಅರ್ಥವಿದೆ. ಇಂದಿಗೂ ಮಂಡ್ಯ ಕಡೆಯ ಗೌಡರ ಪ್ರಮುಖ ವೃತ್ತಿ ಬೆಲ್ಲ ಮಾಡುವುದೇ ಆಗಿದೆ. (ಪೂವಯ್ಯ ೧೯೭೦ : ೧೪)

ಊ) ಗಂಗಾತೀರದಿಂದ ದಕ್ಷಿಣಕ್ಕೆ ಬಂದ ಹಟ್ಟಿಕಾರರಲ್ಲಿ ಗೋವಳರದ್ದು ಎಂಬ ಒಂದು ಶಾಖೆ. ಈ 'ಗೋ' ಪಾಲರೇ ಗೌಡರಾದರು. (ಮೊಣ್ಣಪ್ಪ ೧೯೭೦ : ೧೬-೧೭)

ಎ) ಸಂಸ್ಕೃತದ 'ಗ್ರಾಮಕೂಟ' ಪದವು ಪ್ರಾಕೃತದಲ್ಲಿ 'ಗಾಮಊಡ- ಗಾಮಉಡ' ಎಂಬ ರೂಪವನ್ನು ತಳೆದು ಕನ್ನಡದಲ್ಲಿ 'ಗಾವುಂಡ' ಆಗಿದೆ. ಇದೇ ಕ್ರಮೇಣ ಗಾವುಂಡ-ಗೌಂಡ-ಗೌಡ ಎಂದಾಗಿದೆ. (ಚಿದಾನಂದ ಮೂರ್ತಿ ೧೯೭೦ : ೩೫೬)

ಇಂದು ಬಳಕೆಯಾಗುವ 'ಗೌಡ' ಪದವನ್ನು ತುಳು ಮಾತನಾಡುವ ಮಂದಿ 'ಗವುಂಡ', 'ಗಾವುಂಡ' ಎಂದು ಉಚ್ಚರಿಸುತ್ತಾರೆ. ಶಾಸನಗಳಲ್ಲಿರುವ ಪ್ರಯೋಗವೂ ಇದೇ ಆಗಿದೆ. 'ಗಾವುಂಡ' ಪದದ ಅರ್ಥದಲ್ಲಿಯೇ 'ಗ್ರಾಮಕೂಟ' ಎಂಬ ಪದವನ್ನು ವಿಜಯನಗರ ಕಾಲದ ಶಾಸನಗಳಲ್ಲಿಯೂ ಬಳಸಿದ್ದಾರೆ. (ಸೋಮಶೇಖರ ಶರ್ಮ ೧೯೪೮ : ೨೧೯) ಗ್ರಾಮದ 'ಅಧಿಕಾರಿ' ಎಂಬುದು ಅದರ ಮೂಲ ಅರ್ಥ. ಇಂದಿಗೂ 'ಗ್ರಾಮಗೌಡ', 'ಊರಗೌಡ' ಎಂಬಂಥ ಪ್ರಯೋಗಗಳಲ್ಲಿ ಇದೇ ಅರ್ಥ ವಿದ್ದರೂ ಒಟ್ಟಾರೆಯಾಗಿ ಅದು ಜಾತಿಸೂಚಕವಾಗಿದೆ. ಒಟ್ಟಿನಿಂದ ಈ ಶಬ್ದ ಬೆಳಕಿಗೆ ಬಂದುದನ್ನು ಹೀಗೆ ನಿರೂಪಿಸಬಹುದು.

ಗ್ರಾಮಕೂಟ (ಸಂಸ್ಕೃತ) > ಗಾಮಊಡ–ಗಾಮಉಡ (ಪ್ರಾಕೃತ) >
ಗಾಮುಣ್ಡ (ಕನ್ನಡ) > ಗಾಮುಂಡ > ಗಾವುಂಡ > ಗೌಂಡ > ಗೌಡ.
ಗಾವುಂಡ > ಗೌಂಡ > ಗೌಡ–ಪ್ರಸ್ತುತ, 'ಗೌಡ' ಪದವೇ ಬಳಕೆಯಲ್ಲಿದೆ.

**೨.೪ ಗೌಡರ ಪೂರ್ವ ಪರಿಚಯ :**

ಗೌಡರು ಯಾರು? ಸುಳ್ಯ ಪರಿಸರಕ್ಕೆ ಗೌಡರು ಮೂಲ ನಿವಾಸಿಗಳೇ? ಎಂಬ ಪ್ರಶ್ನೆಗಳ ಬಗ್ಗೆ ಡಾ. ಬಿ. ಪುರುಷೋತ್ತಮ ಅವರು ತಮ್ಮ ಸಂಶೋಧನ ಮಹಾ ಪ್ರಬಂಧದಲ್ಲಿ ಸಾಕಷ್ಟು ವಿಸ್ತೃತವಾಗಿ ಚರ್ಚಿಸಿದ್ದಾರೆ.[೮] ಗೌಡರನ್ನು ಒಕ್ಕಲಿಗ ರೆಂದು ಗುರುತಿಸಲಾಗುತ್ತಿದೆ. 'ಒಕ್ಕಲಿಗ' ಪದಕ್ಕೆ 'ಬೇಸಾಯಗಾರ' ಎಂದು ಕಿಟ್ಟೆಲ್ ಅರ್ಥಕೋಶದಲ್ಲಿ ಅರ್ಥವಿದೆ. ಮಂಗರಸರ ಕಾಲದಲ್ಲಿ 'ಕೃಷಿಯ ಮಾಳ್ಪ ಒಕ್ಕಲಿಗ' ಎಂಬ ಪ್ರಯೋಗವಿತ್ತು. ಕೃಷಿಪ್ರಧಾನವಾದ ವೃತ್ತಿಯುಳ್ಳವರೆಲ್ಲರೂ ಒಕ್ಕಲಿಗರೇ ಆಗಿದ್ದಾರೆ. ಅದರಲ್ಲೂ ಮುಖ್ಯವಾಗಿ ಹೊಲವನ್ನು ಒಕ್ಕುವ ಕೆಲಸ. ಹೊಲವನ್ನು ಒಕ್ಕುವ ಕೆಲಸ ಮಾಡುತ್ತಿದ್ದ ಒಕ್ಕಲಿಗರು ಕರ್ನಾಟಕಕ್ಕೆ ಹೊರಗಿನಿಂದ ಬಂದವರೇ ಅಥವಾ ಅವರು ಇಲ್ಲಿಯ ಮೂಲನಿವಾಸಿಗಳಾಗಿದ್ದವರೇ ಎಂದು ನಿರ್ಣಯಿಸಲು ಸಾಕಷ್ಟು ಆಧಾರಗಳಿಲ್ಲ. ಕರ್ನಾಟಕದ ಪ್ರಾಚೀನ ಮತ್ತು ಪ್ರಖ್ಯಾತ ವಾದ ಗಂಗ ಅರಸರು ಒಕ್ಕಲಿಗ ಮೂಲದವರೆಂದು ವಿದ್ವಾಂಸರು ಸಾಧಾರವಾಗಿ ತರ್ಕಿಸಿದ್ದಾರೆ. ತಮ್ಮ ರಾಜ್ಯ ಶಿಥಿಲವಾದ ಬಳಿಕ, ಮೂಲ ಕಸುಬಿಗೇ ಹಿಂದಿರುಗಿದ ಇವರು ಅಭಿಮಾನದಿಂದ 'ಗಂಗಡಿಕಾರರು' ಎಂದು ಕರೆಸಿಕೊಳ್ಳುತ್ತಿದ್ದರು. ಕಾಲಾಂತರದಲ್ಲಿ ಕರ್ನಾಟಕದಾದ್ಯಂತ ಹರಡಿಕೊಂಡು ಅತ್ಯಂತ ದೊಡ್ಡ ಕೃಷಿಕರ ಪಂಗಡವೆಂದು ಇಂದು ಗುರುತಿಸಲು ಸಾಧ್ಯವಾಗುತ್ತಿದೆ. ಹಾಸನ ಜಿಲ್ಲೆಯಲ್ಲಿರುವ ಈ ಗಂಗಡಿಕಾರರೇ ಸುಳ್ಯ ಪರಿಸರದತ್ತ ವಲಸೆಹೋಗಿದ್ದಾರೆ ಎನ್ನಲು ಸಾಕಷ್ಟು ಕಾರಣಗಳಿವೆ. ಹಾಸನ ಜಿಲ್ಲೆಯ ಮಂಜರಾಬಾದಿನ ಸುತ್ತ ಮುತ್ತಲಿನ ಪ್ರದೇಶಗಳೆಲ್ಲ ಒಟ್ಟು ಸೇರಿ 'ಐಗೂರು ಸೀಮೆ' ಎಂದು ಕರೆಸಿಕೊಳ್ಳುತ್ತಿವೆ. ಕ್ರಿ. ಶ. ೧೫೨೦ ರಲ್ಲಿ

ಈ ಸೀಮೆಯನ್ನು ಕೃಷ್ಣಪ್ಪ ನಾಯಕನೆಂಬುವನು ಆಳಿಕೊಂಡಿದ್ದ. ಇವನು ತುಳು ನಾಡಿನ ಕೆಲವು ಭಾಗಗಳಿಗೂ ಅಧಿಕಾರಿಯಾಗಿದ್ದಂತೆ ಡಾ. ಕೆ. ವಿ. ರಮೇಶರು ಸೂಚಿಸಿದ್ದಾರೆ. ಇವನ ಕಾಲದಲ್ಲಿ ಶೃಂಗೇರಿ ಸೀಮೆಯಿಂದ 'ದೇವರ ಮಕ್ಕಳು' ಎಂದು ಕರೆಸಿಕೊಳ್ಳುವ ಬಿಲ್ಲವರು ಐಗೂರಿಗೆ ವಲಸೆ ಬಂದಿದ್ದಾರೆ. ಈ ಕೃಷ್ಣಪ್ಪ ನಾಯಕನ ವಂಶಜನಾದ ಮೂರನೇ ವೆಂಕಟಾದ್ರಿ ನಾಯಕನು ಪ್ರಜಾಕಂಟಕನಾಗಿದ್ದಂತೆ ಐತಿಹ್ಯಗಳಿವೆ. ಹೀಗೆ ಲಿಂಗಾಯತ ನಾಯಕರುಗಳ ಕಾಲದಲ್ಲಿ ಐಗೂರು ಸೀಮೆ ಯಿಂದ ಗಂಗಡಿಕಾರ ಒಕ್ಕಲಿಗರು ಸುಳ್ಯ ಪರಿಸರಕ್ಕೆ ವಲಸೆ ಹೋಗಿದ್ದಿರಬೇಕು. ಸುಳ್ಯ ಪರಿಸರದ ಗೌಡರಿಗೂ ಐಗೂರು ಸೀಮೆಯ ಗಂಗಡಿಕಾರರ ಒಕ್ಕಲಿಗರಿಗೂ ಗುರುಮಠ ಶೃಂಗೇರಿಯೇ ಆಗಿದೆ. ಪ್ರತಿವರ್ಷವೂ ತೆರವು ಹಣವನ್ನು ಗುರುಮಠಕ್ಕೆ ಎರಡೂ ಕಡೆಯವರೂ ಒಪ್ಪಿಸಬೇಕು.

ಸುಳ್ಯ ಪರಿಸರದಲ್ಲಿ ೭೩ ಸಾವಿರದಷ್ಟು ಸಂಖ್ಯೆಯಲ್ಲಿ ಗೌಡರಿದ್ದಾರೆ. ಬಿಸಿಲೆ, ಕುಮಾರ ಪರ್ವತದ ಬುಡದಲ್ಲಿ ಒತ್ತೊತ್ತಾಗಿ ವಾಸಿಸುವ ಇವರ ಸಂಖ್ಯೆ ಕರಾವಳಿ ಕಡೆ ಬಂದಂತೆ ವಿರಳವಾಗುತ್ತಾ ಬಂದಿದೆ. ಐಗೂರಿನಿಂದ ಸುಬ್ರಮಣ್ಯ ಪರಿಸರಕ್ಕೆ ಬಂದ ಜನಗಳಿಗೆ ಕುಮಾರಧಾರಾ ನದಿಯ ಎರಡು ದಂಡೆಗಳಲ್ಲಿರುವ ಫಲವತ್ತಾದ ಭೂಮಿ ಕೃಷಿಯೋಗ್ಯವಾಗಿ ಕಂಡಿರಬಹುದು. ನಿಧಾನವಾಗಿ ಜನಸಂಖ್ಯೆ ಹೆಚ್ಚಿದಂತೆ ಪಶ್ಚಿಮದ ಕಡೆ ಹರಡಿಕೊಂಡಿದ್ದಾರೆ. ಪುತ್ತೂರು, ವಿಟ್ಲ, ಬಂಟ್ವಾಳ ಪರಿಸರದಲ್ಲಿ ಈಗಿನ್ನೂ ವಿರಳವಾಗಿಯೇ ಇದ್ದಾರೆ. ಸುಬ್ರಹ್ಮಣ್ಯದ ಸಮೀಪದಲ್ಲಿರುವ ಕೂಜು ಗೋಡಿನ ವಿಶಾಲ ಜಾಗದಲ್ಲಿ ವಾಸಿಸುತ್ತಿರುವ ಗೌಡರನ್ನು ಅತೀ ಪ್ರಾಚೀನರೆಂದು ಗುರುತಿಸುವುದಲ್ಲದೆ, ಅವರಿಗೆ 'ಕಟ್ಟೆಮನೆ'ಯ ಹಕ್ಕನ್ನು ಗೌಡರು ಕೊಟ್ಟದಕ್ಕೆ ಇದೇ ಕಾರಣವಿರಬಹುದು. (ನೋಡಿ ನಕ್ಷೆ ೩)

ಪಾಡ್ದನಗಳಲ್ಲಿರುವ ವಿವರಗಳನ್ನು ಮತ್ತು ಗೌಡರು ವಾಸಿಸುತ್ತಿರುವ ಪ್ರದೇಶ ಗಳನ್ನು ಗಮನಿಸಿದರೆ ಗೌಡರು ಎರಡು ದಾರಿಯಾಗಿ ತುಳುನಾಡಿಗೆ ಬಂದಿದ್ದಾರೆಂದು ಹೇಳಬಹುದು. (ಪುರುಷೋತ್ತಮ ಬಿ. ೧೯೮೫ : ೧೪–೨೨) ಹಾಗಾಗಿ ಸುಳ್ಯ ಪರಿಸರಕ್ಕೆ ಗೌಡರು ಮೂಲನಿವಾಸಿಗಳಲ್ಲ. ಇವರು ಹಾಸನ ಜಿಲ್ಲೆಯ ಐಗೂರು ಸೀಮೆಯಿಂದ ೧೪೫೦-೧೬೦೦ರ ಮಧ್ಯೆ ಕರಾವಳಿಗೆ ವಲಸೆ ಬಂದಿದ್ದಾರೆ. ವಲಸೆ ಬಂದ ಕಾಲದಲ್ಲಿ ರಾಗಿ ಪ್ರಧಾನ ಬೆಳೆಯಾಗಿದ್ದರೂ ಅನಂತರದ ಕಾಲದಲ್ಲಿ ಆ ಸ್ಥಾನವನ್ನು ಭತ್ತ ಮತ್ತು ಅಡಿಕೆ ಆಕ್ರಮಿಸಿಕೊಂಡಿತು. ಭತ್ತವನ್ನು ಹಣವನ್ನಾಗಿ ಮಾರ್ಪಡಿಸುವ ಬ್ರಿಟಿಷರ ಧೋರಣೆಯನ್ನು ಪ್ರತಿಭಟಿಸಿದ ಗೌಡರು ಕ್ರಿ.ಶ. ೧೯೮೦ರ ದಶಕದಲ್ಲಿ 'ಅಮರ ಸುಳ್ಯ'ದ ದಂಗೆಗೆ ಕಾರಣರಾದರು. ಪರಿಣಾಮವಾಗಿ ಆಳರಸರ ಅವಕೃಪೆಗೆ ತುತ್ತಾಗಿ ಹಿಂದುಳಿದರು. ಸ್ವಾತಂತ್ರ್ಯ ನಂತರವೂ ಈ ಜನಾಂಗದ

ಜೀವನ ಕ್ರಮದಲ್ಲಿ ಗಂಭೀರ ಬದಲಾವಣೆಗಳೇನೂ ಆಗಿಲ್ಲ. (ಪುರುಷೋತ್ತಮ ಬಿ. ೧೯೦೦–೧೦೦)

**೨.೫ ಗೌಡರ ಕುಟುಂಬ ಪದ್ಧತಿ :**

ಗೌಡರ ಕುಟುಂಬಗಳಲ್ಲಿ ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬ ಗಳೆಂದು ಎರಡು ಪ್ರಬೇಧಗಳಿವೆ. ಅವಿಭಕ್ತ ಕುಟುಂಬಗಳಲ್ಲಿ ಸದಸ್ಯರ ಸಂಖ್ಯೆ ನೂರಕ್ಕೂ ಮಿಕ್ಕಿರುತ್ತದೆ. ಈ ಎರಡೂ ನಮೂನೆಯ ಕುಟುಂಬದ ಸದಸ್ಯರ ಸ್ಥಾನಮಾನಗಳು ಸಾಂಪ್ರದಾಯಿಕ ಪದ್ಧತಿಗಳಿಗನುಸಾರವಾಗಿಯೇ ಇರುತ್ತದೆ. ಭಾವನಾತ್ಮಕ ಸಂಬಂಧಗಳಿಗೆ ಇಲ್ಲಿ ಹೆಚ್ಚು ಬೆಲೆ ಇರುತ್ತದೆ. ರಕ್ತ ಸಂಬಂಧ ಕುಟುಂಬದ ವ್ಯಾಪ್ತಿಯನ್ನು ನಿರ್ಧರಿಸುವ ಮೂಲಭೂತ ಅಂಶ.

ಪ್ರಾಯದಲ್ಲಿ ಅತ್ಯಂತ ಹಿರಿಯನಾದವನು ಅವಿಭಕ್ತ ಕುಟುಂಬದ ಮುಖ್ಯಸ್ಥ ನಾಗಿ ಕೆಲಸ ನಿರ್ವಹಿಸುತ್ತಾನೆ. ಕುಟುಂಬದ ಹಿರಿತನ ಇಲ್ಲಿ ಅನುವಂಶಿಕವಾಗಿ ಬರದೆ, ಹಿರಿತನಕ್ಕನುಗುಣವಾಗಿ ಬರುತ್ತದೆ. ಮನೆಯೊಳಗಡೆ ಉದ್ಭವವಾಗುವ ಎಲ್ಲಾ ರೀತಿಯ ಸಮಸ್ಯೆಗಳನ್ನು ಮನೆಯ ಹಿರಿಯನ ಮೂಲಕ ಪರಿಹರಿಸಿಕೊಳ್ಳುತ್ತಾರೆ. ಇಡೀ ಕುಟುಂಬದವರ ದುಡಿಮೆ, ಉತ್ಪತ್ತಿ ಮತ್ತು ಅದರ ವಿತರಣೆಯ ಮೇಲೆ ಆ ಹಿರಿಯನಿಗೆ ಹಿಡಿತವಿರುತ್ತದೆ.

ಪತಿ, ಪತ್ನಿ ಮತ್ತು ಮಕ್ಕಳು ವಿಭಕ್ತ ಕುಟುಂಬದಲ್ಲಿ ಸೇರುತ್ತಾರೆ. ಇಲ್ಲಿ ತಂದೆಯೇ ಪ್ರಧಾನ ವ್ಯಕ್ತಿ. ವೃದ್ಧರಿಗೆ ಅಧಿಕಾರ ಇಲ್ಲ. ಕುಟುಂಬದ ಪ್ರಧಾನ ರಕ್ಷಕನಾಗಿ ತಂದೆ ಕೆಲಸ ಮಾಡುತ್ತಾನೆ. ಅವನ ಮಕ್ಕಳು ಮದುವೆಯಾಗುವವರೆಗೆ ಅವನೊಂದಿಗಿರುತ್ತಾರೆ. ವಿವಾಹದ ನಂತರ ತಮಗೊದಗಿದ ಭೂಮಿಯನ್ನು ಕೃಷಿ ಮಾಡುತ್ತಾ ಬದುಕುತ್ತಾರೆ. ಹಾಗಾಗಿ ವಿಭಕ್ತ ಕುಟುಂಬದಲ್ಲಿ ಗಂಡು ಮಕ್ಕಳಿಗೆ ಮದುವೆಯಾಗುವುದು ಪ್ರಧಾನ ಘಟನೆಯಾಗುತ್ತದೆ.

ಗೌಡರಲ್ಲಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಇಲ್ಲ. ಹಾಗಾಗಿ ಗೌಡರ ಕುಟುಂಬ ವ್ಯವಸ್ಥೆಯಲ್ಲಿ 'ಬಳಿ'ಯನ್ನು ತಂದೆಯಿಂದಲೇ ಗುರುತಿಸುತ್ತಾರೆ. ಮಕ್ಕಳ ಮೇಲೆಯೂ ತಂದೆಗೆ ಹಿಡಿತವಿರುತ್ತದೆ. ಆಸ್ತಿಯ ಹಕ್ಕು ತಂದೆಯಿಂದ ಮಗನಿಗೆ ಹೋಗುತ್ತದೆ. ಈ ಕಾರಣದಿಂದಾಗಿ ಗೌಡರಲ್ಲಿ 'ಮಕ್ಕಳ ಕಟ್ಟು' ಜಾರಿಯಲ್ಲಿದೆ.[೯]

ಪಿತೃ ಪ್ರಧಾನ ಕುಟುಂಬವಾದುದರಿಂದ ಗೌಡರಲ್ಲಿ ತಂದೆಯ ಕಡೆಯ ರಕ್ತ ಸಂಬಂಧಿಗಳಿಗೆ ಹೆಚ್ಚು ಮಹತ್ವ ದೊರೆಯುತ್ತದೆ. ತಂದೆಯ ತಂದೆ 'ಅಜ್ಜ' ಎಂದು ಕರೆಸಿಕೊಂಡರೆ, ತಾಯಿ 'ಅಜ್ಜಿ' ಎಂದು ಕರೆಸಿಕೊಳ್ಳುತ್ತಾರೆ. ಈ ಅಜ್ಜ ಅಜ್ಜಿಗೆ ಮೊಮ್ಮಕ್ಕಳ ಮೇಲೆ ವಿಶೇಷ ಮಮತೆ ಇರುತ್ತದೆ. ಹಬ್ಬ ಅಥವಾ

ವಿಶೇಷ ಸಂದರ್ಭಗಳಲ್ಲಿ ಮೊಮ್ಮಕ್ಕಳಿಗೆ ಬಟ್ಟೆ ಹೊಲಿಸಿಕೊಡುತ್ತಾರೆ. ಅಥವಾ ಹಣ ಕೊಡುತ್ತಾರೆ. ತಾಯಿಯ ತಂದೆ ಮತ್ತು ತಾಯಿಯೂ ಕ್ರಮ ಪ್ರಕಾರವಾಗಿ ಅಜ್ಜ ಮತ್ತು ಅಜ್ಜಿಯೆಂದೇ ಕರೆಸಿಕೊಂಡು ಮೊಮ್ಮಕ್ಕಳ ಮೇಲೆ ಇಂಥದ್ದೇ ವಿಶೇಷ ಮಮತೆ ಇಟ್ಟಿರುತ್ತಾರೆ.

ಕುಟುಂಬವು ಪ್ರಾಥಮಿಕ ಘಟಕವಾಗಿದೆ. ಹಲವು ಕುಟುಂಬಗಳನ್ನು ನೋಡಿ ಕೊಳ್ಳಲು ಊರಿಗೊಬ್ಬ 'ಊರು ಗೌಡ' ಇದ್ದಾನೆ. ಈ ಊರು ಗೌಡನ ಅನುಪ ಸ್ಥಿತಿಯಲ್ಲಿ ಒಬ್ಬ 'ಒತ್ತುಗೌಡ'ನಿರುತ್ತಾನೆ. ಭೂತ ಕೋಲ ಹಬ್ಬದಂತಹ ಆಚರಣೆಗಳ ಸಂದರ್ಭದಲ್ಲಿ ಅಥವಾ ಮದುವೆಯಂತಹ ವಿಶೇಷ ಸಮಾರಂಭಗಳಿಗೆ ಊರು ಗೌಡರಿಗೆ ಪ್ರತ್ಯೇಕ ಹೇಳಿಕೆ ಕೊಡುತ್ತಾರೆ. ಪ್ರತಿಯೊಂದು ಊರಿನಲ್ಲಿ ಕನಿಷ್ಠ ಒಬ್ಬನಾದರೂ ಊರುಗೌಡನಿದ್ದಾನೆ. ಇಂತಹ ನಾಲ್ಕರಿಂದ ಆರು ಜನ ಊರು ಗೌಡರನ್ನು ನೋಡಿಕೊಳ್ಳಲು ಒಬ್ಬ 'ಮಾಗಣೆ ಗೌಡ' ಇದ್ದಾನೆ. ಊರುಗೌಡರಿಗಿಂತ ಈತ ಹೆಚ್ಚು ಪ್ರತಿಷ್ಠಿತ. ಇಂತಹ ಒಂಬತ್ತು ಮಾಗಣೆ ಗೌಡರನ್ನು ನೋಡಿಕೊಳ್ಳಲು ಒಬ್ಬ 'ಕಟ್ಟೆಮನೆ' ಗೌಡ ಇದ್ದಾನೆ. ಇವನದು ಸರ್ವೋಚ್ಚವಾದ ಸ್ಥಾನ. ಇಂತಹ ಉಚ್ಚ ಅಧಿಕಾರದ ಎರಡು ಕಟ್ಟೆಮನೆಗಳಿವೆ. ಒಂದು ಸುಳ್ಯ ಪರಿಸರಕ್ಕೆ ಸಂಬಂಧಿಸಿ ದಂತೆ ಕೂಜುಗೋಡು ಕಟ್ಟೆಮನೆ, ಇನ್ನೊಂದು ಬೆಳ್ತಂಗಡಿ ಪರಿಸರದ ಗೌಡರಿಗೆ ಸಂಬಂಧಿಸಿದಂತೆ ಪುತ್ತೂರಿನ ಸಮೀಪದ ಬಲ್ನಾಡು ಕಟ್ಟೆ ಮನೆ. (ನೋಡಿ ನಕ್ಷೆ : ೩)

ಗೌಡ ಜನಾಂಗದ ಕ್ಷೇಮಾಭ್ಯುದಯವನ್ನು ನೋಡುವ ಎರಡೂ ಕಟ್ಟೆ ಮನೆಗಳು ನೇರವಾಗಿ ಶೃಂಗೇರಿ ಪೀಠದ ಅಧಿಕಾರಕ್ಕೆ ಒಳಪಟ್ಟಿವೆ. ಕಟ್ಟೆ ಮನೆ ಗೌಡರನ್ನು ನೇಮಕ ಮಾಡುವ ಹಕ್ಕು ಶೃಂಗೇರಿ ಪೀಠಕ್ಕಿದೆ. ಗೌಡರು ಅದನ್ನು ಗುರುಮಠವೆಂದು ಕರೆಯುತ್ತಾರೆ. ಭಾಷೆಯ ದೃಷ್ಟಿಯಲ್ಲಿ ಎರಡೂ ಕಟ್ಟೆ ಮನೆ ಗಳೂ ಭಿನ್ನ. ಪುತ್ತೂರು ಬಲ್ನಾಡು ಕಟ್ಟೆಮನೆಯ ಪರಿಸರಕ್ಕೆ ಸೇರಿದವರು ತುಳು ಭಾಷೆ ಮಾತನಾಡುತ್ತಾರೆ. ಕೂಜುಗೋಡು ಕಟ್ಟೆಮನೆ ಪರಿಸರಕ್ಕೆ ಸೇರಿದವರು ಅರೆ ಕನ್ನಡ ಅಥವಾ ಗೌಡ ಕನ್ನಡ ಭಾಷೆ ಮಾತನಾಡುತ್ತಾರೆ. (ನೋಡಿ ನಕ್ಷೆ : ೩)

### ೨.೬ ಗೌಡ ಕನ್ನಡ ಭಾಷೆಯ ಸಾಮಾನ್ಯ ಪರಿಚಯ :

'ಗೌಡ ಕನ್ನಡ' ಎಂಬ ಪದವು ಗೌಡರಲ್ಲಿ ಪ್ರಚಲಿತವಾಗಿರುವ 'ಅರೆಭಾಷೆ'ಗೆ ಸಂವಾದಿಯಾಗಿ ಬಂದಿದೆ. ಈ ಪದವನ್ನು ಮೊದಲು ಬಳಕೆಗೆ ತಂದದ್ದು ಪ್ರೊ. ಎಂ. ಮರಿಯಪ್ಪ ಭಟ್ಟರು. ಈ ಭಾಷೆಯ ಬಗೆಗೆ ಮೊದಲ ಬಾರಿಗೆ ವೈಜ್ಞಾನಿಕವಾಗಿ ಅಧ್ಯಯನ ನಡೆಸಿದ ಪ್ರೊ. ಕೆ. ಕುಶಾಲಪ್ಪಗೌಡರು ತಮ್ಮ ಗ್ರಂಥದಲ್ಲಿ 'ಗೌಡ ಕನ್ನಡ' ಎಂಬ ಪದವನ್ನೇ ಅಧಿಕೃತವಾಗಿ ಬಳಸಿದ್ದಾರೆ. (ಪುರುಷೋತ್ತಮ ಬಿ. ೧೯೯೦ : ೧೧೨)



ಕೃತಿ ಪುರುಷೋತ್ತಮ ಬಿಳಿಮಲೆ ಚಿತ್ರ ಸಂಖ್ಯೆ—೩

ಗೌಡರನ್ನು ಭಾಷಿಕ ದೃಷ್ಟಿಯಿಂದ ಎರಡು ಭಾಗ ಮಾಡಬಹುದು. ಒಂದು ಭಾಗ ತುಳು ಮಾತನಾಡುವ ಗೌಡರದ್ದು. ಇನ್ನೊಂದು ಭಾಗ ಅರೆಭಾಷೆ ಮಾತ ನಾಡುವವರದ್ದು. ಪ್ರಸ್ತುತ ಅಧ್ಯಯನದಲ್ಲಿ ಅರೆಭಾಷೆ ಮಾತನಾಡುವ ಗೌಡರನ್ನು ಭೇಟಿಯಾಗಿದ್ದೇನೆ. 'ಗೌಡ ಕನ್ನಡ' ವನ್ನು ಮಾತೃಭಾಷೆಯಾಗಿ ಹೊಂದಿದವರು ಸುಳ್ಯ ಮತ್ತು ಭಾಗಮಂಡಲದಲ್ಲಿ ವಾಸಿಸುತ್ತಿದ್ದಾರೆ. ಸುಳ್ಯ ಭಾಷೆಯ ದೃಷ್ಟಿ ಯಿಂದ ವಿಶಿಷ್ಟ ಪರಿಸರ. ಇಲ್ಲಿನ ಆಚರಣೆಗಳು. ಕುಣಿತಗಳು ದಕ್ಷಿಣ ಕನ್ನಡದ ಇತರ ಪರಿಸರಕ್ಕಿಂತ ಭಿನ್ನವಾಗಿವೆ.

ಗೌಡ ಕನ್ನಡವನ್ನು ಭಾಷಾವಿಜ್ಞಾನದ ದೃಷ್ಟಿಯಿಂದ ಅಧ್ಯಯನ ಮಾಡಿದವರು ಡಾ. ಕೆ. ಕುಶಾಲಪ್ಪ ಗೌಡರು. 'ಗೌಡ ಕನ್ನಡ' ಇವರ ಅಧ್ಯಯನ ಗ್ರಂಥ. ಸುಳ್ಯ, ಪುತ್ತೂರು, ಮಡಿಕೇರಿ ತಾಲೂಕುಗಳಲ್ಲಿ ಗೌಡರು ಮನೆಮಾತಾಗಿ ಬಳಸುವ ಕನ್ನಡದ ಪ್ರಭೇದವನ್ನು 'ಗೌಡಕನ್ನಡ'ವೆಂದು ಕರೆಯಲಾಗಿದೆ. ಕಾಸರಗೋಡು ತಾಲೂಕಿನ ಪೂರ್ವ ಭಾಗದಲ್ಲಿಯೂ ಈ ಮಾತನ್ನಾಡುವ ಗೌಡರು ನೆಲೆಸಿದ್ದಾರೆ. ಸುಳ್ಯ. ಪುತ್ತೂರು, ಬಂಟ್ವಾಳ ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಕೆಲವು ಗೌಡ ಮನೆತನಗಳಲ್ಲಿ ತುಳು ಮನೆ ಮಾತಾಗಿರುವುದು ಉಂಟು. ಮಾತು ಮಾತ್ರ ಬೇರೆ ಯಾಗಿದ್ದರೂ ಸಾಂಸ್ಕೃತಿಕ ಆಚರಣೆಗಳೆಲ್ಲವೂ ಬಹುಮಟ್ಟಿಗೆ ಒಂದೇ ಆಗಿವೆ.[೦]

ಶಿಷ್ಟಕನ್ನಡಕ್ಕೂ, ಗೌಡಕನ್ನಡಕ್ಕೂ ಧ್ವನಿ ಮತ್ತು ವ್ಯಾಕರಣಗಳಲ್ಲಿ ವ್ಯತ್ಯಾಸ ಗಳನ್ನು ಕಾಣಬಹುದು. ಗೌಡಕನ್ನಡದಲ್ಲಿ ಶಿಷ್ಟಕನ್ನಡಕ್ಕಿಂತ ಹೆಚ್ಚಿನ ಸ್ವರಾಕ್ಷರಗಳನ್ನು ಕಾಣುತ್ತೇವೆ. ಉದಾ: ।, ॰, ೬ ಮತ್ತು ೧ . ವ್ಯಂಜನಗಳಲ್ಲಿ ಗೌಡಕನ್ನಡದಲ್ಲಿ ಕಠಿಣ ಮತ್ತು ಮೃದು ವ್ಯಂಜನಗಳೊಡನೆ ಧ್ವನಿಮಾತ್ಮಕ ವ್ಯತ್ಯಾಸವಿದ್ದರೂ ಶಿಷ್ಟಕನ್ನಡದಲ್ಲಿ ಬಳಕೆಯಾಗುವ ಮಹಾಪ್ರಾಣಗಳ ಉಪಯೋಗವಿಲ್ಲ. ಶಿಷ್ಟಕನ್ನಡದಲ್ಲಿ 'ಶ, ಷ, ಸ' ಎಂಬ ಮೂರು ವಿಧದ ಉಷ್ಮಗಳು ಬಳಕೆಯಲ್ಲಿವೆ. ಆದರೆ ಗೌಡಕನ್ನಡದಲ್ಲಿ 'ಸ' ಎಂಬುದೊಂದೇ ಧ್ವನಿಮಾವಾಗಿದೆ. ವ್ಯಾಕರಣದ ವಿಭಾಗದಲ್ಲಿ ಮುಖ್ಯ ವ್ಯತ್ಯಾಸ ವೆಂದರೆ 'ಲಿಂಗವಿಭಜನೆ'ಯಲ್ಲಿ ಗೌಡಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗವೆಂಬ ಮೂರು ವಿಭಾಗವಿಲ್ಲ. ಬದಲಿಗೆ ಪುಲ್ಲಿಂಗ ಮತ್ತು ನಪುಂಸಕವೆಂಬ ಎರಡೇ ವಿಭಾಗವಿದೆ. ಸ್ತ್ರೀಲಿಂಗ ಏಕವಚನದಲ್ಲಿ ನಪುಂಸಕದೊಡನೆ ಸೇರುತ್ತದೆ. ಪ್ರಥಮ ಪುರುಷ ಬಹುವಚನದಲ್ಲಿ ಶಿಷ್ಟಕನ್ನಡದಲ್ಲಿ ಮಹತ್, ಅಮಹತ್, ಎಂಬ ಎರಡು ವರ್ಗಗಳಿದ್ದರೆ ಗೌಡಕನ್ನಡದಲ್ಲಿ ಬಹುವಚನ ಒಂದೇ ರೂಪ ಎಲ್ಲದಕ್ಕೂ ಪ್ರಯೋಗ ವಾಗುತ್ತದೆ. ಗೌಡಕನ್ನಡದಲ್ಲಿ ದ್ವಿತೀಯ ಮತ್ತು ಷಷ್ಠಿವಿಭಕ್ತಿಗಳನ್ನು ಗುರುತಿಸಲು ಒಂದೇ ರೀತಿಯ ಪ್ರತ್ಯಯವಿದೆ. ಆದರೆ ಶಿಷ್ಟಕನ್ನಡದಲ್ಲಿ ಅವು ಬೇರೆ ಬೇರೆ ಯಾಗಿವೆ. ಶಿಷ್ಟಕನ್ನಡದಲ್ಲಿ ಕ್ರಿಯಾಪದಗಳಲ್ಲಿ ಲಿಂಗಸೂಚಕ ಸರ್ವನಾಮ ಪ್ರತ್ಯಯ

ಗಳು ಬೇರೆ ಬೇರೆಯಾಗಿವೆ. ಆದರೆ ಗೌಡಕನ್ನಡದಲ್ಲಿ ಆ ವ್ಯತ್ಯಾಸವನ್ನೇ ತೋರಿಸುವುದಿಲ್ಲ.[೧೧]

ಉದಾ : 'ಅಂವ ಬಾತ್' 'ಅವನು ಬಂದನು'

[ anva bati ]

'ಅದ್ ಬಾತ್' 'ಅವಳು ಬಂದಳು, ಅದು ಬಂತು'

[ adi bati ]

'ಅವು ಬಂದೊ' 'ಅವರು ಬಂದರು, ಅವುಗಳು ಬಂದವು'

[ avu bandɔ ]

ಶಿಷ್ಟ ಕನ್ನಡವಲ್ಲಿ ಲಿಂಗವಾಚಕಗಳು ಐದು ರೀತಿಯಲ್ಲಿ ವಿಂಗಡನೆಯಾಗುತ್ತವೆ.

೧. ಅವನು ಬಂದನು (ಪುಲ್ಲಿಂಗ)
೨. ಅವಳು ಬಂದಳು (ಸ್ತ್ರೀಲಿಂಗ)
೩. ಅದು ಬಂದಿತು (ನಪುಂಸಕಲಿಂಗ)
೪. ಅವರು ಬಂದರು (ಮಹತ್ ವರ್ಗ)
೫. ಅವುಗಳು ಬಂದುವು (ಅಮಹತ್ ವರ್ಗ)

ಗೌಡ ಕನ್ನಡದಲ್ಲಿ ಶಿಷ್ಟಕ್ಕಿಂತ ಹೆಚ್ಚು ಸ್ವರಾಕ್ಷರಗಳಿವೆ. ಅವುಗಳನ್ನು 'ವಿಶಿಷ್ಟ ಧ್ವನಿಮಾ'ಗಳೆಂದು ಕರೆಯುತ್ತಾರೆ.

೧. 'i' : 'i' ಧ್ವನಿಯು ಪದಮಧ್ಯೆ ಅಥವಾ ಪದಾಂತ್ಯದಲ್ಲಿ ಬಳಕೆಯಾಗುತ್ತದೆ.

ಉದಾ : okk[i]l[i] (ಒಕ್ಕ್‌ಲ್) ಒಕ್ಕಲು (Tenent)
edd[i]r[i] (ಎದ್ದ್‌ರ್) ಏಳು (To get up)

೨. 'ə' : 'ə' ಧ್ವನಿಯು ಪದಮಧ್ಯೆ ಮಾತ್ರ ಬಳಕೆಯಾಗುತ್ತದೆ.

ಉದಾ : k[ə]tti (ಕೆತ್ತ್) (Sickle, Knife)
n[ə]di (ನೆಡ್) = ನೆಡು (Plant)

೩. 'ɛ' : 'ɛ' ಧ್ವನಿಯು ಪದಮಧ್ಯೆ ಮತ್ತು ಪದಾಂತ್ಯದಲ್ಲಿ ಬಳಕೆಯಾಗುತ್ತದೆ.

ಉದಾ : n[ɛ]g[ɛ] (ನೆಗ) = ನಗು (Laughter)
tal[ɛ] (ತಲೆ) = ತಲೆ (Head)
heri (ಹೆರ್) = ಹೆರು (To give birth)
h[ɛ]ru–'flux'

೪. ɔ : 'ɔ' ಧ್ವನಿಯು ಪದಮಧ್ಯೆ ಮತ್ತು ಪದಾಂತ್ಯದಲ್ಲಿ ಬಳಕೆಯಾಗುತ್ತದೆ.

ಉದಾ : h[ɔ]lɛ (ಹೊಳೆ) = ಹೊಳೆ (River)
h[ɔ]st*i* (ಹೊಸ್ತ್) = ಹೊಸದು (New)
nang[ɔ] (ನಂಗೊ ?) = ನನಗೊ ? (To me ?)
ol[ɔ] (ಒಳೊ) ಇದ್ದಾರೊ ? is he (they) in ?

ಗೌಡ ಕನ್ನಡದ ಹಲವು ಪದಗಳು ಪ್ರಾದೇಶಿಕ ವ್ಯತ್ಯಾಸವನ್ನು ಪಡೆದು ಕೊಂಡಿವೆ. ಮಡಿಕೇರಿಯ ಸಂಪಾಜೆ. ಪೆರಾಜೆ ಭಾಗಮಂಡಲ ಪ್ರದೇಶಗಳಲ್ಲಿ ಬಳಸುವ ಪದಗಳು ಸುಳ್ಯದ ಬೆಳ್ಳಾರೆ, ಸುಬ್ರಮಣ್ಯ, ಗುತ್ತಿಗಾರು ಪ್ರದೇಶಗಳಲ್ಲಿ ಮತ್ತು ಕಾಸರಗೋಡಿನ ಬಂದಡ್ಕ ಪ್ರದೇಶದಲ್ಲಿ ಭಿನ್ನರೂಪದಲ್ಲಿ ಬಳಕೆಯಾಗುತ್ತವೆ.[೧೧]

| ಉದಾ : | ಮಡಿಕೇರಿ ಕನ್ನಡ | ಸುಳ್ಯ ಕನ್ನಡ | ಕಾಸರಗೋಡು ಕನ್ನಡ | ಶಿಷ್ಟ ಕನ್ನಡ |
|---|---|---|---|---|
| ೧. | ಸೀರೆ | ಸೇಲೆ | | ಸೀರೆ |
| ೨. | ಹನೀಸ್/ಹಂಞ | ಒಸಿ | ಹಂಞ | ಸ್ವಲ್ಪ |
| ೩. | ಮಡಗು (ಮಂಡ್ಗ್) ಮೊಡೆಗೆ | ಇಸ್ | | ಇಡು |
| ೪. | ಗುಡ್ಡ | ನೀರಡಿ | | ಬಚ್ಚಲು |

ಗೌಡ ಕನ್ನಡದ ಕೆಲವು ಮೂಲ ಪದಗಳ ಬದಲಿಗೆ ಇವತ್ತು ಶಿಷ್ಟ ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಬಳಸುವುದು ಕಂಡುಬರುತ್ತದೆ.

| | ಗೌಡ ಕನ್ನಡ | ಶಿಷ್ಟ ಕನ್ನಡ | ಸಂಸ್ಕೃತ |
|---|---|---|---|
| ೧. | ಬೊಳ್ಪಿಗೆ | ಬೆಳಿಗ್ಗೆ | ಪ್ರಾತಃ |
| ೨. | ನೆಳ | ನೊಣ | |
| ೩. | ಹುಗ್ಗೆ | (ಪುಳ್ಗಿ–ಹಳಗನ್ನಡ) | ಅನ್ನ |

(ಪುಳ್ಗಿ = ಹುಗ್ಗಿ ಬೇಯಿಸುವುದರಿಂದ ಬಂದ ಅರ್ಥ)

**ಕೊನೆಟಿಪ್ಪಣಿಗಳು :**

೧. ಸ್ಟಿತ್ ಥಾಮ್ಸನ್ನರು ಜನಪದ ಕಥೆಯನ್ನು 'ಸಾಂಪ್ರದಾಯಿಕ ಗದ್ಯಕಥೆ' (traditional prose narrative) ಎಂದು ಕರೆದು, ಅದನ್ನು ಹೀಗೆ ವಿವರಿಸಿದ್ದಾರೆ, 'The story which has been handed down from generation of either in writing or by word of mouth'. (೧೯೬೬)

೨. ಸ್ಟಿತ್ ಥಾಮ್ಸನ್ನರ ಮಾತು ಹೀಗಿದೆ. 'All though the term folktale is often used in English to refer to the household tales of Fairy tales'. ಇಲ್ಲಿ ಥಾಮ್ಸನ್ನರು Folktale ಮತ್ತು Fairy tale ನ್ನು ಒಂದೇ ಅರ್ಥದಲ್ಲಿ ಬಳಸಿರುವುದು ಸ್ಪಷ್ಟ. ಮಲಿನೋವಸ್ಕಿ ಕೂಡಾ Fairy tale ಎಂಬ ಪದವನ್ನೇ ಬಳಸಿದ್ದುಂಟು.

೩. ಜನಪದ ಕಥೆಗಳ ಕ್ಷೇತ್ರದಲ್ಲಿ ನಡೆದ ಅಧ್ಯಯನದ ಸಮೀಕ್ಷೆಗಾಗಿ ನೋಡಿರಿ. (ಸಂಧ್ಯಾರೆಡ್ಡಿ ೧೯೮೨ : ೩೩೧–೩೫೦).

೪. ' ...... A traditional tale that has an independent existence. I may be told as a complete narrative and does not depend for its meaning on any other tale. It may indeed happen to be told with another tale, but the fact that it may appear alone attests its independence. It may consist of only one motif or many............ The ordinary Murchen (tale like Cinderella or Snow White) are types consisting of many of them'. (Thompson Stith ೧೯೫೦ : ೪೧೫)

೫. A motif is the smallest element in a tale having a power to persist in tradition. In order to have this power it must have something unusual and striking about it. Most motifs fall into three classes. First are the actors in a tale–gods, or unusual animals............or conventionalized human characters like the favorits youngest child or the cruel step–mother. Second come certain items in the back ground of the action–magic objects, unusual customs, strange beliefs and the like. In the third place are single incidents–and these compose the great mejority of motifs. It is this last class that can have an independent existence

and that may therefore serve as true tale-types. By far the largest number of traditional types consist of these single motifs". (Thompson Stith ೧೯೫೧ : ೪೧೫-೪೧೬)

೬. ಕ್ಷೇತ್ರ ಕಾರ್ಯದ ಪಟ್ಟಿಕೆಯು ಮಾದರಿಯನ್ನು ಅನುಬಂಧದಲ್ಲಿ ಕೊಡಲಾಗಿದೆ.

೭. ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ ಉಡುಪಿ – ಇವರು ನನಗೆ ಕ್ಯಾಸೆಟ್ಟುಗಳನ್ನು ಒದಗಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.

೮. ಹೆಚ್ಚಿನ ವಿವರಕ್ಕೆ ನೋಡಿ : ಬಿ. ಪುರುಷೋತ್ತಮ ೧೯೮೫.

೯. ಗೌಡರಲ್ಲಿ 'ಬಳಿ' ಪದ್ಧತಿ ತಂದೆಯಿಂದ ಮಗನಿಗೆ ಇಳಿದು ಬರುವುದರಿಂದ, ಒಂದೇ ಬಳಿಯ ಹುಡುಗ-ಹುಡುಗಿಯರು ಮದುವೆಯಾಗುವುದಕ್ಕೆ ಗೌಡರಲ್ಲಿ ನಿಷೇಧವಿದೆ. ಸುಳ್ಯ ಪರಿಸರದ ಜನಪ್ರಿಯ ಜನಪದ ಕಥೆಯೊಂದರಲ್ಲಿ ಸಹೋದರ ಸಹೋದರಿಯರ ಮದುವೆಯ ನಿಷೇಧದ ಬಗ್ಗೆ ಉಲ್ಲೇಖವಿದೆ. ಹೆಚ್ಚಿನ ವಿವರಗಳಿಗೆ ನೋಡಿ : (ಬಿ. ಪುರುಷೋತ್ತಮ ಬಿಳಿಮಲೆ ೧೯೯೦ : ೧೦೦-೧೦೩).

೧೦. "The term 'Gowda Kannada' is used to identify the dialect of Kannada. Spoken by a people called Gowdas, who are the natives of the areas of Puttur, Sullia and Mercara Taluks of the present Mysore State and also in the eastern part of Kasaragod Taluk, which is now attached to Kerala State. The number of Gowda's is estimated to be about sixty thousand". (Kushalappa Gowda, K. ೧೯೭೦ : VII-ಮುನ್ನುಡಿಯಿಂದ)

೧೧. ಉಲ್ಲೇಖ : ಗೌಡ ಕನ್ನಡ ಭಾಷೆಯ ಪದಗಳ ಉಚ್ಚಾರಣೆ ಮತ್ತು ಅವುಗಳಲ್ಲಿಯ ವಿಶಿಷ್ಟ ಧ್ವನಿಮಾಗಳನ್ನು ಡಾ. ಕುಶಾಲಪ್ಪಗೌಡರ 'GOWDA KANNADA' (೧೯೭೦) ಪುಸ್ತಕದಿಂದ ಬಳಸಿಕೊಳ್ಳಲಾಗಿದೆ.

○

ಅಧ್ಯಾಯ – ೩

## ೧.೩ ಗೌಡ ಕನ್ನಡದ ಜನಪದ ಕಥೆಗಳ ಸಮೀಕ್ಷೆ :

೧.೩.೧ ಪ್ರಾಣಿಕಥೆಗಳು (Animal Tales)

೧.೩.೨ ಸಾಮಾನ್ಯ ಜನಪದ ಕಥೆಗಳು (Ordinary Folktales)

೧.೩.೩ ಹಾಸ್ಯ ಕಥೆಗಳು ಮತ್ತು ಹನಿ ಕಥೆಗಳು (Jokes and Anecdote Tales)

೧.೩.೪ ಸೂತ್ರ ಕಥೆಗಳು (Formal Tales)

ಒಂದು ಪ್ರದೇಶದ ಜನಪದ ಕಥೆಗಳನ್ನು ಸಂಗ್ರಹ ಮಾಡಿ, ಪ್ರಚಲಿತವಿರುವ ಎಲ್ಲಾ ಕಥೆಗಳನ್ನು ಪರಿಚಯ ಮಾಡಿಕೊಳ್ಳಬೇಕಾದರೆ ಮಹತ್ತರವಾದ ಪ್ರಯತ್ನ ಬೇಕಾಗುತ್ತದೆ. ಪ್ರದೇಶವೊಂದರ ಕಥೆಗಳಲ್ಲಿ ಭಿನ್ನತೆ ಇದೆಯೇ ಎಂದು ಹುಡುಕುವಾಗ ಆ ಪ್ರದೇಶದ ಮೂಲೆ ಮೂಲೆಯಲ್ಲಿರುವ ಕಥೆಗಳ ಭಿನ್ನ ಪಾಠಗಳನ್ನು ಸಂಗ್ರಹ ಮಾಡಬೇಕಾಗುತ್ತದೆ. ಹೀಗೆ ಅಪಾರ ಸಂಖ್ಯೆಯಲ್ಲಿ ಸಂಗ್ರಹಿಸಿದ ಕಥೆಗಳ ವಸ್ತು, ಅದು ತಳೆದಿರುವ ಭಿನ್ನ ಪಾಠಗಳು, ಭಿನ್ನ ಪಾಠಗಳಲ್ಲಿ ಪ್ರಭಾವ ಬೀರಿದ ಭೌಗೋಳಿಕ – ಭಾಷಿಕ – ಸಾಂಸ್ಕೃತಿಕ – ಧಾರ್ಮಿಕ ಅಂಶ ಗಳು, ನಿರೂಪಕನ ಸ್ಥಾನ ಇತ್ಯಾದಿ ಅಂಶಗಳನ್ನು ಅಧ್ಯಯನ ಮಾಡಿ ಆ ಎಲ್ಲಾ ಕಥೆಗಳ ಬಗ್ಗೆ ಕೆಲವು ನಿರ್ಧಾರಗಳನ್ನು ತಳೆಯಬಹುದು. ಆದರೆ ಪ್ರಕೃತ ಅಧ್ಯಯನದಲ್ಲಿ ಈ ಕೆಲಸವನ್ನು ಮಾಡಿಲ್ಲ. ಯಾಕೆಂದರೆ ವರ್ಗಸೂಚಿ ಮತ್ತು ಆಶಯಸೂಚಿಯ ಸಿದ್ಧತೆಗೆ ಈ ಅಂಶಗಳು ಉಪಯುಕ್ತವಲ್ಲ. ಇದನ್ನು ಗಮನದಲ್ಲಿರಿಸಿ ಕೊಂಡು ಈ ಅಧ್ಯಾಯದಲ್ಲಿ ಗೌಡ ಕನ್ನಡದ ಜನಪದ ಕಥೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಹಾಗೆ

ಪರಿಚಯಿಸುವಾಗ ಆರ್ನೆ ಥಾಮ್ಸನ್ನರ 'The Types of the Foktales' ಗ್ರಂಥದ ಸ್ಥೂಲವಾದ ವಿಭಾಗ ಕ್ರಮವನ್ನೇ ಅಳವಡಿಸಿಕೊಳ್ಳಲಾಗಿದೆ. ಆ ಪ್ರಕಾರ ಗೌಡ ಕನ್ನಡದ ಜನಪದ ಕಥೆಗಳನ್ನು ಸ್ಥೂಲವಾಗಿ ಈ ರೀತಿ ವರ್ಗೀಕರಿಸಬಹುದು.

೧. ಪ್ರಾಣಿ ಕಥೆಗಳು (Animal Tales)
೨. ಸಾಮಾನ್ಯ ಜನಪದ ಕಥೆಗಳು (Ordinary Folk tales)
೩. ಹಾಸ್ಯ ಮತ್ತು ಹನಿ ಕಥೆಗಳು (Jokes and Anecdotes)
೪. ಸೂತ್ರ ಕಥೆಗಳು (Formal Tales)
೫ ಅಪೂರ್ವ ಕಥೆಗಳು (Intinished Tales)

ಕಥೆಗಳ ವರ್ಗಸೂಚಿಯನ್ನು ಪ್ರತ್ಯೇಕವಾಗಿ ಮುಂದಿನ ಅಧ್ಯಾಯದಲ್ಲಿ ಕೊಡಲಾಗುವುದು.

### ೧.೩.೧ : ಪ್ರಾಣಿ ಕಥೆಗಳು (Animal Tales) :

ಗೌ.ಕ.ಜ.ಕ. ೧. ಮೊಸಳೆಯನ್ನು ಮೊಲ ಮೋಸಗೊಳಿಸುವುದು.

ಒಂದು ಮೊಲ ಕಾಡಲ್ಲಿ ಮೇಯುತ್ತಿತ್ತು. ಅದು ಮೇಯುವ ಕಾಡಲ್ಲಿ ಹುಲ್ಲು ಕಡ್ಡಿಗಳು ಮುಗಿಯಿತು. ಮೊಲ ಮತ್ತೊಂದು ಕಾಡಿಗೆ ಹೊರಟಿತು. ದಾರಿಗೆ ಅಡ್ಡವಾಗಿ ದೊಡ್ಡ ಹೊಳೆ ಇತ್ತು. ಮೊಲ ಆಚೆ ದಡ ಸೇರುವುದು ಕಷ್ಟವೆಂದು ಅಲ್ಲೇ ದಡದಲ್ಲಿ ಕಾದು ಕುಳಿತಿತ್ತು. ಅಲ್ಲಿಗೆ ಒಂದು ಮೊಸಳೆ ಬಂತು. ಮೊಸಳೆ ಮೊಲದ ಕಷ್ಟ ಸುಖ ವಿಚಾರಿಸಲು ಪ್ರಾರಂಭಿಸಿತು. ಮೊಲ ಹೇಳಿತು, 'ನಾನು ನಿಮ್ಮ ಮೊಸಳೆ ಜಾತಿ ಹೆಚ್ಚೊ, ನಮ್ಮ ಮೊಲ ಜಾತಿ ಹೆಚ್ಚೊ ಎಂದು ಲೆಕ್ಕ ಹಾಕುತ್ತಿದ್ದೇನೆ' ಎಂದಿತು. ಮೊಸಳೆ ನಮ್ಮ ಜಾತಿಯೇ ಹೆಚ್ಚು ಎಂದಿತು, ಇಬ್ಬರಿಗೂ ಚರ್ಚೆ ನಡೆದಾಗ ಮೊಲ ಹೇಳಿತು, 'ಹಾಗಾದರೆ ನಿಮ್ಮ ಜಾತಿಯವರೆಲ್ಲಾ ಬರಲಿ. ನಾನು ಲೆಕ್ಕ ಮಾಡುವೆ'ನೆಂದು. ಹಾಗೆ ಎಲ್ಲಾ ಮೊಸಳೆಗಳು ಬಂದುವು. ಸಾಲಾಗಿ ಈ ದಡದಿಂದ ಆಚೆ ದಡಕ್ಕೆ ನಿಂತವು. ಮೊಲ ಎಣಿಕೆ ಮಾಡುತ್ತಾ ಬೆನ್ನ ಮೇಲೆ ಹಾರಿ ಹಾರಿ ಆಚೆ ದಡ ಸೇರಿತು. ದೂರದಲ್ಲಿ ನಿಂತು ನಮ್ಮ ಜಾತಿಯವರೇ ಹೆಚ್ಚು ಎಂದು ಹೇಳಿ ಕಾಡಿಗೆ ಹೋಯಿತು.

ಗೌ.ಕ.ಜ.ಕ. ೨. ಮೋಸ ಮಾಡಲು ಹೋದ ನರಿಯು ತನ್ನ ಬಲೆಯಲ್ಲಿ ತಾನೇ ಸಿಲುಕಿ ಸಾಯುವುದು.

ಒಂದು ಹುಲಿಗೆ ಮೂರು ಮರಿಗಳಿದ್ದವು. ಆ ಹುಲಿ ಸಾಕು ಪ್ರಾಣಿಗಳನ್ನೇ ಹಿಡಿದು ತಿನ್ನುತ್ತಿತ್ತು. ಒಮ್ಮೆ ಆ ಊರ ಜನರು ಹುಲಿಯ ಬೇಟೆಗೆ ಹೊರಟರು. ಹುಲಿ ಆಮೇಲೆ ಸಾಕು ಪ್ರಾಣಿಗಳನ್ನು ತಿನ್ನುವುದನ್ನು ನಿಲ್ಲಿಸಿ ಕಾಡು ಪ್ರಾಣಿಗಳನ್ನು

ತಿನ್ನಲು ಪ್ರಾರಂಭಿಸಿತು. ಮೊದಲು ಮುಚ್ಚ (ಮಂಗ ಜಾತಿಗೆ ಸೇರಿದ್ದು) ಎಂಬ ಪ್ರಾಣಿಯ ಸಂತಾನವನ್ನು ಮುಗಿಸುತ್ತಾ ಬಂತು. ಇವರಿಂದಾಗಿ ಒಂದು ಮುಚ್ಚ ತುಂಬಾ ಬೇಸರದಲ್ಲಿತ್ತು. ಅಲ್ಲಿಗೆ ಒಂದು ನರಿ ಬಂತು. ಮುಚ್ಚನಿಗೆ ಸಹಾಯ ಮಾಡಲು ಉಪಾಯ ಹುಡುಕಿತು. ನರಿಯ ಉಪಾಯದಂತೆ ಮುಚ್ಚನನ್ನು ಕೂಡಿ ಕೊಂಡು ಹುಲಿಯ ಗುಹೆಗೆ ಹೊರಟಿತು. ಮುಚ್ಚನಿಗೆ ಹುಲಿಯ ಹತ್ತಿರ ಹೋಗಲು ಹೆದರಿಕೆಯಾಯಿತು. ಆಗ ನರಿ ಇನ್ನೊಂದು ಉಪಾಯ ಹೇಳಿತು. ಆ ಪ್ರಕಾರ ನರಿಯ ಬಾಲವನ್ನು ಮುಚ್ಚನ ಬಾಲಕ್ಕೆ ಕಟ್ಟಿತು. ಹುಲಿಯ ಗುಹೆಯ ಬಾಗಿಲಲ್ಲಿ ನಿಂತು ಎರಡೂ ಸೇರಿ ಕರೆಯುತ್ತವೆ. ಹುಲಿ ಬಂದ ವಿಚಾರವನ್ನು ಕೇಳಿತು. ನರಿಯ ಉಪಾಯಕ್ಕೆ ಹುಲಿಯೂ ಒಂದು ಉಪಾಯದ ಮಾತು ಹೇಳಿತು. ಅಯ್ಯೋ ಮುಚ್ಚನೇ ಈ ನರಿಯಣ್ಣ ನನಗೆ ಅಂದೇ ಮಾತು ಕೊಟ್ಟಿದ್ದ ಹದಿನಾರು ಮುಚ್ಚರನ್ನು ಕರೆದು ತರುತ್ತೇನೆಂದು. ಈಗ ನಿನ್ನೊಬ್ಬನನ್ನೇ ಕರೆದು ತಂದಿದ್ದಾನೆ. ಇಷ್ಟು ಹೇಳಿದ್ದೇ ಹೇಳಿದ್ದು, ಮುಚ್ಚ ಹಾರಿ ಬಿದ್ದು ಓಡಿತು. ನರಿಯನ್ನು ಎಳೆದು ಓಡಿದ್ದರಲ್ಲಿ ನರಿ ಸತ್ತು ಹೋಯಿತು. ಅನಂತರ ಆ ಮುಚ್ಚವು ಎಲ್ಲ ಮುಚ್ಚಗಳಿಗೆ ರಾಜನಾಯಿತು. [ತು.ಜ.ಕ. (ವಿ)]

ಗೌ.ಕ.ಜ.ಕ. ೩. ನರಿಯ ಉಪಾಯ ತನ್ನ ವಂಶದ ನಾಶಕ್ಕೆ ಕಾರಣವಾಯಿತು.

ಒಂದು ಊರಿಗೆ ಒಬ್ಬ ಊರುಗೌಡ. ಆತನ ಮನೆಯಲ್ಲಿ ನರಿ ಮತ್ತು ಹಂದಿ ಕೆಲಸಗಾರರಾಗಿ ಸೇರುತ್ತವೆ. ಒಂದು ದಿನ ನರಿ ಗದ್ದೆ ಉಳುವಾಗ ಗದ್ದೆಯ ಮಧ್ಯೆ ಒಂದು ಕಲ್ಲು ನೇಗಿಲಿಗೆ ಸಿಗುತ್ತದೆ. ಆ ಕಲ್ಲನ್ನು ತೆಗೆಯಲು ಆಗದಿರುವುದರಿಂದ ತೋಟೆ ಹಾಕುವ ಉಪಾಯವನ್ನು ನರಿ ಊರುಗೌಡನಿಗೆ ಹೇಳುತ್ತದೆ. ನರಿಯ ಉಪಾಯದಂತೆ ಕಲ್ಲಿಗೆ ತೋಟೆ ಹಾಕುವ ತಯಾರಿ ಮಾಡುತ್ತಾರೆ. ತೋಟೆಗೆ ಬೆಂಕಿ ಕೊಡಲು ಹಂದಿಯನ್ನು ಕಳುಹಿಸುತ್ತಾರೆ. ಹಂದಿ ಹೆಡ್ಡನಾದುದರಿಂದ ಬೆಂಕಿ ಕೊಡಲು ಒಪ್ಪಿತು. ಬೆಂಕಿ ಕೊಟ್ಟು ಬೇಗ ಬರಬೇಕೆಂದು ನರಿ ಹೇಳಿರದ ಕಾರಣ ಹಂದಿ ಅಲ್ಲೇ ನಿಂತಿತು. ತೋಟೆ ಸಿಡಿದಾಗ ಹಂದಿಯ ಎರಡು ಕಣ್ಣುಗಳೂ ಹೋದವು. ಕಣ್ಣಿಲ್ಲದ ಹಂದಿಯನ್ನು ನರಿ ಕರೆದುಕೊಂಡು ಗೌಡರ ಮನೆ ದಾರಿ ಹಿಡಿಯಿತು. ಬರುವಾಗ ನರಿಗೆ ಇನ್ನೊಂದು ಉಪಾಯ ಹೊಳೆಯಿತು. ಹಂದಿ ಯನ್ನು ಕೆರೆಯೊಂದಕ್ಕೆ ಬೀಳುವಂತೆ ಮಾಡಿ, ಗುಡ್ಡದಮೇಲೆ ನಿಂತು ಊರವರಿಗೆಲ್ಲಾ ಕೂಗಿ ಹೇಳಿತು. ಹಂದಿ ಕೆರೆಗೆ ಬಿತ್ತೆಂದು ಮನೆಯವರು ದೊಣ್ಣೆ, ಕೋವಿ, ಕತ್ತಿ ತಂದು ಹಂದಿಯನ್ನು ಕೊಂದರು. ಮಾಂಸ ಮಾಡಿದರು. ನರಿ ಎಲ್ಲಾ ಮನೆಗಳಿಗೂ ಬೆಂಕಿ ಕೊಟ್ಟು, ಜೋರಾಗಿ ಕೂಗಿ ಹೇಳಿತು. ಮನೆಗೆ ಬೆಂಕಿ ಬಿತ್ತೆಂದು ಜನ ಹಂದಿ ಮಾಂಸ ಬಿಟ್ಟು ಮನೆಗೆ ಓಡಿದರು. ನರಿ ಬೇಕಷ್ಟು ಮಾಂಸ ತಿಂದು, ಸ್ವಲ್ಪ ಬಾಲದಲ್ಲಿ ಪೋಣಿಸಿ ಇನ್ನು ಸ್ವಲ್ಪ ಕೈಕಾಲಲ್ಲಿ ಹಿಡಿದುಕೊಂಡು ಓಡಿತು. ಓಡುವ

ರಭಸಕ್ಕೆ ಬಾಲದ ಮಾಂಸ ಎಲ್ಲಾ ಬಿದ್ದುಹೋಯಿತು. ಮಾಂಸ ಬಿದ್ದುಹೋಯಿತೆಂದು ಕೋಪದಲ್ಲಿ ಬಾಲವನ್ನು ಚೆನ್ನಾಗಿ ಗುದ್ದಿತು. ಮಾರನೆಯ ದಿನ ಪಕ್ಕದ ಊರಿನ ಬ್ರಾಹ್ಮಣರ ಮನೆಯಲ್ಲಿ ಮದುವೆ. ಒಬ್ಬ ತುಪ್ಪಕ್ಕೆಂದು ಊರೂರು ಹೋಗುತ್ತಿದ್ದನು. ಅವನಿಗೆ ಬೇಕಷ್ಟು ತುಪ್ಪವನ್ನು ನರಿ ತನ್ನ ಬಾಲದಿಂದ ಹಿಂಡಿಕೊಟ್ಟಿತು. ನರಿಯ ಕುತಂತ್ರದಿಂದಾಗಿ ಮಾರನೆಯ ದಿನ ನರಿಯ ಬೇಟೆ ಮಾಡಿದರು. ಮೇಣದ ಬೊಂಬೆ ಮಾಡಿ ನರಿ ಬರುವ ದಾರಿಗೆ ಇಟ್ಟರು. ನರಿ ಬೊಂಬೆಯನ್ನು ಮುಟ್ಟಿ ಮೈಯೆಲ್ಲಾ ಮೇಣ ಅಂಟಿತು. ಮೇಣ ಅಂಟಿತೆಂದು ನೆಲದಲ್ಲಿ ಹೊರಳಾಡಿತು. ಮೈಯ ಬಣ್ಣ ಬದಲಾಯಿತು. ಮಾರನೆಯ ದಿನ ನರಿ ತನ್ನ ಜಾತಿ ಬೇರೆ ಎಂದು ಹೇಳಿತು. ತನಗೆ ಭೂತ ಕಟ್ಟಲು ಗೊತ್ತಿದೆ ಎಂದು ಹೇಳಿತು. ಹಾಗಾಗಿ ಕೆಲವು ದಿನ ಕಳೆದು ನರಿಯ ಭೂತದ ಏರ್ಪಾಡಾಯಿತು. ಆ ದಿನ ನರಿಯ ಜಾತಿಯವರೆಲ್ಲಾ ಸೇರಿದ್ದರು. ನರಿಯ ಭೂತ ಸುಳ್ಳು ಎಂದು ಗೊತ್ತಾಗಿ ಎಲ್ಲಾ ನರಿಗಳನ್ನು ಕೊಂದರು. [ತು.ಜ.ಕ.(ಎ)]

ಗೌ.ಕ.ಜ.ಕ. ೪. ಬೆಕ್ಕಿನ ಉಪಾಯದಿಂದ ನರಿಯ ವಂಶದ ನಾಶಕ್ಕೆ ಕಾರಣವಾಯಿತು.

ಒಂದು ಬೆಕ್ಕು ಮಗಳ ಮನೆಗೆ ಹೊರಟಿತು. ದಾರಿಯಲ್ಲಿ ಹುಲಿ, ತೋಳ, ಬೆಕ್ಕನ್ನು ತಿನ್ನಲು ಬಂದವು. ಬೆಕ್ಕು ಮಗಳ ಮನೆಗೆ ಹೋಗಿ ಬರುತ್ತೇನೆಂದು ಸಮಾಧಾನ ಹೇಳಿ ಹೋಯಿತು. ಸ್ವಲ್ಪ ಮುಂದೆ ಹೋದಾಗ ನರಿಯಣ್ಣ ಸಿಕ್ಕಿದ. ಬೆಕ್ಕನ್ನು ಓಡಿಸಿದ. ಅದೇ ಊರಿನ ಬ್ರಾಹ್ಮಣರ ಮನೆಯಲ್ಲಿ ಮದುವೆ ಸಮಾರಂಭ. ಬೆಕ್ಕು ಮತ್ತು ನರಿ ಮದುವೆ ಮನೆಗೆ ನುಗ್ಗಿದವು. ಮಾಳಿಗೆಗೆ ಹೋದವು. ಅಲ್ಲಿ ಮದುವೆಗೆ ಮಾಡಿದ ವಿವಿಧ ಭಕ್ಷ್ಯಗಳು, ತಿಂಡಿಗಳು ಇದ್ದವು. ಎರಡೂ ಹೊಟ್ಟೆ ತುಂಬ ತಿಂದವು. ಅಷ್ಟರಲ್ಲಿ ಮದುವೆ ಚಪ್ಪರದಿಂದ ಸೋಬಾನೆ ಪದ ಕೇಳಿಸುತ್ತಿತ್ತು. ಹೊಟ್ಟೆ ತುಂಬಿದ ಸಂತೋಷದಲ್ಲಿ ಎರಡಕ್ಕೂ ಸೋಬಾನೆ ಹಾಡೋಣವೇ ಎಂಬ ಯೋಚನೆ ಆಯಿತು. ಮೊದಲು ಬೆಕ್ಕು ಕೂಗಿತು. ನಂತರ ನರಿ ಊಳಿಡಲು ಪ್ರಾರಂಭಿಸಿತು. ಬ್ರಾಹ್ಮಣರು ಓಡಿ ಬಂದು ನರಿಗೆ ಹೊಡೆದು ಪಕ್ಕದ ತೋಟಕ್ಕೆ ಹಾಕಿದರು. ನರಿ ಸತ್ತಂತೆ ನಟನೆ ಮಾಡಿತು. ಸಂಜೆ ಹೊತ್ತಿಗೆ ನರಿಗೆ ಎಚ್ಚರಾದಾಗ ಮೈಯೆಲ್ಲಾ ಗಾಯವಾಗಿತ್ತು. ಎದ್ದು ಕೂತಿರಬೇಕಾದರೆ ಒಬ್ಬ ಭೂತ ಕಟ್ಟುವವ ಅದೇ ದಾರಿಯಾಗಿ ಬರುತ್ತಿದ್ದ. ಆತನಲ್ಲಿ ನರಿ ಔಷಧಿ ಕೇಳಿತು. ಭೂತ ಕಟ್ಟುವಾತ ಎಲ್ಲಾ ನರಿಗಳನ್ನು ಒಟ್ಟು ಸೇರಲು ಸೂಚನೆ ಕೊಡಬೇಕು ಎಂದ. ನರಿಗಳೆಲ್ಲಾ ಒಟ್ಟು ಸೇರಿದಾಗ ದೊಡ್ಡ ಬಾಂಜಾರದಲ್ಲಿ ನಿಲ್ಲಲು ಭೂತ ಹೇಳಿತು. ಊರವರೆಲ್ಲಾ ಸೇರಿ ಬಾಂಜಾರದಲ್ಲಿದ್ದ ನರಿಗಳನ್ನು ಹೊಡೆದು ಸಾಯಿಸಿದರು.

ಗೌ.ಕ.ಜ.ಕ ೫. ನರಿ ಮನುಷ್ಯನನ್ನು ಮೋಸಮಾಡುವುದು.

ಒಂದು ಊರಲ್ಲಿ ಮೂರು ಜನ ಸಹೋದರರು. ಒಮ್ಮೆ ಸೌತೆಕಾಯಿ ಬೆಳೆ ಮಾಡುತ್ತಾರೆ. ಸೌತೆಕಾಯಿ ಆಗಲು ಪ್ರಾರಂಭವಾದಾಗ ಒಂದು ನರಿ ತಿನ್ನಲು ಬರುತ್ತದೆ. ಮೂವರು ಸಹೋದರರಿಗೂ ನರಿಯನ್ನು ಓಡಿಸುವುದಕ್ಕೆ ಉಪಾಯ ಹೊಳೆಯುವುದಿಲ್ಲ. ಕೆಲವು ದಿನ ಕಳೆದು ಒಂದು ಉಪಾಯ ಹೂಡುತ್ತಾರೆ. ಈ ಸಹೋದರರು ಚಪ್ಪರದಲ್ಲಿ ಪಾರ ಕುಳಿತಾಗ ಎದುರಲ್ಲೇ ನರಿ ತಿಂದು ಹೋಗುತ್ತದೆ. ಬೇಸರಕ್ಕೆ ಕೊಳಲು ಊದುವ ಅಭ್ಯಾಸವಿತ್ತು. ನರಿ ಬೇಕಷ್ಟು ತಿಂದು ಕೊಳಲು ಊದುವುದನ್ನೂ ಕೇಳುತ್ತಿತ್ತು. ಮರುದಿನ ಒಂದು ಉಪಾಯ ಮಾಡಿದರು. ಕೊಳಲು ಊದುವಾಗ ಬೆಂಕಿಯ ರಾಶಿ ಮಾಡಿದರು. ಆ ದಿನ ಚಳಿಯಾಗುತ್ತದೆಂದು ನರಿ ಬೆಂಕಿ ಕಾಯಲು ಬಂತು. ಇವರು ಬೆಂಕಿ ರಾಶಿಗೆ ಒಂದು ಕಬ್ಬಿಣದ ಸರಳನ್ನು ಬಿಸಿಯಾಗಲು ಇಡುತ್ತಾರೆ. ಸುಮಾರು ಹೊತ್ತು ಊದಿದಾಗ ನರಿ ಹಾಗೇ ಕುಳಿತಿತ್ತು. ಕಬ್ಬಿಣದ ಸರಳು ಕೆಂಪು ಆದಾಗ ನರಿಯ ಕುಂಡಿಗೆ ಇಟ್ಟರು. ನರಿ ಉರಿ ತಡೆಯಲಾರದೆ ದೊಡ್ಡ ಬಯಲು ಪ್ರದೇಶಕ್ಕೆ ಹೋಯಿತು. ಅಲ್ಲಿ ಒಂದು ದೊಡ್ಡ ಆನೆ ಸತ್ತು ಬಿದ್ದಿರುತ್ತದೆ. ನರಿ ಅದರ ಕುಂಡಿಗೆ ನುಗ್ಗಿ ತಿನ್ನಲು ಪ್ರಾರಂಭಿಸಿತು. ಅದು ಒಳಗೆ ಹೋದಂತೆ ಆನೆಯ ಕುಂಡೆ ಮುಚ್ಚಿಕೊಂಡಿತು. ಅಲ್ಲಿಗೆ ದನ ಮೇಯಿಸುವ ಹುಡುಗರು ಬಂದರು. ಆಗ ನರಿಗೆ ಹೊರಗೆ ಬರಲು ಕಷ್ಟವಾಯಿತು. ನರಿ ಒಳಗಿಂದಲೇ ಮಕ್ಕಳನ್ನು ಕರೆದು, "ಏ ಮಕ್ಕಳೇ ಆನೆ ದೇವರು ಬಿದ್ದಿದ್ದಾರೆ. ಆನೆ ದೇವರಿಗೆ ಪೂಜೆ ಮಾಡಲು ತುಪ್ಪ, ಬೆಂಕಿ, ಕತ್ತಿ, ದೊಣ್ಣೆ, ನಾಯಿ ಎಲ್ಲರನ್ನೂ ಕರೆದುಕೊಂಡು ಬನ್ನಿ" ಎಂದು ನರಿ ಹೇಳಿತು. ಎಲ್ಲವೂ ತಯಾರಾಯಿತು. ಆನೆಯ ಕುಂಡೆಗೆ ತುಪ್ಪ ಹಾಕಿ ಬೆಂಕಿ ಕೊಟ್ಟಾಗ, ನರಿಗೆ ಓಡಲು ದಾರಿ ಆಯಿತು. ಆನೆ ದೇವರು ಹೊರಡುತ್ತಾರೆಂದು ಮೂರು ಮೂರು ಬಾರಿ ಹೇಳಿ ನರಿ ಓಡಿತು.

[ಕ.ಜ.ಕ (ಸಂ), (ವೀ), ತು. ಜ.ಕ (ವಿ) ]

ಗೌ.ಕ.ಜ.ಕ ೬. ಜಾಣ ನರಿ ಉಪಾಯದಿಂದ ಪಾರಾದದ್ದು.

ಒಂದು ನರಿಗೆ ಕದಿಯಲು ಕೋಳಿಯೇ ಸಿಗುತ್ತಿರಲಿಲ್ಲ. ಆ ಊರಿನಲ್ಲಿ ಇಬ್ಬರು ಪ್ರೇಮಿಗಳು. ಅವರಿಬ್ಬರ ಮನೆಗೆ ನುಗ್ಗಿ ನರಿ ಗಂಜಿ ತಿನ್ನುತ್ತಿತ್ತು. ಇದರಿಂದಾಗಿ ಆ ಎರಡೂ ಮನೆಯವರಿಗೂ ಜಗಳ ಆಯಿತು. ಒಂದು ದಿನ ಒಂದು ಮನೆಯವರು ಅಟ್ಟ (ಮಾಳಿಗೆ) ದಲ್ಲಿ ಕಾದು ಕುಳಿತು ನೋಡುತ್ತಾರೆ. ಆ ದಿನ ನರಿ ಬಂದು ಗಂಜಿ ತಿಂದು ಹೋಯಿತು. ಮಾರನೆಯ ದಿನ ಒಂದು ಕಬ್ಬಿಣದ ಸರಳನ್ನು ಕಾಯಿಸಿ ಇಟ್ಟರು. ನರಿ ಗಂಜಿ ತಿನ್ನುವಾಗ ಅದರ ಕುಂಡೆಗೆ ಇಟ್ಟರು. ನರಿಗೆ ಉರಿ ತಡೆಯಲಾರದೆ ಬಂಡೆ ಕಲ್ಲಲ್ಲಿ ಕುಳಿತುಕೊಂಡಿತು. ಸ್ವಲ್ಪ ಹೊತ್ತಾದಾಗ ನರಿಯ ಕುಂಡೆ

ಕಲ್ಲಿಗೆ ಅಂಟಿಕೊಂಡಿತು. ನರಿಗೆ ಈಗ ನೋವು ಸ್ವಲ್ಪ ಕಡಿಮೆಯಾದಂತೆ ಆಯಿತು. ಆ ಸಂತೋಷದಲ್ಲಿ ಜೋರಾಗಿ ಊಳಿಟ್ಟಿತು. ಆಗ ಬೇರೆ ನರಿಗಳು ಭಯ ಹುಟ್ಟಿಸಿದವು. ಜೋರಾಗಿ ಕೂಗಿದರೆ ಜನ ಬಂದಾರೆಂದು ಹೆದರಿ ಏಳಲು ಪ್ರಯತ್ನಿಸಿತು. ಕುಂಡೆ ಬಂಡೆಕಲ್ಲಿಗೆ ಅಂಟಿದ್ದು ಬಿಡಲೇ ಇಲ್ಲ. ಉಳಿದ ನರಿಗಳು ಸಹಾಯ ಮಾಡಲು ಬರಲಿಲ್ಲ. ಅಷ್ಟು ಹೊತ್ತಿಗೆ ಬಿಸಿಲು ಮಳೆ ಬಂತು. ನೀರಿನ ಹಸಿ ಮುಟ್ಟಿ ನರಿಯು ಕುಂಡೆ ಬಂಡೆಯಿಂದ ಬಿಟ್ಟುಕೊಂಡಿತು. ನರಿ ಪ್ರಾಣ ಉಳಿಯಿತೆಂದು ಹಿಗ್ಗಿತು. ಅಲ್ಲಿಂದ ನಂತರ ಈಗಲೂ ಬಿಸಿಲಿನೊಂದಿಗೆ ಮಳೆ ಬಂದರೆ 'ಬಿಸಿಲುನ್ ಮಳೆನ್ ಕುದ್ಕಂಗೆ ಮೊದುವೆ' ಎನ್ನುತ್ತಾರೆ. [ತು. ಜ. ಕ (ಎ)]

ಗೌ.ಕ.ಜ.ಕ. ೭. ಮಂಗ ಉಪಾಯದಿಂದ ಮೊಸಳೆಯನ್ನು ಮೋಸ ಮಾಡುವುದು.

ಒಂದು ಮಂಗ ನದಿ ದಡದಲ್ಲಿ ನೇರಳೆ ಹಣ್ಣು ತಿನ್ನುತ್ತಿತ್ತು. ಅಲ್ಲಿಗೆ ಒಂದು ಮೊಸಳೆ ಬಂತು. ನೆಲಕ್ಕೆ ಬಿದ್ದ ಹಣ್ಣುಗಳೆಲ್ಲಾ ಮೊಸಳೆಗೆ ಸಿಗುತ್ತಿತ್ತು. ಒಂದು ದಿನ ಮೊಸಳೆಗೆ ಒಂದು ಉಪಾಯ ಹೊಳೆಯಿತು. ಈ ಹಣ್ಣೇ ಇಷ್ಟು ರುಚಿ ಇರಬೇಕಾದರೆ, ಇದನ್ನು ತಿನ್ನುವ ಮಂಗ ಎಷ್ಟು ರುಚಿ ಇರಬೇಕು ಎಂಬ ಕೆಟ್ಟ ಆಲೋಚನೆ ಆಯಿತು. ಮರುದಿನ ಮಂಗ ಆಚೆ ದಡ ಸೇರಲು ನದಿ ದಂಡೆಯಲ್ಲಿ ಕುಳಿತಿತ್ತು. ಮೊಸಳೆ ತಾನು ಸಹಾಯ ಮಾಡುವೆನೆಂದು ಮಂಗನನ್ನು ಬೆನ್ನ ಮೇಲೆ ಕುಳಿತುಕೊಳ್ಳಲು ಹೇಳಿ ಆಚೆ ದಡಕ್ಕೆ ಹೊರಟಿತು. ನದಿಯ ಮಧ್ಯದಲ್ಲಿ ಮೊಸಳೆಗೆ ಮಂಗನ ಕರುಳು ತಿನ್ನುವ ಆಸೆಯಾಯಿತು. ಮಂಗ ಮೊಸಳೆಯೊಂದಿಗೆ ನನ್ನ ಕರುಳು ಮರದ ಕೊಂಬೆಯಲ್ಲಿದೆಯೆಂದು ಸುಳ್ಳು ಹೇಳಿ, ವಾಪಸು ಅದೇ ದಡಕ್ಕೆ ಬಂದು ತನ್ನ ಪ್ರಾಣವನ್ನು ಉಳಿಸಿಕೊಂಡಿತು. [ಕ.ಜ.ಕ. (ವೀ.)]

ಗೌ.ಕ.ಜ.ಕ. ೮. ಹುಲಿ ಬಾವಿಗೆ ಬೀಳುವಂತೆ ಮಾಡಿದ ಜಾಣ ನರಿ.

ದನ, ನಾಯಿ, ಆಡು ಮೊದಲಾದ ಸಾಕು ಪ್ರಾಣಿಗಳನ್ನು ಒಂದು ಹುಲಿ ಹಿಡಿದು ತಿನ್ನುತ್ತಿತ್ತು. ಒಂದು ದಿನ ನರಿಯೊಂದು ಹುಲಿಯ ಕಣ್ಣೆದುರು ಅಡ್ಡಾಡಿತು. ಹುಲಿಗೆ ಆ ದಿನ ಯಾವುದೇ ಪ್ರಾಣಿ ಸಿಗದೆ ಹಸಿದಿತ್ತು. ನರಿಯನ್ನು ಹುಲಿ ಊರಿಡೀ ಬೆನ್ನಟ್ಟಿತು. ನರಿ ಓಡಿ ಬಂದು ಬಾವಿಯೊಂದರ ದಂಡೆಯಲ್ಲಿ ನಿಂತು, ನಿನ್ನಂತೆ ಇನ್ನೊಬ್ಬ ಕ್ರೂರ, ಭಯಂಕರನಾದವ ಈ ಬಾವಿಯೊಳಗೆ ಇದ್ದಾನೆಂದು ತೋರಿಸಿತು. ನರಿಯ ಮಾತು ಸರಿಯೆಂದು ಹುಲಿ ಬಾವಿಗೆ ಹಾರಿತು. ವೈರಿಯನ್ನು ಹುಡುಕುತ್ತಾ ಹುಲಿ ಬಾವಿಯಲ್ಲಿ ಸತ್ತುಹೋಯಿತು. ನರಿ ಸಂತೋಷದಲ್ಲಿ ಊಳಿಡುತ್ತಾ ಕಾಡಿಗೆ ಸೇರಿಕೊಂಡಿತು.

ಗೌ.ಕ.ಜ.ಕ. ೯. ಪಕ್ಕಿಯು ಮೊಟ್ಟೆಗಳು : ಮೊಟ್ಟೆ ತಿಂದವರ ಹೊಟ್ಟೆಯಿಂದ ಅವನ್ನು ಮತ್ತೆ ಪಡೆಯುವದು.

ಒಂದು ಚೋರೆ ಹಕ್ಕಿ ಇತ್ತು. ಅದು ಮೂರು ಮೊಟ್ಟೆ ಇಟ್ಟಿತ್ತು. ಹಕ್ಕಿಯ ಮನೆ ದಾರಿ ಬದಿಯಲ್ಲಿತ್ತು. ಹಕ್ಕಿಯ ಮನೆಗೆ ಸಂತೆಗೆ ಹೋದ ಮೋಂಟಣ್ಣ, ಅಂಗಡಿಗೆ ಹೋದ ಶಾಮಣ್ಣ, ಜಾತ್ರೆಗೆ ಹೋದ ಗುರುವಣ್ಣ ನೆಂಟರಾಗಿ ಬಂದರು. ಮೂವರಿಗೂ ಹಕ್ಕಿ ತನ್ನ ಮೇಲೆ ಮಲಗಲು ಜಾಗ ಕೊಟ್ಟಿತು. ಮೊದಲು ಮೋಂಟಣ್ಣ, ನಂತರ ಶಾಮಣ್ಣ, ಅನಂತರ ಗುರುವಣ್ಣ ಮಲಗಿದರು. ಬೆಳಗಾಯಿತು. ಹಕ್ಕಿ ಭತ್ತ ಕುಟ್ಟಲು ಪ್ರಾರಂಭಿಸಿತು. ಗುರುವಣ್ಣ ಮತ್ತು ಶಾಮಣ್ಣ ಇಬ್ಬರು ತಮ್ಮ ತಮ್ಮ ಮನೆಗೆ ಹೋದರು. ಮೋಂಟಣ್ಣ ಚಳಿ ಕಾಯಿಸಲು ಒಲೆ ಬುಡದಲ್ಲಿ ಕುಳಿತನು. ಚಳಿ ಕಾಸಿಕೊಂಡು ಚೋರೆ ಹಕ್ಕಿಯ ಮೂರು ಮೊಟ್ಟೆಗಳನ್ನು ತಿಂದು ಮುಗಿಸಿದನು. ಹಕ್ಕಿಗೆ ಗೊತ್ತೇ ಆಗುವುದಿಲ್ಲ. ಮೋಂಟಣ್ಣನೂ ತನ್ನ ಮನೆಗೆ ಹೋದನು. ಹಕ್ಕಿಗೆ ತನ್ನ ಮೊಟ್ಟೆ ಇಲ್ಲವೆಂದು ಗೊತ್ತಾಯಿತು. ರಾತ್ರಿ ಮಲಗಲು ಬಂದ ಮೂವರ ಮನೆಗೂ ಹಕ್ಕಿ ಹೋಯಿತು. ಯಾರು ಮೊಟ್ಟೆ ತಿಂದವರೆಂದು ಸತ್ಯ ಪರೀಕ್ಷೆ ಮಾಡಿತು. ದೊಡ್ಡ ಬೆಂಕಿ ರಾಶಿ ಮಾಡಿ ಅದಕ್ಕೆ ಬಾಳೆ ಗಿಡದ ಪಂಬೆಯ ಪಾಲ ಹಾಕಿ ದಾಟಬೇಕು. ಈ ಪರೀಕ್ಷೆಯಲ್ಲಿ ಮೊಟ್ಟೆ ತಿಂದವರಾದರೆ ಬೆಂಕಿಗೆ ಬೀಳುತ್ತಾರೆ ಎಂದು ತೀರ್ಮಾನಿಸಲಾಯಿತು. ಮೋಂಟಣ್ಣ ಹೆದರಿಕೊಂಡೇ ದಾಟಿ ಬೆಂಕಿಗೆ ಬಿದ್ದು ಸಾಯುತ್ತಾನೆ. ಹಕ್ಕಿ ಆ ಕೂಡಲೇ ಆತನ ಹೊಟ್ಟೆ ಸೀಳಿ ಮೊಟ್ಟೆಯನ್ನು ಪಡೆದುಕೊಂಡಿತು. ಹಕ್ಕಿ ಹಿಂದಿನಂತೆ ಸುಖದಲ್ಲಿತ್ತು.

[ಕ.ಜ.ಕ. (ಸಂ.)]

ಗೌ.ಕ.ಜ.ಕ. ೧೦. ಕಳ್ಳರ ಮನೆಯಲ್ಲಿ ಪ್ರಾಣಿಗಳು : ಕತ್ತೆ, ನಾಯಿ, ಕೋಳಿ, ಬೆಕ್ಕು ಇವುಗಳು ಕಳ್ಳರನ್ನು ಓಡಿಸುವುದು.

ಒಂದು ಊರಲ್ಲಿ ಒಂದು ಕತ್ತೆ, ಒಂದು ನಾಯಿ, ಒಂದು ಕೋಳಿ ಮತ್ತು ಒಂದು ಬೆಕ್ಕು ಇದ್ದುವು. ಇವುಗಳಿಗೆ ಪ್ರಾಯಹೋಗಿ ದುಡಿಯುವ ಶಕ್ತಿ ಇಲ್ಲವೆಂದು ನಾಲ್ವರ ಯಜಮಾನರೂ ಮನೆಯಿಂದ ಹೊರಹಾಕುತ್ತಾರೆ. ಹೊಟ್ಟೆ ಪಾಡಿಗಾಗಿ ಊರಿಂದ ಊರಿಗೆ ದೂರ ಸಂಚಾರ ಮಾಡಿದವು. ರಾತ್ರಿಯಾಗುವಾಗ ಒಂದು ಕಾಡು ಸೇರಿದವು. ಆ ಕಾಡಲ್ಲಿ ಒಂದು ಮನೆ ಇರುತ್ತದೆ. ಆ ಮನೆಯಲ್ಲಿ ಕಳ್ಳರು ವಾಸವಾಗಿರುತ್ತಾರೆ. ಕಳ್ಳರ ಮನೆಯಲ್ಲಿ ಬೆಳಕಿರಲಿಲ್ಲ. ಜನ ಯಾರೂ ಇರಲಿಲ್ಲ. ತಿನ್ನಲು ಬೇಕಾದ ಆಹಾರ ತಯಾರಾಗಿತ್ತು. ನಾಲ್ಕೂ ಪ್ರಾಣಿಗಳು ಚೆನ್ನಾಗಿ ಹೊಟ್ಟೆ ತುಂಬ ತಿಂದು ದೀಪ ನಂದಿಸಿ ಮಲಗಿದವು. ಬೆಳಗಾಗುವ ಸಮಯಕ್ಕೆ ಕಳ್ಳರು ಬರುವಾಗ ಮನೆಯ ದೀಪ ನಂದಿತ್ತು. ಯಾರೋ ಮನೆಯಲ್ಲಿ ಇದ್ದಾರೆಂದು ಹೆದರಿ

ಕೊಳ್ಳುತ್ತಾರೆ. ಅದರಲ್ಲಿ ಒಬ್ಬ ಕಳ್ಳ ಮನೆಗೆ ನುಗ್ಗುತ್ತಾನೆ. ದೀಪ ಉರಿಸಲು ಬೆಂಕಿಪೆಟ್ಟಿಗೆ ಹುಡುಕುವಾಗ ಅವನಿಗೆ ಬೆಕ್ಕು ಕಚ್ಚುತ್ತದೆ. ಹೆದರಿ ಓಡಿ ಬರುವಾಗ ಬಾಗಿಲಲ್ಲಿ ನಾಯಿ ಕಚ್ಚುತ್ತದೆ. ಅಂಗಳಕ್ಕೆ ಬಂದಾಗ ಕತ್ತೆಯು ಒದೆತ ಸಿಗುತ್ತದೆ. ಆಗ ಮನೆಯ ಮಾಡಿಂದ ಕೋಳಿ ಹಾರುತ್ತದೆ. ಆತ ಬೊಬ್ಬೆ ಹಾಕುತ್ತ ಓಡುತ್ತಾನೆ. ಆದಿನ ರಾತ್ರಿ ಕಳೆಯುತ್ತದೆ. ಮರುದಿನ ನೋಡಿದರೆ ಕತ್ತೆ, ಕೋಳಿ, ನಾಯಿ, ಬೆಕ್ಕು ಹಾಯಾಗಿ ನಿದ್ರಿಸಿರುತ್ತವೆ. ಕಳ್ಳರು ಮೋಸ ಹೋಗುತ್ತಾರೆ.

ಗೌ.ಕ.ಜ.ಕ. ೧೧. ಮಂಗ ಮುದುಕಿಯ ಜೊತೆಗಿರುವುದು ಮತ್ತು ಮುದುಕಿಗೆ ಮೋಸ ಮಾಡುವುದು.

ಒಂದು ಊರಲ್ಲಿ ಅಜ್ಜ ಅಜ್ಜಿ ಸೇರಿಕೊಂಡು ಕುಮೇರಿ ಬೇಸಾಯ ಮಾಡುತ್ತಾರೆ. ಪೈರು ಕೊಯ್ಯಲು ತಯಾರಾಗುತ್ತದೆ. ಆ ಸಮಯಕ್ಕೆ ಪಕ್ಕದ ಕಾಡಿನ ಮಂಗಗಳು ಬಂದು ಪೈರನ್ನು ನಾಶಮಾಡುತ್ತವೆ. ಅಜ್ಜಿ ಮಂಗಗಳನ್ನು ಕೊಲ್ಲಲು ಉಪಾಯ ಹೂಡುತ್ತಾಳೆ. ಮಂಗಗಳನ್ನೆಲ್ಲಾ ಮನೆಗೆ ಕರೆಯುತ್ತಾಳೆ. ಕುಮೇರಿಯಲ್ಲಿದ್ದ ಮಂಗಗಳೆಲ್ಲಾ ಮನೆಗೆ ಬರುತ್ತವೆ. ಎಲ್ಲವೂ ನುಗ್ಗಿದಾಗ ಅಜ್ಜಿ ಎಲ್ಲಾ ಮಂಗಗಳನ್ನೂ ಕೊಚ್ಚಿ ಕೊಚ್ಚಿ ಹಾಕುತ್ತಾಳೆ. ಅಟ್ಟದಲ್ಲಿ ಅವಿತುಕೊಂಡು ಒಂದು ಮಂಗ ಉಳಿಯುತ್ತದೆ. ಆ ಮಂಗ ಅಜ್ಜಿಗೆ ಸಹಾಯ ಮಾಡುತ್ತೇನೆಂದು ಕೇಳಿಕೊಳ್ಳುತ್ತದೆ. ಕೆಲವು ದಿನ ಕಳೆದಾಗ ಅಜ್ಜಿಗೆ ಮಂಗನ ಮೇಲೆ ತುಂಬಾ ನಂಬಿಕೆ ಬರುತ್ತದೆ. ಒಂದು ದಿನ ಮಂಗ ಅಜ್ಜಿಯೊಂದಿಗೆ ಆಭರಣ, ಸೀರೆ ಬೇಕೆಂದು ಕೇಳುತ್ತದೆ. ಅಜ್ಜಿ ತನ್ನ ಎಲ್ಲಾ ಆಭರಣ, ಒಡವೆಗಳನ್ನು ಮಂಗನಿಗೆ ತೊಡಿಸುತ್ತದೆ. ಮಂಗ ಕುಣಿಯುತ್ತ ಮನೆಯಿಂದ ಅಂಗಳಕ್ಕೆ, ಅಂಗಳದಿಂದ ಮನೆ ಮಾಡಿಗೆ. ಮನೆ ಮಾಡಿಂದ ತೆಂಗಿನ ಮರಕ್ಕೆ ಹಾರುತ್ತಾ ಹಾರುತ್ತಾ ದೂರ ಹೋಗುತ್ತದೆ. ಅಜ್ಜಿಯ ಸಂಪತ್ತು ಮಂಗನ ಜೊತೆಗೆ ಹೋಗುತ್ತದೆ.

ಗೌ.ಕ.ಜ.ಕ. ೧೨. ಹುಡುಗಿಯನ್ನು ಸಾಕಿದ ಪ್ರಾಣಿಗಳು: ತೋಳ. ಬೆಳ್ಳಕ್ಕಿ, ಇರುವೆ ಮತ್ತು ಕಪ್ಪೆಗಳು ಹೆಣ್ಣು ಮಗಳನ್ನು ಸಾಕುವುದು.

ಒಬ್ಬ ಕುಂಬಾರನ ಹೆಂಡತಿ ಕಾಡಲ್ಲಿ ಹೆರುತ್ತಾಳೆ. ಮಗುವನ್ನು ಬಿದಿರ ರಾಶಿಗೆ ಹಾಕಿ ಬರುತ್ತಾಳೆ. ಅಲ್ಲಿಗೆ ತೋಳಗಳು ಬರುತ್ತವೆ. ಮಗುವನ್ನು ತಂಗಿಯೆಂದು ಸಾಕುತ್ತವೆ. ತಂಗಿಗೆ ಬೇಕಾದ ಚಿನ್ನ ಆಭರಣ ಹಾಕುತ್ತವೆ. ದೂರದ ಊರಿಗೆ ಮುತ್ತು ತರಲು ಹೋಗುತ್ತವೆ. ತಂಗಿಯನ್ನು ಭದ್ರವಾಗಿ ಮನೆಯೊಳಗೆ ಹಾಕಿ, ಬೇಕಾದ ಎಲ್ಲಾ ವ್ಯವಸ್ಥೆಯನ್ನು ಮಾಡಿ ಹೋಗುತ್ತವೆ. ಒಂದು ದಿನ ಬೆಂಕಿ ಇಲ್ಲವೆಂದು ತಂಗಿ ಹೊರಗೆ ಹೋಗುತ್ತಾಳೆ. ಕಾಡಲ್ಲಿ ಒಬ್ಬಳು ರಾಕ್ಷಸಿಯ ಮನೆ ಸಿಗುತ್ತದೆ. ರಾಕ್ಷಸಿ ಮಗಳು ಇರುತ್ತಾಳೆ. ತಾಯಿ ಬರುವವರೆಗೆ ಆಕೆಗೆ ಕಷ್ಟ

ಕೊಡುತ್ತಾಳೆ. ಅವಳ ಕಷ್ಟಕ್ಕೆ ಸಹಾಯಕವಾಗಿ ಬೆಳ್ಳಕ್ಕಿ, ಇರುವೆ, ಕಪ್ಪೆಗಳು ಬರುತ್ತವೆ. ರಾಕ್ಷಸಿ ಮಗಳಿಂದ ಬೆಂಕಿ ತೆಗೆದುಕೊಂಡು ಮನೆಗೆ ಬರುತ್ತಾಳೆ. ಮನೆಗೆ ತಲುಪುವುದರೊಳಗೆ ರಾಕ್ಷಸಿಯ ಆರ್ಭಟ ಕೇಳಿಸುತ್ತದೆ. ರಾಕ್ಷಸಿ ಎಷ್ಟು ಕರೆದರೂ ಆಕೆ ಬರುವುದಿಲ್ಲ. ಅವಳಿಗೆ ಹಲಸು, ತೆಂಗು, ಬಾಳೆ ಗಿಡಗಳು ಸಹಾಯವಾಗುತ್ತವೆ. ಹೋಗುವಾಗ ರಾಕ್ಷಸಿ ಬಾಗಿಲಿಗೆ ವಿಷದ ಹಲ್ಲಿಡುತ್ತಾಳೆ. ಅಣ್ಣನವರು ಬಂದಾಗ ಮರಗಳು ಸೂಚನೆ ಕೊಡುತ್ತವೆ. ತಂಗಿ ಅಣ್ಣಂದಿರಿಗೆ ಆರತಿ ಮಾಡಲು ಹೊರ ಬರುತ್ತಾಳೆ. ಬಾಗಿಲಲ್ಲಿ ವಿಷದ ಹಲ್ಲಿಗೆ ಮೆಟ್ಟಿ ಸಾಯುತ್ತಾಳೆ. ತೋಳಗಳು ಮುತ್ತು ತಂದು ಪ್ರಯೋಜನವಿಲ್ಲವೆಂದು ದೇಶಾಂತರ ಹೋಗುತ್ತವೆ.

[ತು.ಜ.ಕ. (ರಾ.)]

ಗೌ.ಕ.ಜ.ಕ. ೧೩. ತಂದೆಯನ್ನು ತಿಂದ ಹುಲಿಯನ್ನು ಮಗ ಗುಂಡಿಟ್ಟು ಕೊಲ್ಲುವುದು.

ಒಂದು ಊರಲ್ಲಿ ಒಂದು ಹುಲಿ ಇತ್ತು. ಆ ಹುಲಿ ದನಕರುಗಳನ್ನಲ್ಲದೆ ಮನುಷ್ಯರನ್ನು ಹಿಡಿದು ತಿನ್ನುತ್ತಿತ್ತು. ಆ ಊರಲ್ಲಿ ಕರಿರಾಜನೆಂಬ ಹೆಸರಿನ ಶೆಟ್ಟ ರಿದ್ದರು. ಅವರು ಬೇಟೆಯಲ್ಲಿ ತುಂಬಾ ಶೂರ. ಶೆಟ್ಟರ ಹೆಂಡತಿ ತುಂಬು ಗರ್ಭಿಣಿ. ಇದೇ ಸಂದರ್ಭಕ್ಕೆ ಶೆಟ್ಟರಿಗೆ ಹುಲಿಯನ್ನು ಬೇಟೆಯಾಡುವ ಒತ್ತಾಯ ಊರ ಗೌಡರಿಂದ ಬಂತು. ಶೆಟ್ಟರು ಮೊದಲೇ ಶೂರರು. ಹೆಂಡತಿ ಗರ್ಭಿಣಿ ಎಂಬ ಯೋಚನೆಯೂ ಮಾಡದೆ ಬೇಟೆಗೆ ಹೊರಟರು. ತಾಯಿ ಮತ್ತು ಹೆಂಡತಿಯ ಮಾತನ್ನು ಗಮನಿಸದೆ ಬೇಟೆಗೆ ಹೋಗಿ, ಶೆಟ್ಟರು ಹುಲಿಯ ಬಾಯಿಗೆ ತುತ್ತಾಗಬೇಕಾಯಿತು.

ಶೆಟ್ಟರ ಹೆಂಡತಿಗೆ ಗಂಡು ಮಗು ಹುಟ್ಟುತ್ತದೆ. ಆ ಮಗು ದೊಡ್ಡ ದಾಗುತ್ತದೆ. ಓದುವುದರಲ್ಲಿ ಇನ್ನಿತರ ಚಟುವಟಿಕೆಯಲ್ಲಿ ಹೆಚ್ಚು ಚುರುಕು, ಬುದ್ಧಿವಂತನಾಗುತ್ತಾನೆ. ಅವನನ್ನು ಆತನ ಸಹಪಾಠಿಗಳು ತಮಾಷೆ ಮಾಡುತ್ತಾರೆ. 'ಎಷ್ಟಾದರೂ ನಿನ್ನ ತಂದೆಯನ್ನು ಹುಲಿ ತಿಂದಿದೆ, ನಿನಗೆ ಅಪ್ಪ ಇಲ್ಲ'ವೆಂದು. ತಂದೆ ಹುಲಿಯನ್ನು ಕೊಲ್ಲಲು ಹೋಗಿ ಸತ್ತದ್ದೆಂದು ಮಗನಿಗೆ ಗೊತ್ತಾಗುತ್ತದೆ. ಮಾರನೆ ದಿನ ಅದೇ ಹುಲಿಯನ್ನು ಶೆಟ್ಟರ ಮಗನೇ ಹೊಡೆದು ಕೊಂದು, ತಂದೆಯ ಶೂರತನ ವನ್ನು ಕೊಂಡಾಡುವಂತಹ ಮಗನಾಗುತ್ತಾನೆ. ಊರಿಗೆ ಉಪಕಾರಿಯಾಗುತ್ತಾನೆ.

ಗೌ.ಕ.ಜ.ಕ. ೧೪. ಕೃತಜ್ಞ ಮೀನು ಮತ್ತು ಕೃತಜ್ಞ ಹಾವು : ರೋಗ ಗುಣ ಪಡಿಸಿಕೊಂಡ ಹಾವು ಹುಡುಗಿಗೆ ಸಹಾಯ ಮಾಡುವುದು.

ಒಂದೂರಿನ ಅರಸನ ಹೆಂಡತಿ ಹೆಣ್ಣು ಮಗುವಿಗೆ ಜನ್ಮ ಕೊಟ್ಟು ಸಾಯುತ್ತಾಳೆ. ಅರಸ ಎರಡನೇ ಮದುವೆಯಾಗುತ್ತಾನೆ. ಆಕೆಗೆ ಒಬ್ಬಳು ಕುರುಡಿ ಮಗಳಿರುತ್ತಾಳೆ. ಮಲತಾಯಿ ಕಾಟದಿಂದ ಅರಸು ಮಗಳು ದನಕಾಯಲು ಹೋಗುತ್ತಾಳೆ.

ಬೇರೊಂದು ಊರಲ್ಲಿ ಒಬ್ಬ ಅರಸನಿಗೆ ಮೀನು ಜನಿಸುತ್ತದೆ. ಮೀನಿಗೆ ಪ್ರಾಯ ಬಂದಾಗ ತನಗೆ ಮದುವೆ ಮಾಡಬೇಕೆಂದು ಕೇಳುತ್ತದೆ. ಅರಸನನ್ನು ಹೆದರಿಸುತ್ತದೆ. ಆತ ಹೆಣ್ಣು ಹುಡುಕಲು ಹೊರಡುತ್ತಾನೆ. ಬರುತ್ತಾ ಬರುತ್ತಾ ತಾಯಿ ಸತ್ತ ಮಗಳನ್ನು ನೋಡುತ್ತಾನೆ. ಆಕೆಗೂ ಮಲತಾಯಿ ಕಾಟಕ್ಕಿಂತ ಮೀನನ್ನು ಮದುವೆಯಾಗುವುದು ಉತ್ತಮವೆಂದು ತೋರಿತು.

ದಾರಿಯಲ್ಲಿ ಹುತ್ತವೊಂದರ ಒಳಗೆ ಕೈ ಹಾಕುತ್ತಾಳೆ. ಆ ಹುತ್ತದೊಳಗೆ ಕಾಯಿಲೆಯ ಸರ್ಪವೊಂದು ವಾಸವಿತ್ತು. ಈಕೆಯ ಕೈ ಮುಟ್ಟಿದಾಗ ಸರ್ಪದ ಕಾಯಿಲೆ ಗುಣವಾಯಿತು. ಸರ್ಪ ಆಕೆಗೆ ಮೂರು ಮಾಂತ್ರಿಕ ಕಲ್ಲು ಕೊಟ್ಟಿತು. ಮಾಂತ್ರಿಕ ಕಲ್ಲು ಹೊಡೆದಾಗ ಮೀನು ಮನುಷ್ಯನಾಗಿ ಪರಿವರ್ತನೆ ಹೊಂದಿತು. ಆ ಮೀನುರಾಜನಿಗೆ ಮಡದಿಯಾಗಿ ಸುಖದಲ್ಲಿರುತ್ತಾಳೆ.

ಗೌ.ಕ.ಜ.ಕ. ೧೫. ಕೃತಜ್ಞ ಸರ್ಪ.

ಅರಸನೊಬ್ಬನಿಗೆ ಮೀನು ಮಗುವಾಗುತ್ತದೆ. ಏಳು ಜನ ತಬ್ಬಲಿ ಮಕ್ಕಳನ್ನು ಏಳು ಸೇರು ಹಣಕ್ಕೆ ಪಡೆದುಕೊಂಡು ಮದುವೆ ಮಾಡುತ್ತಾನೆ. ಆರು ಜನ ಅಕ್ಕಂದಿರನ್ನು ಮೀನು ನುಂಗಿರುತ್ತದೆ. ಏಳನೆಯವಳು ಮೀನಿನ ಬಾಯಿಗೆ ಹೋಗುವುದಕ್ಕಿಂತ ಸರ್ಪದ ಬಾಯಿಗೆ ಬೀಳುವುದೆಂದು ಹುತ್ತಕ್ಕೆ ಕೈ ಹಾಕುತ್ತಾಳೆ. ಅದರೊಳಗೆ ಕಾಯಿಲೆಯ ಸರ್ಪಕ್ಕೆ ಸಹಾಯವಾಗುತ್ತದೆ. ಸರ್ಪ ಮೀನನ್ನು ಮನುಷ್ಯನಾಗಿ ಪರಿವರ್ತನೆ ಹೊಂದಲು ಮಾಂತ್ರಿಕ ಕಲ್ಲು ಕೊಡುತ್ತದೆ. ಮಾಂತ್ರಿಕ ಕಲ್ಲಿನಿಂದ ಮೀನು ಮನುಷ್ಯ ರೂಪದಲ್ಲಿ ಬರುತ್ತದೆ. ತಬ್ಬಲಿ ಮಗಳನ್ನು ಮೀನು ಕುಮಾರ ಮದುವೆಯಾಗುತ್ತಾನೆ.

ಗೌ.ಕ.ಜ.ಕ. ೧೬. 'ಜಾಣ ಅಳಿಲು' – ಮುರಿದ ಬಾಲ : ಬಾಲದ ನೆಪದಲ್ಲಿ ಕತ್ತಿ, ಗಡಿಗೆ, ಸೌತೆಕಾಯಿ, ಗಾಣದೆತ್ತು ಮತ್ತು ಡೋಲನ್ನು ಪಡೆಯುವುದು.

ಒಂದು ಊರಲ್ಲಿ ಒಂದು ಅಳಿಲು ಇತ್ತು. ಅದು ಬೇಲಿ ಬದಿಯಲ್ಲಿ ಹೋಗುತ್ತಿದ್ದಾಗ ಅದರ ಬಾಲಕ್ಕೆ ಮುಳ್ಳು ಚುಚ್ಚಿತು. ಅಲ್ಲಿ ಒಬ್ಬ ಬೇಲಿ ಹಾಕುತ್ತಿದ್ದ. ಅಳಿಲು ಅವನಲ್ಲಿ ಬಾಲದ ಮುಳ್ಳು ತೆಗೆಯಲು ಹೇಳುತ್ತದೆ. ಬೇಲಿ ಹಾಕುವಾತ ಮುಳ್ಳು ತೆಗೆಯುವಾಗ ಅಳಿಲ ಬಾಲ ತುಂಡಾಯಿತು. ಬಾಲ ತುಂಡಾದುದಕ್ಕೆ ಆತನ ಕತ್ತಿಯನ್ನು ಕೇಳಿತು. ಸ್ವಲ್ಪ ಮುಂದೆ ಹೋಗಿ ಕತ್ತಿ ಕೊಟ್ಟು ಗಡಿಗೆ ತೆಗೆದುಕೊಂಡಿತು.

ಒಬ್ಬ ಸೌತೆಕಾಯಿ ಹೊರುತ್ತಿದ್ದವನಿಗೆ ಗಡಿಗೆ ಕೊಟ್ಟಾಗ ಗಡಿಗೆ ಒಡೆಯುತ್ತದೆ. ಆತನಿಂದ ಸೌತೆಕಾಯಿ ತೆಗೆದುಕೊಂಡು ಮುಂದೆ ಹೋದಾಗ ಒಬ್ಬನು ಎರಡು ಎತ್ತನ್ನು ಹೊಡೆದುಕೊಂಡು ಹೋಗುತ್ತಿದ್ದ. ಆ ಎತ್ತು ಸೌತೆಕಾಯನ್ನು ತಿಂದಿತು. ಆದ್ದರಿಂದ ಒಂದು ಎತ್ತನ್ನು ಪಡೆದುಕೊಂಡು ಗಾಣದವನ ಹತ್ತಿರ ಬಂತು. ಗಾಣದವನ ಎತ್ತಿನೊಂದಿಗೆ ತನ್ನ ಎತ್ತನ್ನು ಕಟ್ಟಿ ಎತ್ತು ಸಾಯಲು. ಗಾಣದವ ತನ್ನ ಗಾಣದ ಎತ್ತನ್ನು ಕೊಡಬೇಕಾಯಿತು. ಸ್ವಲ್ಪ ಮುಂದೆ ಹೋಗಲು ಒಬ್ಬ ಭೂತಕಟ್ಟುವಾತ ಇದ್ದನು. ಆತನಿಗೆ ತನ್ನ ಎತ್ತನ್ನು ಕೊಡಲು ಎತ್ತು ಸತ್ತಾಗ, ಆತನ ಡೋಲು ಗೆಜ್ಜೆ ಸಿಕ್ಕಿತು. ಹೀಗೆ ಬಾಲದಿಂದಾಗಿ ಡೋಲು ಗೆಜ್ಜೆ ಕಟ್ಟಿಕೊಂಡು ಅಳಿಲು ಊರೂರು ತಿರುಗಾಡಿತು. [ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೧೭. ಬೇಸಾಯಗಾರನಿಂದ ನರಿ ಮೋಸಹೋಗುವುದು.

ಗೌ.ಕ.ಜ.ಕ. ೫ ರಲ್ಲಿ ಬರುವ ವಿವರಣೆಯೇ ಇದೆ. ನರಿ ಬೆಳೆ ಹಾಳು ಮಾಡಿದ್ದಕ್ಕೆ ನರಿಗೆ ಶಿಕ್ಷೆ ಕೊಡುತ್ತಾರೆ. ನರಿಯ ಕುಂಡೆಗೆ ಸರಳು ಬಿಸಿ ಮಾಡಿ ಇಡುತ್ತಾರೆ. [ಕ.ಜ.ಕ. (ಸಂ)]

ಗೌ.ಕ.ಜ.ಕ. ೧೮. ಹುಲಿ ಇಲಿಗೆ ಹೆದರುವುದು : ಈ ಗುಟ್ಟು ಗೊತ್ತಿದ್ದ ಮನುಷ್ಯ ಹುಲಿಯನ್ನು ಹೆದರಿಸುವುದು.

ಒಮ್ಮೆ ಒಂದು ಹುಲಿ ಇಲಿಯನ್ನು ಓಡಿಸಿತು. ಇಲಿ ಓಡಿ ಹೋಗಿ ಬಿಲದೊಳಗೆ ನುಗ್ಗಿತು. ಹುಲಿ ಇಲಿಯನ್ನು ಕಾಯುತ್ತಾ ತನ್ನ ಬಾಲವನ್ನು ಬಿಲದೊಳಗೆ ಹಾಕಿತು. ಇಲಿ ಒಳಗಿಂದ ಬಾಲವನ್ನು ಬೇರಿಗೆ ಕಟ್ಟಿತು. ಹುಲಿ ಬಾಲವನ್ನು ಎಷ್ಟು ಎಳೆದರೂ ಬರಲೇ ಇಲ್ಲ. ಇಲಿಯಿಂದಾಗಿ ಹುಲಿಗೆ ಪ್ರಾಣ ಸಂಕಟ. ಅಲ್ಲಿಗೆ ದನ ಮೇಯಿಸುವ ನಾಲ್ಕು ಜನ ಹುಡುಗರು ಬಂದರು. ಹುಲಿ ಅವರಿಗೆ ತನ್ನ ಕಷ್ಟವನ್ನು ಹೇಳಿಕೊಂಡಿತು. ಮತ್ತು ನನ್ನನ್ನು ಈ ಉಭಯ ಸಂಕಟದಿಂದ ರಕ್ಷಿಸಬೇಕು. ನಿಮಗೆ ನಾನು ಏನೂ ತೊಂದರೆ ಮಾಡಲಾರೆ. ಆದರೆ ನನ್ನ ಈ ಸ್ಥಿತಿಯನ್ನು ಯಾರಿಗೂ ಹೇಳಬಾರದು ಎಂದು ಮಕ್ಕಳಿಂದ ಮಾತು ತೆಗೆದುಕೊಂಡಿತು. ಮಕ್ಕಳು ಹುಲಿಯ ಮಾತಿಗೆ ಬಾಲವನ್ನು ಬಿಡಿಸಿದರು. ಹುಲಿ ಅದರ ಪಾಡಿಗೆ ಹೋಯಿತು. ಈ ಮಕ್ಕಳು ಹುಲಿಯ ಕಥೆಯನ್ನು ಮನೆಯಲ್ಲಿ ಹೇಳಿದರು. ಇದನ್ನು ಹುಲಿ ಅಡಗಿ ಕುಳಿತು ಕೇಳಿಸಿಕೊಂಡಿತು. ಆದಿನ ರಾತ್ರಿ ಹುಲಿ ಒಬ್ಬ ಹುಡುಗನನ್ನು, ಮಂಚವನ್ನು ಒಟ್ಟಿಗೆ ಹೊರುತ್ತಿತ್ತು. ಅರ್ಧ ದಾರಿಯಲ್ಲಿ ಹುಡುಗನಿಗೆ ಎಚ್ಚರವಾದಾಗ ಹುಲಿ ಹೊರುವುದೆಂದು ಅರ್ಥವಾಯಿತು. ಅಲ್ಲಿಯೆ ಒಂದು ಮರಕ್ಕೆ ನೇತಾಡಿಕೊಂಡು, ಹತ್ತಿ ಕುಳಿತುಕೊಂಡನು. ಹುಲಿ ತಿರುಗಿ ಬಂತು. ಈತ ಮರದ ತುದಿಯಿಂದ ಇಳಿದನು. ಹುಡುಗನ ಜೇಬಲ್ಲಿ ಅಪ್ಪದ

ಹಿಟ್ಟು ಇತ್ತು. ಹುಲಿಗೆ ಜೇಬಲ್ಲಿರುವುದು ಇಲಿ ಮರಿ ಎಂದು ಹುಡುಗ ಹೇಳಿದನು. ಹುಲಿ ಊರು ಬಿಟ್ಟು ಓಡಿತು. [ಕ.ಜ.ಕ. (ಸಂ)]

ಗೌ.ಕ.ಜ.ಕ. ೧೯. ಸಹಾಯಕ ಪ್ರಾಣಿಗಳು : ಕಳ್ಳರನ್ನು ಹಿಡಿಯಲು ಪ್ರಾಣಿಗಳು ಸಹಾಯಕ.

ಒಂದು ಊರಲ್ಲಿ ಒಬ್ಬ ವ್ಯಾಪಾರಿ ಇದ್ದ. ಒಮ್ಮೆ ಅವನ ಅಂಗಡಿಗೆ ಕಳ್ಳರು ನುಗ್ಗಿದರು. ವ್ಯಾಪಾರಿಗೆ ತನ್ನ ಅಂಗಡಿ ಸಾಮಾನು ಕಳವಾದದ್ದು ತುಂಬಾ ಬೇಸರವಾಯಿತು. ಆತ ಬೇಸರದಲ್ಲಿ ಆಲದ ಮರದ ಅಡಿಯಲ್ಲಿ ಕುಳಿತನು. ಅಲ್ಲಿಗೆ ಒಂದು ಹುಲಿ, ಒಂದು ಸಿಂಹ, ಒಂದು ಬೆಕ್ಕು, ಒಬ್ಬ ಹಿಡಿಸೂಡಿ ಮಾರುವಾತ, ಒಬ್ಬ ನೆಲ್ಲಿಕಾಯಿ ಮಾರುವಾತ. ಒಬ್ಬ ದೊಣ್ಣೆ ಮಾರುವಾತ ಬಂದರು. ಅವರೆಲ್ಲಾ ವ್ಯಾಪಾರಿಯ ಬೇಸರವನ್ನು ಅರ್ಥಮಾಡಿಕೊಂಡರು. ವ್ಯಾಪಾರಿಗೆ ಸಹಾಯ ಮಾಡಲು ಒಪ್ಪಿದರು. ಆ ದಿನ ರಾತ್ರಿ ಎಲ್ಲರೂ ಸೇರಿಕೊಂಡು ಕಳ್ಳರ ಮನೆಗೆ ನುಗ್ಗಿದರು. ಕಳ್ಳರು ಯಾರೂ ಇರಲಿಲ್ಲ. ಒಬ್ಬೊಬ್ಬರು ಒಂದೊಂದು ಕಡೆ ಅವಿತು ನಿಂತರು. ಕಳ್ಳರು ಬೆಳಗಾಗುವ ಸಮಯಕ್ಕೆ ತಮ್ಮ ಮನೆ ಸೇರಿದರು. ಮನೆ ಸೇರುವಾಗ ಅಡಗಿದ್ದ ಪ್ರತಿಯೊಬ್ಬರೂ ಕಳ್ಳರಿಗೆ ಹೊಡೆದರು. ಇಲಿ ಮತ್ತು ಬೆಕ್ಕುಗಳು ಕಚ್ಚಿದವು. ಹುಲಿ ಮತ್ತು ಸಿಂಹಗಳು ಅವರನ್ನು ಕೊಂದು ಹಾಕಿದವು. ಆಮೇಲೆ ಅಂಗಡಿಕಾರ ನೆಮ್ಮದಿಯಿಂದಿದ್ದನು. [ಕ.ಜ.ಕ. (ಸಂ)]

ಗೌ.ಕ.ಜ.ಕ. ೨೦. ಪ್ರಾಣಿ ಮತ್ತು ವಸ್ತುಗಳ ಸಹಾಯದಿಂದ ರಾಕ್ಷಸಿಯನ್ನು ಕೊಲ್ಲುವುದು.

ಒಂದು ಊರಲ್ಲಿ ಇಬ್ಬರು ಸಹೋದರರಿಗೆ ಒಬ್ಬಳೇ ತಂಗಿ. ತಂಗಿಯ ಹೆಸರು ಕುಂಞಿಬಿತ್ತ್. ಒಂದು ದಿನ ರಾಕ್ಷಸಿಯೊಬ್ಬಳು ಕುಂಞಿಬಿತ್ತನ್ನು ಕಟ್ಟಿಕೊಂಡು ಹೋಗುತ್ತಾಳೆ. ತಂಗಿಯನ್ನು ಹುಡುಕಿಕೊಂಡು ಒಬ್ಬ ಅಣ್ಣ ಹೋಗುತ್ತಾನೆ. ದಾರಿಯಲ್ಲಿ ಒಂದು ಹಕ್ಕಿ ಮತ್ತು ಒಂದು ತೆಂಗಿನಕಾಯನ್ನು ಕಲ್ಲು ಹೊಡೆದು ಚೀಲಕ್ಕೆ ಹಾಕಿಕೊಳ್ಳುತ್ತಾನೆ. ಸ್ವಲ್ಪ ಮುಂದೆ ಹೋದಾಗ ಹಕ್ಕಿಯ ಮಾಂಸ ಮತ್ತು ತೆಂಗಿನಕಾಯಿ ಕೊಟ್ಟು ಭೂತ ಕಟ್ಟುವವನ ಡೋಲು ಗಗ್ಗರ, ಒನಕೆಯವನ ಒನಕೆ ಮತ್ತು ಬರ್ಲುಗಳನ್ನು ಪಡೆದುಕೊಳ್ಳುತ್ತಾನೆ. ರಾಕ್ಷಸಿಯ ಮನೆಗೆ ನುಗ್ಗಿ ಅವಿತು ಕುಳಿತಿರುತ್ತಾನೆ. ರಾಕ್ಷಸಿ ಬಂದಾಗ ಬರ್ಲನ್ನು ತಲೆಗೆ ಹಾಕಿ, ಒನಕೆಯಲ್ಲಿ ಗುದ್ದಿ ಡೋಲು ಹೊಡೆಯುತ್ತಾನೆ. ರಾಕ್ಷಸಿ ನನ್ನಿಂದಲೂ ದೊಡ್ಡ ರಕ್ಕಸ ಇದ್ದಾನೆಂದು ಓಡುತ್ತದೆ. ಓಡುವಾಗ ಒಂದು ನರಿ ಸಿಗುತ್ತದೆ. ರಾಕ್ಷಸಿಗೆ ಧೈರ್ಯ ಹೇಳಿ ಮತ್ತೆ ಕರೆದುಕೊಂಡು ಬರುತ್ತದೆ. ಬಂದಕೂಡಲೇ ಇಬ್ಬರನ್ನೂ ಹುಡುಗ ಓಡಿಸುತ್ತಾನೆ.

ನರಿ 'ಓಡ್ರೋ ಓಡ್ರಣ್ಣ' ಎಂದು ಓಡಲು ಹೇಳುತ್ತದೆ. ರಾಕ್ಷಸಿ ಬಿದ್ದು ಸತ್ತು ಹೋಗುತ್ತದೆ. ತಂಗಿ ಕುಂಞಿಬಿತ್ತನ್ನು ಕರೆದುಕೊಂಡು ಬಂದು ಸುಖವಾಗಿರುತ್ತಾರೆ.

ಗೌ.ಕ.ಜ.ಕ. ೨೧. ಜಾಣ ಹಕ್ಕಿ : ಗುಳಿಗ ಭೂತಕ್ಕೆ ಜಾಣ ಹಕ್ಕಿ ಸಹಾಯಕ ವಾಗುವುದು.

ಬೈಲೊಂದರಲ್ಲಿ ಗುಳಿಗ ಭೂತದ ಕಲ್ಲಿತ್ತು. ಆ ಕಲ್ಲಲ್ಲಿ ದಿನನಿತ್ಯವೂ ಕುಳಿತು ಒಬ್ಬ ಮಲವಿಸರ್ಜನೆ ಮಾಡುತ್ತಿದ್ದ. ಗುಳಿಗನಿಗೆ ಆತನನ್ನು ಹೊಡೆದುಹಾಕಲು ಸಾಧ್ಯವಾಗುವುದಿಲ್ಲ. ಒಂದು ದಿನ ರಾತ್ರಿ ಗುಳಿಗ ಪ್ರಾಣಿ ಪಕ್ಷಿಗಳನ್ನೆಲ್ಲಾ ಒಟ್ಟು ಸೇರಿಸಿದನು. ಅದರಲ್ಲಿ ಬಲ್ಲಕ್ಕಿಯೊಂದು ಸಹಾಯಕ್ಕೆ ಬಂದಿತು. ಮರುದಿನ ಪ್ರತಿ ನಿತ್ಯದಂತೆ ಕಲ್ಲಿನಮೇಲೆ ಕುಳಿತುಕೊಳ್ಳುತ್ತಾನೆ. ಬಲ್ಲಕ್ಕಿ ಪೊದರೊಳಗಿಂದ ಪುರ್ರ್... ಎಂದು ಹಾರಿತು. ಆಗ ಆತ ಹೆದರಿಕೊಂಡನು. ಗುಳಿಗ ಪೆಟ್ಟು ಕೊಟ್ಟನು. ಆತ ಮನೆಗೆ ಹೋಗಿ ಸತ್ತನು.

## ೧.೩.೨ ಸಾಮಾನ್ಯ ಜನಪದ ಕಥೆಗಳು (Ordinary Folktales) :

ಗೌ.ಕ.ಜ.ಕ. ೨೨. ಕ್ರೂರ ಸರ್ಪ ಮುದುಕಿಯ ಸಹಾಯದಿಂದ ನಾಯಕ ಹಾವನ್ನು ಕೊಲ್ಲುವುದು.

ಒಂದು ಊರಲ್ಲಿ ಒಬ್ಬ ಬ್ರಾಹ್ಮಣ ಮತ್ತು ಆತನ ಗರ್ಭಿಣಿ ಪತ್ನಿ ಇದ್ದರು. ಅವರ ಮನೆಯ ಅಂಗಳದಲ್ಲಿ ಕಾಗೆಯೊಂದು ಮಾವಿನ ಹಣ್ಣು ತಿನ್ನುತ್ತಿತ್ತು. ಆಗ ಗರ್ಭಿಣಿ ಹೆಂಗಸಿಗೆ ಆಸೆಯಾಯಿತು. ಇದರಿಂದಾಗಿ ಅವಳು ಕಾಯಿಲೆ ಬಿದ್ದಳು. ಮೈಯೆಲ್ಲಾ ನೀರು ತುಂಬಿತು. ಗಂಡ ಹಣ್ಣಿಗಾಗಿ ಕಾಡುಮೇಡು ಅಲೆದನು. ಒಂದು ಕಡೆ ಒಂದು ಮರದಲ್ಲಿ ಒಂದು ಹಣ್ಣು ಇತ್ತು. ಆ ಮರಕ್ಕೆ ಸರ್ಪವೊಂದು ಕಾವಲಾಗಿತ್ತು. ಹಣ್ಣು ಬೇಕಾದರೆ ಸರ್ಪದ ಒಪ್ಪಿಗೆ ಬೇಕು. ಸರ್ಪವೂ ಈ ಬ್ರಾಹ್ಮಣನ ಕಷ್ಟವನ್ನು ತಿಳಿದುಕೊಂಡು ಹಣ್ಣು ಕೊಡುವುದಾಗಿ ಒಪ್ಪಿಗೆ ಕೊಟ್ಟಿತು. ಆದರೆ ಹುಟ್ಟಿದ ಮಗು ಹೆಣ್ಣಾದರೆ ಏಳು ವರ್ಷ ಕಳೆದಾಗ ತನಗೆ ಕೊಡಬೇಕೆಂದು ಒಪ್ಪಂದವಾಯಿತು. ಆಕೆಯ ಕಾಯಿಲೆ ಗುಣವಾಯಿತು. ಹೆಣ್ಣು ಮಗುವಿಗೆ ಜನ್ಮಕೊಟ್ಟಳು. ಏಳು ವರ್ಷ ಕಳೆದಾಗ ಸರ್ಪ ಬಂದು ಮಗುವನ್ನು ಕರೆದುಕೊಂಡು ಹೋಯಿತು. ಕೆಲವು ವರ್ಷ ಕಳೆದಾಗ ಆ ದಂಪತಿಗಳಿಗೆ ಇನ್ನೊಂದು ಗಂಡು ಮಗು ಹುಟ್ಟಿತು. ಮಗು ದೊಡ್ಡದಾಗಿ ಓದುವುದರಲ್ಲಿ, ಇತರ ಚಟುವಟಿಕೆ ಯಲ್ಲಿ ಹೆಚ್ಚು ಚುರುಕಾಯಿತು. ಸಹಪಾಠಿಗಳು ಆತನನ್ನು ತಮಾಷೆ ಮಾಡಲು ಪ್ರಾರಂಭಿಸಿದರು. ನೀನೆಷ್ಟು ಬುದ್ಧಿವಂತನಾದರೇನು – ನಿನ್ನ ಅಕ್ಕನನ್ನು ಸರ್ಪಕ್ಕೆ ಕೊಟ್ಟಿದ್ದಾರೆ. ಮನೆಗೆ ಬಂದು ತಾಯೊಂದಿಗೆ ಕೇಳಿದಾಗ ನಿಜ ಸಂಗತಿ ತಿಳಿಯಿತು. ಅಂದೇ ಸರ್ಪವನ್ನು ಕೊಲ್ಲಲು ಹೊರಡುತ್ತಾನೆ. ಆಗ ಆತನ ಅಜ್ಜಿ ಒಂದು ಉಪಾಯ

ಹೇಳಿಕೊಡುತ್ತಾಳೆ. ಸರ್ಪ ದಿನನಿತ್ಯವೂ ಮೇವಿಗೆ ಹೋಗುತ್ತದೆ. ಅದರೊಂದಿಗೆ ಒಂದು ಮಾಣಿಕ್ಯದ ಕಲ್ಲಿದೆ. ಅದಕ್ಕೆ ನೀನು ಒಂದು ಮುದ್ದೆ ಸೆಗಣಿ ಹಾಕಿದರೆ ಆ ಸರ್ಪ ಸಾಯುತ್ತದೆ. ಹುಡುಗ ಹೊರಡುತ್ತಾನೆ. ಸರ್ಪ ಮೇವಿಗೆ ಹೋಗಿರುತ್ತದೆ. ಮಾಣಿಕ್ಯಕ್ಕೆ ಸೆಗಣಿ ಹಾಕಿ ಬರುತ್ತಾನೆ. ಸರ್ಪ ಓಡಿ ಬಂದು ಸೆಗಣಿಗೆ ಕಚ್ಚಿ ಸಾಯುತ್ತದೆ. ಹುಡುಗ ಅಕ್ಕನನ್ನು ಕರೆದುಕೊಂಡು ಬರುತ್ತಾನೆ. ಆಕೆ ಬರುವಾಗ ಗರ್ಭಿಣಿ. ಆಕೆ ನೂರಾರು ಹಾವಿನ ಮರಿಗಳನ್ನು ಹೆರುತ್ತಾಳೆ. ಅದೆಲ್ಲವನ್ನೂ ಹುಡುಗ ಸಾಯಿಸುತ್ತಾನೆ. ಅದರಲ್ಲಿ ಒಂದು ಮರಿ ಉಳಿಯುತ್ತದೆ. ಅದು ಈ ಹುಡುಗನನ್ನು ಓಡಿಸುತ್ತದೆ. ಆತ ಓಡುವಾಗ ಪೊದರೊಂದರಿಂದ ಮೊಲ ಓಡುತ್ತದೆ. ಸರ್ಪ ಮೊಲವನ್ನು ಓಡಿಸುತ್ತದೆ. ಮೇಲುಲೋಕದ ಸೂರ್ಯದೇವರು ನೂಲು ಬಿಟ್ಟು ಇಬ್ಬರನ್ನೂ ಎಳೆದುಕೊಳ್ಳುತ್ತಾರೆ.

ಗೌ.ಕ.ಜ.ಕ. ೨೩. ಮೂರ್ಖ ರಾಕ್ಷಸಿಯನ್ನು ಕೊಂದು ಅಣ್ಣಂದಿರನ್ನು ಮಲತಾಯಿ ಮಗ ರಕ್ಷಿಸುವುದು.

ಒಬ್ಬ ಅರಸನಿಗೆ ನಾಲ್ಕು ಜನ ಮಕ್ಕಳು. ಒಬ್ಬ ಕುರುಡ, ಮತ್ತೊಬ್ಬ ಕುಂಟ. ಇನ್ನೊಬ್ಬ ಮೂಕ. ನಾಲ್ಕನೆಯವನು ರೂಪವಂತನಾಗಿದ್ದು ಅವನನ್ನು ಹೆಚ್ಚು ಪ್ರೀತಿಸುತ್ತಿದ್ದರು. ಆತ ದೊಡ್ಡವನಾಗುತ್ತಾ ವರ್ತನೆ, ಸ್ವಭಾವದಲ್ಲಿ ಬದಲಾದನು. ಕೆಲವು ವರ್ಷ ಕಳೆದು ಆತನಿಗೆ ಮದುವೆಯಾಗಿ ಎರಡು ಮಕ್ಕಳಾದವು. ಆತ ಎರಡನೇ ಮದುವೆಯಾಗಿ ಆಕೆಗೂ ಒಂದು ಗಂಡು ಮಗವಾಯಿತು. ಮೂರು ಮಕ್ಕಳೂ ದೊಡ್ಡವರಾದಾಗ ದೇಶಾಂತರ ಕಳುಹಿಸುತ್ತಾನೆ. ಮೂವರೂ ಅರಮನೆ ಬಿಟ್ಟು ಹೊರಟರು. ಮಲತಾಯಿ ಮಗ ಅಣ್ಣಂದಿರ ಹಿಂದಿನಿಂದ ಒಬ್ಬನೇ ಹೋಗುತ್ತಾನೆ. ಹೋಗುತ್ತಾ ಒಂದು ಕಾಡಿಗೆ ತಲುಪುತ್ತಾರೆ. ಆ ಕಾಡಲ್ಲಿ ರಾಕ್ಷಸಿಯೊಬ್ಬಳ ಅರಮನೆ ಇತ್ತು. ಆಕೆಗೊಬ್ಬಳು ಮಗಳು. ಅಲ್ಲಿಗೆ ಇಬ್ಬರು ಸುಂದರ ಮಕ್ಕಳು ಹೋದಾಗ, ರಾಕ್ಷಸಿ ಅವರನ್ನು ಕೋಣೆಯಲ್ಲಿ ಹಾಕುತ್ತಾಳೆ. ರಾಕ್ಷಸಿ ಮಕ್ಕಳನ್ನು ಕೊಲ್ಲುವ ಯೋಚನೆ ಮಾಡುತ್ತಾಳೆ. ಇವನ್ನೆಲ್ಲಾ ಮಲತಾಯಿ ಮಗ ದೂರದಲ್ಲಿ ನಿಂತು ನೋಡುತ್ತಿದ್ದ. ಅವರಿಬ್ಬರನ್ನು ರಾಕ್ಷಸಿ ಮನೆಯಿಂದ ಪಾರುಮಾಡಿ ಅರಮನೆಗೆ ಬರುತ್ತಾರೆ. [ಕ.ಜ.ಕ. (ಸಂ.)]

ಗೌ.ಕ.ಜ.ಕ. ೨೪. ಹಂದಿಯ ಹೊಟ್ಟೆಯಿಂದ ಮನುಷ್ಯನನ್ನು ಹೊರ ತೆಗೆಯುವುದು.

ಒಂದು ಅಜ್ಜಿಗೆ ಮೂರು ಜನ ಮಕ್ಕಳು. ಒಮ್ಮೆ ಮೂವರೂ ಬೇಟೆಗೆ ಹೋಗುತ್ತಾರೆ. ಒಂದು ಬೆಟ್ಟದ ಅಡಿಯಲ್ಲಿ ದೊಡ್ಡ ಹಂದಿ ಮೂವರು ಬೇಟೆಗಾರರನ್ನೂ ನುಂಗುತ್ತದೆ. ಎಷ್ಟೋ ತಿಂಗಳುಗಳು ಕಳೆದವು. ಈ ಮೂವರು

ಬೇಟೆಗಾರರಲ್ಲಿ ಒಬ್ಬನಿಗೆ ಗಂಡು ಮಗುವೊಂದಿತ್ತು. ಆ ಮಗು ಶಾಲೆಗೆ ಹೋಗು ವಾಗ ಊರವರೆಲ್ಲರೂ ಆತನನ್ನು ತಮಾಷೆ ಮಾಡಿದರು. ಎಷ್ಟಾದರೂ ನಿನ್ನ ತಂದೆಯನ್ನು ಹಂದಿ ನುಂಗಿದೆ. ಕೆಲವು ದಿನ ಕಳೆದು ಆತನೂ ಬೇಟೆಗೆ ಹೋಗು ತ್ತಾನೆ. ಅದೇ ಹಂದಿಯನ್ನು ಗುಂಡು ಹೊಡೆದುಕೊಂದು, ಹಂದಿಯ ಹೊಟ್ಟೆ ಯಿಂದ ಆತನ ತಂದೆ, ಚಿಕ್ಕಪ್ಪರನ್ನು ಹೊರಗೆ ತೆಗೆಯುತ್ತಾನೆ.

ಗೌ.ಕ.ಜ.ಕ. ೨೫. ರಾಕ್ಷಸಿಯ ಮನೆಯಲ್ಲಿ ಹುಡುಗ : ಜಾಣ್ಮೆಯಿಂದ ಹುಡುಗ ರಾಕ್ಷಸಿಯನ್ನು ಕೊಲ್ಲುವುದು.

ಒಬ್ಬಳು ರಾಕ್ಷಸಿ ಮನುಷ್ಯರನ್ನು ಹಿಡಿದು ತಿನ್ನುತ್ತಿದ್ದಳು. ಒಮ್ಮೆ ಒಂದು ಪೇರಳೆ ಮರದಲ್ಲಿ ಒಬ್ಬ ಹುಡುಗ ಹಣ್ಣು ಕೊಯ್ಯುತ್ತಿರುತ್ತಾನೆ. ರಾಕ್ಷಸಿ ಆತನನ್ನು ಗೋಣಿಯಲ್ಲಿ ಕಟ್ಟಿ ಮನೆಗೆ ತರುತ್ತಾಳೆ. ರಾಕ್ಷಸಿ ಮಗಳು ಹುಡುಗನ ಸೌಂದರ್ಯ ನೋಡಿ ಬೆಚ್ಚಿ ಬಿಡುತ್ತಾಳೆ. ಹುಡುಗ ರಾಕ್ಷಸಿ ಮಗಳನ್ನು ಕೊಂದು ಪದಾರ್ಥ ಮಾಡುತ್ತಾನೆ. ರಾಕ್ಷಸಿ ತನ್ನ ಮಗಳ ಮಾಂಸವನ್ನು ತಿನ್ನುತ್ತಾಳೆ. ಒಂದು ಕಾಗೆ 'ತನ್ನ ಮಗಳ ತಾನೇ ತಿನ್ನುತ್ತಾಳೆ ಕ್ಹಾ.... ಕ್ಹಾ.... ಕ್ಹಾ...' ಎಂದು ಅಪಶಕುನ ಸೂಚಿಸುತ್ತದೆ. ಹುಡುಗ ಮಾಳಿಗೆಯಿಂದ ಮಲಮೂತ್ರ ವಿಜರ್ಸನೆ ಮಾಡುತ್ತಾನೆ. ತುಪ್ಪದ ಹುಡೆ ತೂತಾಯಿತೆಂದು ರಾಕ್ಷಸಿ ಮಹಡಿ ಹತ್ತುವಾಗ ರಾಗಿ ಕಲ್ಲು ಹಾಕಿ ಆಕೆಯನ್ನು ಕೊಲ್ಲುತ್ತಾನೆ.

ಗೌ.ಕ.ಜ.ಕ. ೨೬. ರಾಕ್ಷಸಿಯ ಮನೆಯಲ್ಲಿ ಹುಡುಗ : ಜಾಣ್ಮೆಯಿಂದ ಹುಡುಗ ರಾಕ್ಷಸಿಯನ್ನು ಕೊಲ್ಲುವುದು.

ಒಂದು ಊರಲ್ಲಿ ಅಜ್ಜ ಮತ್ತು ಮೊಮ್ಮಗ ವಾಸವಿದ್ದರು. ಹುಡುಗ ದನ ಕಾಯಲು ಹೋಗುತ್ತಿದ್ದ. ಒಂದು ದಿನ ಆತ ಪೇರಳೆ ಮರವೊಂದರಲ್ಲಿ ಕುಳಿತು ಕಡುಬು ತಿನ್ನುತ್ತಿರುತ್ತಾನೆ. ಅಲ್ಲಿಗೆ ಒಬ್ಬಳು ರಾಕ್ಷಸಿ ಅಜ್ಜಿ ಅದೇ ದಾರಿಯಾಗಿ ಬರುತ್ತಾಳೆ. ಪೇರಳೆ ಹಣ್ಣನ್ನು ಚೀಲದೊಳಗೆ ಹಾಕುವ ನೆಪದಲ್ಲಿ ಹುಡುಗನನ್ನು ಗೋಣಿಚೀಲದಲ್ಲಿ ಕಟ್ಟಿ ಹೊರುತ್ತಾಳೆ. ರಾಕ್ಷಸಿ ಅಜ್ಜಿಗೆ ಒಬ್ಬಳು ಮಗಳು. ಆಕೆ ಗೋಣಿ ಚೀಲದ ಬಾಯಿ ಬಿಚ್ಚುವಾಗ ಗುಂಗುರು ಕೂದಲಿನ ಹುಡುಗ ಇರುತ್ತಾನೆ. ಗುಂಗುರು ಕೂದಲು ಗುಂಗುರಾಗುವ ವಿಧಾನವನ್ನು ಹುಡುಗ ಆಕೆಗೆ ಹೇಳುತ್ತಾನೆ. ಆಕೆಯ ತಲೆಯನ್ನು ಕಲ್ಲಿಗೆ ಇಟ್ಟು ಒನಕೆಯಿಂದ ಜಜ್ಜಿ ಜಜ್ಜಿ ಸಾಯಿಸುತ್ತಾನೆ. ರಾಕ್ಷಸಿ ಅಮಲೇರಿಕೊಂಡು ಬರುತ್ತಾಳೆ. ಬಂದಾಗ ಮಗಳನ್ನು ಮಾಂಸ ಮಾಡಿ ಪದಾರ್ಥ ಮಾಡಿ ಆಗಿರುತ್ತದೆ. ಬಟ್ಟಲಿಗೆ ಹಾಕಿ ತಿನ್ನಲು ತೊಡಗು ತ್ತಾಳೆ. ಆಗ ಹುಡುಗ ಮಾಳಿಗೆಯಿಂದ ಮಲಮೂತ್ರ ವಿಸರ್ಜನೆ ಮಾಡುತ್ತಾನೆ.

ಅಜ್ಜಿ ತುಪ್ಪದ ಭರಣಿ ಒಡೆಯಿತೆಂದು ಮಾಳಿಗೆಗೆ ಏರುತ್ತಾಳೆ. ಹುಡುಗ ಅಜ್ಜಿಯ ತಲೆಗೆ ರಾಗಿ ಕಲ್ಲು ಹಾಕಿ ಸಾಯಿಸುತ್ತಾನೆ.

ಗೌ.ಕ.ಜ.ಕ. ೨೭. ರಾಕ್ಷಸಿಯ ಮನೆಯಲ್ಲಿ ಹುಡುಗ : ಜಾಣ್ಮೆಯಿಂದ ಹುಡುಗ ರಾಕ್ಷಸಿಯನ್ನು ಕೊಲ್ಲುವುದು.

ಈ ಕತೆಯನ್ನು ಗೌ.ಕ.ಜ.ಕ. ೨೬ರಲ್ಲಿ ಕಾಣಬಹುದು. ಹುಡುಗನ ಮನೆಯಲ್ಲಿ ಹಿಂದಿನ ದಿನ ಹಬ್ಬ. ಅಪ್ಪದ ಹಿಟ್ಟು ಕಟ್ಟಿಕೊಂಡು ದನ ಮೇಯಿಸಲು ಬರುತ್ತಾನೆ. ಅಪ್ಪದ ಹಿಟ್ಟು ಬಿದ್ದು ಗಿಡವಾಗಿ, ಮರವಾಗಿ, ಹೂವಾಗಿ, ಕಾಯಾಗಿ, ಹಣ್ಣಾದಾಗ ರಾಕ್ಷಸಿ ಅಜ್ಜಿ ಬರುತ್ತಾಳೆ. ಕಥೆಯ ಕೊನೆಗೆ ಮಗಳ ಮಾಂಸ ತಿನ್ನುವಾಗ ಕಾಗೆಯೊಂದು ಅಪಶಕುನ ಹೇಳುತ್ತದೆ. 'ತನ್ನ ಮಗಳ ತಾನೇ ತಿನ್ನುತ್ತಾಳೆ, ಕ್ಹಾ !! ಕ್ಹಾ !!!' ಎಂದು.

ಗೌ.ಕ.ಜ.ಕ. ೨೮. ಕ್ರೂರ ಮಲತಾಯಿ

ಒಂದು ಊರಲ್ಲಿ ತಾಯಿ ಇಲ್ಲದ ಇಬ್ಬರು ತಬ್ಬಲಿ ಮಕ್ಕಳು. ತಂದೆಗೆ ಮಕ್ಕಳನ್ನು ಸಾಕಲು ಕಷ್ಟ ಆಗುತ್ತದೆ. ಪಕ್ಕದ ಮನೆಯಲ್ಲಿ ಒಬ್ಬಳು ಗಂಡನನ್ನು ಕಳೆದುಕೊಂಡವಳು ಪ್ರತಿನಿತ್ಯ ಮನೆಗೆ ಬಂದು ಅಡುಗೆ ಮಾಡಿ ಹೋಗುವುದು. ಆಕೆಯನ್ನು ಮದುವೆಯಾಗಲು ತಂದೆಗೆ ಒತ್ತಾಯ ಮಾಡುತ್ತಾರೆ. ತಂದೆ ಮದುವೆ ಆಗುತ್ತಾನೆ. ಮಲತಾಯಿ ಮಕ್ಕಳನ್ನು ಎರಡೇ ದಿನದಲ್ಲಿ ಮನೆಯಿಂದ ಹೊರಗೆ ಹಾಕುತ್ತಾಳೆ. ಮಕ್ಕಳು ಕೂಗುತ್ತಾ ಕಾಡುಮೇಡು ತಿರುಗುತ್ತಾರೆ. ಕತ್ತಲಾದಾಗ ಒಬ್ಬ ಚಿನ್ನದ ಆಚಾರಿ ಮನೆಗೆ ತಲುಪುತ್ತಾರೆ. ಆಚಾರಿಗೆ ಮಕ್ಕಳ ಮೇಲೆ ತುಂಬಾ ಪ್ರೀತಿ ಉಕ್ಕುತ್ತದೆ. ಆತ ಮಕ್ಕಳಿಗೆ ಚಿನ್ನದ ಉಂಗುರ ಮಾಡುತ್ತಾನೆ. ಮಕ್ಕಳ ಕೈಗೆ ಉಂಗುರವಿಟ್ಟು ಮಕ್ಕಳನ್ನು ಕಳುಹಿಸುತ್ತಾನೆ. ಮಕ್ಕಳು ಇನ್ನೂ ಮುಂದೆ ಹೋಗಲು ನಾಯಿಯೊಂದಿಗೆ ತಿರುಗುವ ಒಬ್ಬಾತ ಸಿಗುತ್ತಾನೆ. ಆತ ಇಬ್ಬರು ಮಕ್ಕಳಲ್ಲಿ ಹುಡುಗಿಯನ್ನು ಮದುವೆಯಾಗುತ್ತಾನೆ. ಹುಡುಗ ಒಬ್ಬನೇ ಸ್ವಲ್ಪ ಮುಂದೆ ಹೋದಾಗ ಒಬ್ಬಾಕೆ ಈತನನ್ನು ಬರಮಾಡಿಕೊಳ್ಳುತ್ತಾಳೆ. ಅಣ್ಣ ತಂಗಿ ಇಬ್ಬರಿಗೂ ಮದುವೆಯಾಗುತ್ತದೆ. ಸುಮಾರು ವರ್ಷ ಕಳೆದಾಗ ಅಣ್ಣ ತಂಗಿಯ ಮಕ್ಕಳು ಆಟವಾಡುವಲ್ಲಿ ಜಗಳ ಮಾಡುತ್ತಾರೆ. ನ್ಯಾಯ ತೀರ್ಮಾನಕ್ಕೆ ಬಂದಾಗ ಉಂಗುರ ಅಣ್ಣ ತಂಗಿಯನ್ನು ಒಟ್ಟುಮಾಡುತ್ತದೆ.

ಗೌ.ಕ.ಜ.ಕ. ೨೯. ಕ್ರೂರ ಮಲತಾಯಿ ಮಕ್ಕಳಿಗೆ ಕಷ್ಟ ಕೊಡುವುದು.

ಒಬ್ಬ ಅರಸನಿಗೆ ಏಳು ಜನ ಮಡದಿಯರು. ಕೊನೆಯ ಮಡದಿಗೆ ಮಾಂತ್ರಿಕ ಮಾವಿನಹಣ್ಣು ತಿಂದು ಮಕ್ಕಳಾಯಿತು. ಮಲತಾಯಂದಿರು ಹುಟ್ಟಿದ ಮಕ್ಕಳನ್ನು

ಗೊಬ್ಬರದ ರಾಶಿಯಲ್ಲಿ ಅಡಗಿಸಿದರು. ಆ ಮಕ್ಕಳಿಗೆ ಕಬಿಲೆ ಹಸು, ಆನೆ, ಕಪ್ಪೆಗಳು ಸಹಾಯ ಮಾಡುತ್ತವೆ. ಆ ಮಕ್ಕಳನ್ನು ಕಪ್ಪೆಗಳು ನದಿಯಲ್ಲಿ ಪೆಟ್ಟಿಗೆಯೊಳಗೆ ಹಾಕಿ ತೇಲಿಬಿಡುತ್ತವೆ. ಅವುಗಳು ಒಬ್ಬ ಋಷಿಗೆ ಸಿಗುತ್ತವೆ. ಋಷಿ ಆ ಮಕ್ಕಳಿಗೆ ಮಾಂತ್ರಿಕ ವಸ್ತುಗಳನ್ನು ಕೊಡುತ್ತಾನೆ. ಮಕ್ಕಳು ಮಾಂತ್ರಿಕ ವಸ್ತುವಿನಿಂದ ಅರಮನೆ ನಿರ್ಮಿಸಿ ಸುಖದಲ್ಲಿರುತ್ತಾರೆ. ಇವರ ಅರಮನೆ ತಂದೆಯ ಅರಮನೆಯ ಹತ್ತಿರವಿರುತ್ತದೆ. ಮಕ್ಕಳ ಪೂರ್ವ ವೃತ್ತಾಂತವನ್ನು ತಿಳಿದು ನಿಜವಾದ ತಾಯನ್ನು ಪರೀಕ್ಷೆ ಮಾಡುತ್ತಾರೆ. ತಾಯಿಯ ಮೊಲೆಹಾಲು ಮಕ್ಕಳ ಬಾಯಿಗೆ ಬೀಳುತ್ತದೆ. ಉಳಿದ ಆರು ಜನ ಮಲತಾಯಂದಿರ ತಲೆ ಕಡಿಯಲು ಅರಸು ಅಪ್ಪಣೆ ಮಾಡಿದ.

ಗೌ.ಕ.ಜ.ಕ. ೩೦. ಕ್ರೂರ ಮಲತಾಯಿ : ಕ್ರೂರ ಮಲತಾಯಿ ಮಕ್ಕಳನ್ನು ಗೊಬ್ಬರದ ಹೊಂಡಕ್ಕೆ ಹಾಕುವುದು.

ಒಬ್ಬ ರಾಜನಿಗೆ ಇಬ್ಬರು ಮಡದಿಯರು. ಅವರಿಗೆ ಮಕ್ಕಳಾಗುವುದಿಲ್ಲ. ಒಂದು ದಿನ ಭಿಕ್ಷೆ ಬೇಡಲು ಬಂದ ವ್ಯಕ್ತಿ ಮೂರು ಕಲ್ಲನ್ನು ಮಂತ್ರಿಸಿಕೊಡುತ್ತಾನೆ. ನದಿಯ ಮಧ್ಯದಲ್ಲಿ ಮಾವಿನ ಮರವಿದೆ. ಮಾಂತ್ರಿಕ ಕಲ್ಲು ಹೊಡೆದು ಹಣ್ಣು ತರಬೇಕು. ಆ ಹಣ್ಣಿನ ಗೊರಟನ್ನು ತಿಂದರೆ ಮಕ್ಕಳಾಗುತ್ತವೆ ಎಂದು ಹೇಳುತ್ತಾನೆ. ಮಾವಿನ ಹಣ್ಣು ತರುತ್ತಾರೆ. ಮೊದಲನೆಯವಳು ಸಿಪ್ಪೆ ತಿಂದು ಗೊರಟನ್ನು ಕಸದ ಹೊಂಡಕ್ಕೆ ಎಸೆಯುತ್ತಾಳೆ. ಎರಡನೆಯವಳು ಎಸೆದ ಗೊರಟನ್ನು ತಿಂದು ಗರ್ಭ ನಿಲ್ಲುತ್ತದೆ. ಮೊದಲನೆಯವಳಿಗೆ ಮಕ್ಕಳಾಗುವುದಿಲ್ಲ. ಎರಡನೆಯವಳು ಎರಡು ಮುದ್ದಾದ ಗಂಡು ಮಕ್ಕಳಿಗೆ ಜನ್ಮ ಕೊಡುತ್ತಾಳೆ. (ಉಳಿದ ಭಾಗ ನೋಡಿ ಗೌ.ಕ.ಜ.ಕ. ೨೮, ೨೯, ೩೧.) [ಕ.ಜ.ಕ. (ಸಂ)]

ಗೌ.ಕ.ಜ.ಕ. ೩೧. ದುಷ್ಟ ಅಕ್ಕಂದಿರು ಮತ್ತು ಒಳ್ಳೆಯ ತಂಗಿ : ಪ್ರಾಣಿಗಳ ಸಹಾಯದಿಂದ ಒಳ್ಳೆಯ ತಂಗಿ ತನ್ನ ಮಗುವನ್ನು ದುಷ್ಟ ಅಕ್ಕಂದಿರ ಕಾಟದಿಂದ ರಕ್ಷಿಸಿಕೊಳ್ಳುವುದು.

ಅರಸನೊಬ್ಬನಿಗೆ ಏಳು ಜನ ಮಡದಿಯರು. ಆದರೆ ಒಂದೂ ಮಕ್ಕಳಿರುವುದಿಲ್ಲ. ಅರಸ ಬೇರೊಂದು ಮದುವೆಯಾಗುವಂತೆ ಕೊನೆಯ ರಾಣಿ ಹೇಳುತ್ತಾಳೆ. ಆ ಪ್ರಕಾರ ಅರಸ ಮದುವೆಯಾಗುತ್ತಾನೆ. ಕೆಲವು ತಿಂಗಳು ಕಳೆದು ಆಕೆಗೆ ಗರ್ಭ ನಿಲ್ಲುತ್ತದೆ. ಅದೇ ಸಂದರ್ಭಕ್ಕೆ ಅರಸನಿಗೆ ದಂಡಿಗೆ ಹೋಗಲು ಓಲೆ ಬರುತ್ತದೆ. ದಂಡಿಗೆ ಹೋಗುತ್ತಾನೆ. ಇಲ್ಲಿ ಗರ್ಭಿಣಿಯನ್ನು ಅಕ್ಕಂದಿರು ತುಂಬಾ ಕಷ್ಟಕ್ಕೆ ಗುರಿ ಮಾಡುತ್ತಾರೆ. ಸೊಂಟಕ್ಕೆ ಕಲ್ಲು ಕಟ್ಟಿ ಮಾಳಿಗೆ ಏರಲು ಹೇಳುವುದು ಈ ರೀತಿಯ ಕಠಿಣ ಶಿಕ್ಷೆಯನ್ನು ಗರ್ಭಿಣಿಗೆ ವಿಧಿಸುತ್ತಾರೆ. ಒಂಭತ್ತು ತಿಂಗಳು ಕಳೆದು ಒಂಭತ್ತನೇ ದಿನ ಒಂಭತ್ತು ಗಂಟೆಗೆ ಗಂಡು ಮಗುವಿಗೆ ಜನ್ಮ ಕೊಡುತ್ತಾಳೆ. ಅಕ್ಕಂದಿರು ಮಗು

ವನ್ನು ಗೊಬ್ಬರದ ರಾಶಿಗೆ ಹಾಕುತ್ತಾರೆ. ಅವಳಿಗೆ ಕಪ್ಪೆಗಳು ಮಕ್ಕಳಾದವು ಎಂದು ಅರಸನಿಗೆ ಸುದ್ದಿ ತಲುಪುತ್ತದೆ. ಅರಸ ಅವಳನ್ನು ಅರಮನೆಯಿಂದ ಹೊರಗೆ ಹಾಕುತ್ತಾನೆ. ಈ ಗೊಬ್ಬರದ ರಾಶಿಯಲ್ಲಿದ್ದ ಮಗುವಿಗೆ, ಕಬಿಲೆ ಹಸು ಹಾಲು ಕೊಡುತ್ತದೆ. ಕರು ಬಿಡುವಾಗ ಹಾಲಿನ ಚೊಂಬಿಗೆ ಮುಟ್ಟಿದಾಗ ಹಾಲೆಲ್ಲ ಮಗುವಿನ ಬಾಯಿಗೆ ಹೋಗುತ್ತದೆ. ಮಗು ದಿನದಿಂದ ದಿನ ದೊಡ್ಡದಾಗುತ್ತದೆ. ಮರುದಿನ ಕಬಿಲೆ ಹಸುವನ್ನು ಕೊಲ್ಲುವುದೆಂದು ಯೋಚಿಸುತ್ತಾರೆ. ಅ ದಿನ ರಾತ್ರಿ ಕಬಿಲೆ ಹಸು ಮಗುವನ್ನು ಹೆಗ್ಗಣದ ವಶಕ್ಕೆ ಬಿಡುತ್ತದೆ. ಕೆಲವು ದಿನ ಕಳೆದಾಗ ಮಗು ಹೆಗ್ಗಣದ ಬಿಲದೊಳಗೆ ಕೂಗುವುದು ಕೇಳುತ್ತದೆ. ಹೆಗ್ಗಣವನ್ನು ಕೊಲ್ಲುವ ಉಪಾಯ ಮಾಡುತ್ತಾರೆ. ಹೆಗ್ಗಣ ಮಗುವನ್ನು ಜೇನುನೊಣದ ವಶಕ್ಕೆ ಬಿಟ್ಟುಕೊಡುತ್ತದೆ. ಜೇನುನೊಣಗಳು ಕೆರೆದಂಡೆಯ ಮರದ ತುದಿಯಲ್ಲಿ ತೊಟ್ಟಿಲು ಕಟ್ಟಿ ಮಗುವನ್ನು ಸಾಕುತ್ತವೆ. ನೀರಿಗೆ ಹೋದಾಗ ಮಗುವನ್ನು ಜೇನುನೊಣ ಸಾಕುವುದು ಗೊತ್ತಾಗುತ್ತದೆ. ಜೇನನ್ನು ತೆಗೆಯುವ ಯೋಜನೆ ಮಾಡುತ್ತಾರೆ. ಜೇನುನೊಣಗಳು ಮಗುವನ್ನು ಪಕ್ಕದ ಊರಿನ ಮುದುಕಿಗೆ ಕೊಡುತ್ತವೆ. ಮುದುಕಿ ಮಗುವನ್ನು ಸಾಕಿ ದೊಡ್ಡದು ಮಾಡುತ್ತಾಳೆ. ಮಗುವನ್ನು ಕೊಲ್ಲಲು ಮಾಡಿದ ಪ್ರಯತ್ನ ವ್ಯರ್ಥವಾಗುತ್ತದೆ. ಅರಸನಿಗೆ ನಿಜ ಸಂಗತಿ ತಿಳಿದಾಗ ಏಳುಜನ ಮಡದಿಯರ ತಲೆ ಕಡಿದು, ಈ ಅರಸ, ತಾಯಿ ಮತ್ತು ಮಗು ಸುಖದಲ್ಲಿರುತ್ತಾರೆ.

ಗೌ.ಕ.ಜ.ಕ. ೩೨. ನಿಂಬೆ ಹಣ್ಣೊಳಗಿನ ಹೆಣ್ಣು: ಹಾವನ್ನು ಕೊಂದು ಹಣ್ಣಿನೊಳಗಿನ ಹೆಣ್ಣನ್ನು ತಂದು ಮದುವೆಯಾಗುವುದು.

ಒಬ್ಬ ಅರಸನಿಗೆ ಏಳು ಜನ ಗಂಡುಮಕ್ಕಳು. ಆರು ಜನಕ್ಕೆ ಮದುವೆ ಆಗಿರುತ್ತದೆ. ಕೊನೆಯವ ಅತ್ತಿಗೆಯ ತೊಡೆಯಲ್ಲಿ ಮಲಗಿ ಹೇನು ತೆಗೆಸುತ್ತಾನೆ. ಆಗ ಅತ್ತಿಗೆಯ ಮೊಲೆ ತಾಗುತ್ತದೆ. ಅತ್ತಿಗೆ ಏಳು ಸಮುದ್ರದಾಚೆಗೆ ನಿಂಬೆ ಹಣ್ಣೊಳಗಿನ ಬಾಳೆ ಮೈತ್ರಿ ಹೆಣ್ಣು ತರಲು ಹೇಳುತ್ತಾಳೆ. ತಂದರೆ ಪಗಳದಾರತಿ ಮತ್ತು ಚಿನ್ನದ ಧಾರೆ ಮಾಡುತ್ತೇವೆ ಎನ್ನುತ್ತಾಳೆ. ಮರುದಿನ ಕೆರೆಯೊಂದರ ಹತ್ತಿರ ಅಶ್ವತ್ಥ ಮರದಲ್ಲಿ ಎರಡು ಗಿಳಿಗಳು ಈತನ ಕಷ್ಟವನ್ನು ತಿಳಿಯುತ್ತವೆ. ನಮ್ಮ ರೆಕ್ಕೆಯಲ್ಲಿ ನೇತಾಡುವಂತೆ ಹೇಳಿ ಸಮುದ್ರದಾಚೆ ಹಾರುತ್ತವೆ. ಒಂದು ನಿಂಬೆ ಹಣ್ಣಿಗೆ ಎರಡು ಸರ್ಪದಂತೆ ಕಾವಲಿರುತ್ತವೆ. ಮೂರು ಸುತ್ತು ಬಂದಾಗ ಕೊಯ್ಯದಿದ್ದರೆ ಅಲ್ಲೇ ನೀರಿಗೆ ಹಾಕುವವೆಂಬುದಾಗಿ ಗಿಳಿಗಳು ಹೇಳುತ್ತವೆ. ಗಿಳಿಗಳು ಸಮುದ್ರದಾಚೆ ಹಾರುತ್ತವೆ. ಒಂದು ನಿಂಬೆ ಹಣ್ಣು ಕೊಯ್ದುಕೊಂಡು ಭಾಗ ಮಾಡಿದಾಗ ಸುಂದರಿ ಬಾಳೆ ಮೈತ್ರಿ ಹೆಣ್ಣು ಹೊರಬರುತ್ತಾಳೆ. ಅವಳನ್ನು ಕಂಡು ಮೂರ್ಛೆ ಹೋದಾಗ, ಅರಸನ ಮನೆಯ ಕೆಲಸದಾಕೆ ಸುಂದರಿಯನ್ನು ಕೆರೆಗೆ

ದೂಡುತ್ತಾಳೆ. ಕೆರೆಯಲ್ಲಿ ಬಾಳೆ ಮೈತ್ರಿ ತಾವರೆ ಹೂವಾಗುತ್ತಾಳೆ. ತಾವರೆಯನ್ನು ಕೊಯ್ದು ಮನೆಗೆ ತಂದಾಗ ಅದನ್ನು ಹುಡಿಮಾಡಿಹಾಕುತ್ತಾಳೆ. ಅದು ಮಾವಿನ ಮರವಾಗುತ್ತದೆ. ಮಾವಿನ ಮರದ ರಸಬೇಕು ಎಂದು ಮಾವಿನ ಮರ ಕಡಿಸಿದಾಗ ಒಂದು ಮಾವಿನ ಹಣ್ಣು ದೂರ ಹೋಗಿ ಬೇಡುವ ಮುದುಕಿಗೆ ಸಿಗುತ್ತದೆ. ಆ ಮಾವಿನ ಹಣ್ಣಿಂದ ಬಾಳೆ ಮೈತ್ರಿ ಹೊರಬರುತ್ತಾಳೆ. ಅವಳ ರಕ್ತ ಬೇಕೆಂದು ತಲೆ ಕಡಿದಾಗ, ಆ ತಲೆ ಅಮ್ಟೂರ ದೇವಿ ಗುಡಿಯಾಗುತ್ತದೆ. ಕಾಲುಗಳು ಅಶ್ವತ್ಥ ಮರವಾಗುತ್ತವೆ, ಕೈಗಳೆರಡು ಗಿಳಿಗಳಾಗಿ ಪರಿವರ್ತನೆಯಾಗುತ್ತವೆ. ಅಮ್ಟೂರ ದೇವಿ ಗುಡಿಯೊಳಗೆ ಸುಂದರಿ ಇರುತ್ತಾಳೆ. ಅವಳನ್ನು ಕರೆದುಕೊಂಡು ಅರಮನೆಯಲ್ಲಿ ಪಗಳದಾರತಿ ಮಾಡಿ ಚಿನ್ನದ ದಾರೆ ಹೊಯ್ದು ಸುಖವಾಗಿರುತ್ತಾರೆ.

[ಕ.ಜ.ಕ. (ಸಂ). (ವೀ)]

ಗೌ.ಕ.ಜ ಕ. ೩೩. ಕಪಟಿ ವಧು : ಚದುರಂಗಿಯ ಬದಲು ಕುರುಡಿ ಕುಂಬಾರ್ತಿ ಕಪಟಿ ಹೆಂಡತಿಯಾಗಿ ಮನೆಗೆ ಬರುವುದು.

ಒಂದು ಊರಲ್ಲಿ ಒಬ್ಬ ಅರಸನಿಗೆ ಏಳು ಜನ ಮಕ್ಕಳು. ಕೊನೆಯವನಿಗೆ ಮದುವೆಯಾಗಿರುವುದಿಲ್ಲ. ಒಮ್ಮೆ ಅತ್ತಿಗೆಯ ತೊಡೆಯ ಮೇಲೆ ಮಲಗುವಾಗ ಅತ್ತಿಗೆಯ ಮೊಲೆ ತಲೆಗೆ ತಾಗುತ್ತದೆ. ಅತ್ತಿಗೆ ಮೈದುನನನ್ನು ಚದುರಂಗಿ ಹೆಣ್ಣು ತರಲು ಕಳುಹಿಸುತ್ತಾಳೆ.

ಏಳು ಸಮುದ್ರದ ಆಚೆಗೆ ಹತ್ತೆ ಮರದ ಹಣ್ಣೊಳಗೆ ಚದುರಂಗಿ ಹೆಣ್ಣು ಇರುತ್ತಾಳೆ. ಅವಳನ್ನು ಪಡೆಯಲು ೧೨ ವರ್ಷ ತಪಸ್ಸು ಮಾಡಬೇಕು. ಅತ್ತಿಗೆಯ ಮಾತಿನಂತೆ ಚದುರಂಗಿ ಹೆಣ್ಣನ್ನು ತರುತ್ತಾನೆ. ಅರಮನೆಗೆ ಬರುವಾಗ ಮರವೊಂದರ ಕೆಳಗೆ ವಿಶ್ರಾಂತಿ ಪಡೆಯುತ್ತಾನೆ. ಅಲ್ಲಿಗೆ ಒಬ್ಬಳು ಕುರ್ಡಿ ಕುಂಬಾರ್ತಿ ಬರುತ್ತಾಳೆ. ಆಕೆ ಚದುರಂಗಿಯನ್ನು ನೀರಿಗೆ ದೂಡಿ ಹಾಕಿ ತಾನು ಚದುರಂಗಿ ಹೆಣ್ಣು ಎನ್ನುತ್ತಾಳೆ.

ಬಾವಿಗೆ ಬಿದ್ದ ಚದುರಂಗಿ ಹೆಣ್ಣು ತಾವರೆ ಹೂವಾಗಿ ಹುಟ್ಟುತ್ತಾಳೆ. ಈತ ಕುರ್ಡಿ ಕುಂಬಾರ್ತಿಯನ್ನು ಕರೆದುಕೊಂಡು ಅರಮನೆಗೆ ಬಂದಾಗ ಅತ್ತಿಗೆ ಚದುರಂಗಿ ಹೆಣ್ಣಲ್ಲವೆಂದು ಹೇಳುತ್ತಾಳೆ. ಮತ್ತೆ ಕಾಡಿಗೆ ಬೇಟೆಗೆ ಹೋಗುತ್ತಾನೆ. ಅದೇ ಕೆರೆಗೆ ನೀರು ಕುಡಿಯಲು ಹೋದಾಗ ತಾವರೆ ಹೂವು ಹತ್ತಿರ ಹತ್ತಿರ ಬರುತ್ತದೆ. ತಾವರೆ ಹೂವನ್ನು ಕೊಯ್ದು ಮನೆಯ ಬಾಗಿಲು ದಾರಂದಲ್ಲಿಡುತ್ತಾನೆ.

ಒಂದು ದಿನ ಗುಬ್ಬಿ ಹಕ್ಕಿ ಹೇಳುತ್ತದೆ, ತಾವರೆ ಹೂ ನಿನ್ನ ಚದುರಂಗಿ ಹೆಣ್ಣು. ಆ ಹೂವಿಗೆ ನೀನು ಪೂಜೆ ಮಾಡಿದರೆ ನಿನ್ನ ಚದುರಂಗಿ ಮತ್ತೆ ಬರುತ್ತಾಳೆಂದು. ಗುಬ್ಬಿ ಹಕ್ಕಿಯ ಮಾತಿನಂತೆ ಪೂಜೆ ಮಾಡಿ ಚದುರಂಗಿ ಹೆಣ್ಣನ್ನು ಪಡೆಯುತ್ತಾನೆ. ಅವರು ಸುಖದಲ್ಲಿ ಇರುತ್ತಾರೆ. [ತು. ಜ. ಕ. (ರಾ)]

ಗೌ.ಕ.ಜ.ಕ. ೩೪. ಕೊರಳ ಹಾರದಲ್ಲಿ ಜೀವವಿರುವ ಯುವತಿಯನ್ನು ಅರಸ ಮದುವೆಯಾಗುವುದು.

ಒಂದು ಅಜ್ಜಿಗೆ ಒಬ್ಬಳೇ ಮಗಳು. ಅವಳು ದೊಡ್ಡವಳಾಗುವಾಗ ಸಾಯುತ್ತಾಳೆ. ಹೆಣವನ್ನು ಕಾಡಲ್ಲಿ ಬಿಟ್ಟು ಬರುತ್ತಾರೆ. ರಾತ್ರಿಯಾದಾಗ ಆಕೆಗೆ ಎಚ್ಚರವಾಗುತ್ತದೆ. ಆಗ ಅವಳು ದೊಡ್ಡ ಅರಮನೆಯಲ್ಲಿರುತ್ತಾಳೆ. ಒಂದು ದಿನ ಒಬ್ಬ ಅರಸ ಬೇಟೆಗೆಂದು ಬಂದವ ಆ ಅರಮನೆಗೆ ಬರುತ್ತಾನೆ. ಅರಮನೆಯಲ್ಲಿ ಯಾರೂ ಇರುವುದಿಲ್ಲ. ವಿವಿಧ ತಿಂಡಿಗಳು ತಯಾರಾಗಿರುತ್ತವೆ. ಅಲ್ಲಿ ಒಂದು ಹೆಣವಿರುತ್ತದೆ. ಬೇಕಷ್ಟು ತಿಂದು ಎಂಜಿಲು ಮಾಡಿ ಹೋಗುತ್ತಾನೆ. ರಾತ್ರಿಯಾದಾಗ ಆಕೆಗೆ ಎಚ್ಚರಾಗುತ್ತದೆ. ಎಂಜಲನ್ನು ತಿನ್ನುತ್ತಾಳೆ. ಆಕೆಗೆ ಗರ್ಭ ನಿಲ್ಲುತ್ತದೆ. ಕೆಲವು ತಿಂಗಳು ಕಳೆದು ಮಗುವಾಗುತ್ತದೆ. ಅರಸ ದಿನನಿತ್ಯವೂ ಬಂದು ಮಗುವನ್ನು ಮುದ್ದಾಡಿ ಆಡಿಸುವುದು, ಊಟ ಮಾಡಿಸುವುದು ಹೀಗೆ ಕಳೆಯುತ್ತದೆ. ಒಂದು ದಿನ ನಿನ್ನ ತಾಯಿ ಯಾಕೆ ರಾತ್ರಿ ಸಾಯುವುದು ಎಂದು ಕೇಳುತ್ತಾನೆ. ತಾಯಿ ಜೀವ ಕೊರಳ ಹಾರದಲ್ಲಿರುವುದೆಂದು ಮಗು ಹೇಳುತ್ತದೆ. ಅರಸು ತನ್ನ ಪತ್ನಿಯ ಕೊರಳ ಹಾರವೇ ಅದು ಎಂದು ತಿಳಿದಿರುವುದಿಲ್ಲ. ಈ ಮಗು ಅರಸನೊಂದಿಗೆ ಅರಮನೆಗೆ ಬಂದು ರಾಣಿಯ ಕೊರಳ ಹಾರವನ್ನು ಹಿಡಿದುಕೊಂಡು ಓಡೋಡಿ ಬರುತ್ತದೆ. ತನ್ನ ತಾಯಿಯ ಕೊರಳಿಗೆ ಹಾಕಿದಾಗ ತಾಯಿ ಎದ್ದು ಕುಳಿತುಕೊಳ್ಳುತ್ತಾಳೆ.

ಗೌ.ಕ.ಜ.ಕ. ೩೫. ಕೊರಳ ಹಾರದಲ್ಲಿ ಜೀವವಿರುವುದು.

ಒಬ್ಬ ಅರಸುಕುಮಾರನಿಗೂ ಗಾಣಿಗರ ಹುಡುಗಿಗೂ ಪಂಥ ಬೀಳುತ್ತದೆ. ಜಾತಿ ಬೇರೆಯಾದರೂ ಆಕೆಯನ್ನೇ ಮದುವೆಯಾಗುವುದೆಂದು ಅರಸುಕುಮಾರ ಒತ್ತಾಯ ಮಾಡುತ್ತಾನೆ. ಪಂಥವಲ್ಲಿ ಗಾಣಿಗಿತ್ತಿಯೊಂದಿಗೆ ಒಂದು ದಿನಕ್ಕಾದರೂ ಒಲೆಯ ಬೂದಿ ತೆಗೆಸುವೆನು ಎನ್ನುತ್ತಾನೆ. ಆಗ ಆಕೆ ಗಂಡನ ಹಿಡಿಯದೆ ಮಿಂಡನ ಅರಸದೆ ನಿನಗೆ ಹುಟ್ಟಿದ ಮಗನಿಂದ ಮಂಚಕ್ಕೆ ಕಟ್ಟಿ ಹಾಕಿಸಿ ಹೊಡೆಸುವೆ ಎಂದು ಪ್ರತಿ ಮಾತು ಹೇಳುತ್ತಾಳೆ. ಇಬ್ಬರಿಗೂ ಮದುವೆಯಾಗುತ್ತದೆ. ಆದರೂ ಅರಸುಕುಮಾರ ಹೆಂಡತಿಯನ್ನು ಸೇರುವುದಿಲ್ಲ. ಆತ ಒಬ್ಬ ಸೂಳೆಯ ಸಹವಾಸ ಮಾಡುತ್ತಾನೆ. ಗಾಣಿಗಿತ್ತಿಯನ್ನು ಕೊಲ್ಲಬೇಕೆಂದು ಸೂಳೆ ಯೋಜಿಸುತ್ತಾಳೆ. ಆಕೆಯ ಜೀವ ಕೆರೆಯೊಂದರ ಮೊಸಳೆಯ ಹೊಟ್ಟೆಯಲ್ಲಿ ಗಿಳಿಯ ಕೊರಳ ಹಾರದಲ್ಲಿ ಇರುತ್ತದೆಂದು ಹೇಳುತ್ತಾಳೆ. ಅರಸುಕುಮಾರ ಕೆರೆಯ ನೀರು ಆರಿಸಿ, ಮೊಸಳೆಯನ್ನು ಹಿಡಿದು, ಮೊಸಳೆಯ ಹೊಟ್ಟೆಯಲ್ಲಿರುವ ಗಿಳಿಯ ಕೊರಳಹಾರ ತಂದು ಸೂಳೆಯ ಕುತ್ತಿಗೆಗೆ ಹಾಕುತ್ತಾನೆ. ಈ ಕಡೆ ಗಾಣಗಿತ್ತಿ ಸತ್ತೇ ಹೋದಳು. ಆಕೆಯನ್ನು ಪೆಟ್ಟಿಗೆಯಲ್ಲಿ ಹಾಕಿ ಕಾಡಲ್ಲಿ ಇಡುತ್ತಾರೆ. ಒಂದು ದಿನ ಅರಸುಕುಮಾರ

ಬೇಟೆಗೆ ಹೋದಾಗ ಈ ಪೆಟ್ಟಿಗೆ ಸಿಗುತ್ತದೆ. ಆ ಪೆಟ್ಟಿಗೆಯ ಸುತ್ತ ಎಲೆ ಅಡಿಕೆ ತಿಂದು ಎಂಜಲು ಉಗಿಯುತ್ತಾನೆ. ಗಾಣಿಗಿತ್ತಿಗೆ ಗರ್ಭ ನಿಲ್ಲುತ್ತದೆ. ಕೆಲವು ತಿಂಗಳು ಕಳೆದಾಗ ಮಗುವಾಗುತ್ತದೆ. ಮತ್ತೊಮ್ಮೆ ಬರುವಾಗ ತನ್ನ ತಾಯಿಯ ಜೀವ ಸೂಳೆಯ ಕೊರಳ ಹಾರದಲ್ಲಿರುವುದನ್ನು ಹೇಳುತ್ತದೆ. ಒಂದು ದಿನ ಮಗುವನ್ನು ಮನೆಗೆ ಕರೆದುಕೊಂಡು ಹೋಗುತ್ತಾನೆ. ಸೂಳೆಯ ಕೊರಳ ಹಾರವನ್ನು ಮಗು ತೆಗೆದು ಕೊಂಡು ಬಂದು ತಾಯಿ ಕೊರಳಿಗೆ ಹಾಕುತ್ತದೆ. ಗಾಣಿಗಿತ್ತಿ ತಾನು ಹೇಳಿದ ಮಾತನ್ನು ನಡೆಸಿಕೊಡುತ್ತಾಳೆ. ಮುಂದೆ ಅರಸುಕುಮಾರ, ಗಾಣಿಗಿತ್ತಿ ಮತ್ತು ಮಗು ಸುಖವಾಗಿರುತ್ತಾರೆ. [ಕ.ಜ.ಕ. (ಸಂ) (ವೀ)]

ಗೌ.ಕ.ಜ.ಕ. ೩೬. ಅಪ್ಸರೆಯ ಬಟ್ಟೆ ಕದ್ದು ಮದುವೆಯಾಗುವುದು.

ಒಬ್ಬ ಅರಸನಿಗೆ ನಾಲ್ಕು ಜನ ಮಕ್ಕಳು. ಕೊನೆಯ ಮಗನಿಗೆ ಮದುವೆ ಆಗಿರುವುದಿಲ್ಲ. ಒಂದು ದಿನ ಆತ ಒಬ್ಬ ಮಡಿವಾಳನನ್ನು ನದಿಯಲ್ಲಿ ಸ್ನಾನ ಮಾಡಿಸುತ್ತಿದ್ದ. ಮರುದಿನ ತಂದೆ ಮತ್ತು ಮೂವರು ಅಣ್ಣಂದಿರು ಸೇರಿ ಆತನನ್ನು ಮನೆಯಿಂದ ಹೊರಹಾಕುತ್ತಾರೆ. ಆತ ದೇಶಾಂತರ ಹೋಗುತ್ತಾನೆ. ಹಾಗೆ ಹೋದವ ಒಬ್ಬ ಋಷಿಯೊಂದಿಗೆ ಸೇರಿಕೊಳ್ಳುತ್ತಾನೆ. ಒಂದು ದಿನ ಋಷಿ ಪೂಜೆಗೆಂದು ಹೂವ ತರಲು ಅರಸುಕುಮಾರನನ್ನು ತೋಟದ ಕಡೆ ಕಳುಹಿಸುತ್ತಾನೆ. ತೋಟದ ಆಚೆ ಭಾಗದಲ್ಲಿ ದೇವಕನ್ನೆಯರು ಸ್ನಾನ ಮಾಡುತ್ತಿರುತ್ತಾರೆ. ಅವರಲ್ಲಿ ಒಬ್ಬಳ ಸೀರೆಯನ್ನು ತೆಗೆದುಕೊಂಡು ಬರುತ್ತಾನೆ. ದೇವಕನ್ನೆಯರ ಶಾಪದಿಂದ ಕಲ್ಲಾಗುತ್ತಾನೆ. ಋಷಿಯು ಮಾಂತ್ರಿಕ ಶಕ್ತಿಯಿಂದ ಕಲ್ಲನ್ನು ಮತ್ತೆ ಮನುಷ್ಯ ಜೀವಿಯಾಗಿ ಪರಿವರ್ತಿಸುತ್ತಾನೆ. ಮರುದಿನ ದೇವಕನ್ನೆಯೊಬ್ಬಳ ಸೀರೆಯನ್ನು ತೆಗೆದುಕೊಂಡು ಓಡಿಬರುತ್ತಾನೆ. ಒಬ್ಬಳು ದೇವಕನ್ನೆ ಬರುತ್ತಾಳೆ. ಅವಳೊಂದಿಗೆ ಸುಖವಾಗಿರುತ್ತಾನೆ. ಸ್ವಲ್ಪ ಸಮಯ ಕಳೆದು ಇಬ್ಬರೂ ಋಷಿಯ ಆಶೀರ್ವಾದ ಪಡೆದುಕೊಂಡು ಹೊರಡುತ್ತಾರೆ. ಒಬ್ಬ ಅರಸನ ಮನೆಯಲ್ಲಿ ಕೆಲಸಕ್ಕೆ ಸೇರಿ ಕೊಳ್ಳುತ್ತಾರೆ. ಅರಸನ ಮಡದಿಗೆ ದೇವಕನ್ನೆಯನ್ನು ತಮ್ಮ ಮನೆಗೆ ತರಬೇಕೆಂದು ಆಸೆಯಾಗುತ್ತದೆ. ಒಂದು ದಿನ ಅರಸುಕುಮಾರ ದನಕಾಯುವುದಕ್ಕೆ ಹೋಗು ತ್ತಾನೆ. ಕಾಡಲ್ಲಿ ಬಿದಿರೊಳಗಿನ ಚಮರಂಗಿ ಸಿಗುತ್ತಾಳೆ. ಆಕೆಯನ್ನು ಮನೆಗೆ ಕರೆದುಕೊಂಡು ಬರುತ್ತಾನೆ. ದೇವಕನ್ಯೆ ಮತ್ತು ಚಮರಂಗಿ ಹೆಣ್ಣು ಸುಖದಲ್ಲಿರು ತ್ತಾರೆ. ಆ ಊರಿನ ಅರಸನಿಗೆ ಈತನನ್ನು ಕೊಲ್ಲುವ ಯೋಚನೆ ಆಗುತ್ತದೆ. ಹಾಗಾಗಿ ದೊಡ್ಡ ಬಾವಿ ತೋಡಿಸಿ ಅದರೊಳಗೆ ಇಳಿಯಲು ಹೇಳುತ್ತಾನೆ. ಇದನ್ನು ತಿಳಿದುಕೊಂಡ ದೇವಕನ್ನೆ ಇಲಿಯೊಂದರ ಸಹಾಯದಿಂದ ಆ ಬಾವಿಗೆ ದಾರಿ ಮಾಡಿಸುತ್ತಾಳೆ. ಅರಸುಕುಮಾರ ಬಾವಿಯಿಂದ ಸುಖವಾಗಿ ಮನೆಗೆ ಬರುತ್ತಾನೆ. ಮರುದಿನ ಆ ಅರಮನೆಯವರನ್ನೆಲ್ಲಾ ಬಾವಿಗೆ ಹಾಕಿ ಮೇಲ್ಗಡೆಯಿಂದ ಮಣ್ಣು

ತುಂಬಿಸಿ ಚದುರಂಗಿ ಹೆಣ್ಣು ಮತ್ತು ದೇವಕನ್ನೆಯೊಂದಿಗೆ ಮದುವೆಯಾಗುತ್ತಾನೆ. ಊರಿಗೆಲ್ಲಾ ಸಂಭ್ರಮದ ಊಟ ಕೊಡುತ್ತಾನೆ. ಮದುವೆಯ ಸಮಾರಂಭಕ್ಕೆ ಅರಸುಕುಮಾರನ ತಂದೆ, ತಾಯಿ, ಅಣ್ಣಂದಿರು, ಅತ್ತಿಗೆಯರು ಬಂದಿರುತ್ತಾರೆ. ಮನೆಯಿಂದ ಹೊರಟಾಗ ಅವರೆಲ್ಲಾ ಹಾಕಿದ ಸವಾಲನ್ನು ಪೂರೈಸುತ್ತಾನೆ. [ಕ.ಜ.ಕ. (ವೀ)]

ಗೌ.ಕ.ಜ.ಕ. ೩೭. ಗಿಳಿಯು ಹೆಣ್ಣಾಗಿ ಮಾರ್ಪಟ್ಟು ಅನೇಕ ಸಾಹಸಗಳನ್ನು ಮಾಡುವುದು.

ಅರಸನಿಗೊಬ್ಬ ಮಗ. ಆತ ಬ್ರಹ್ಮಬರಹಕ್ಕೆಂದು ಹೊರಡುತ್ತಾನೆ. ಆ ದಿನ ರಾತ್ರಿ ತಂದೆಯೊಂದಿಗೆ ಸಲಿಗೆಯಿಂದ ವರ್ತಿಸಲಿಲ್ಲವೆಂದು ಮಗನ ತಲೆ ಕತ್ತರಿಸುವಂತೆ ಆಜ್ಞೆ ಮಾಡುತ್ತಾನೆ. ಆತನ ತಾಯಿ ಮತ್ತು ಪ್ರಧಾನಿಯ ಸಹಾಯದಿಂದ ಮನೆ ಬಿಟ್ಟು ದೇಶಾಂತರಕ್ಕೆ ಹೋಗುತ್ತಾನೆ. ಒಬ್ಬಳು ಮುದುಕಿಯ ಮನೆ ಸೇರುತ್ತಾನೆ. ಆಗ ಊರಿನ ಅರಸ ಆತನನ್ನು ಬರಮಾಡಿಕೊಳ್ಳುತ್ತಾನೆ. ಆತ ಗಿಳಿಯಾಗಿ ರೂಪ ಪರಿವರ್ತನೆಯಾಗುತ್ತಾನೆ. ಆ ಗಿಳಿ ಅರಸನ ಮಗಳ ಬಳಿ ಸೇರಿಕೊಳ್ಳುತ್ತದೆ. ಒಂದು ದಿನ ಅರಸನ ಮಗಳು ಗಿಳಿಯ ಮೈ ಸವರುತ್ತಿರುವಾಗ, ಅದು ಮನುಷ್ಯ ರೂಪ ಪಡೆಯುತ್ತದೆ. ಆಕೆಗೂ ಆತನಿಗೂ ಸಂಬಂಧ ಬೆಳೆಯುತ್ತದೆ. ಆತ ವ್ಯಾಪಾರಕ್ಕೆಂದು ಹಡಗಿನ ಮೂಲಕ ಬೇರೊಂದು ದೇಶಕ್ಕೆ ಹೋಗುತ್ತಾನೆ. ಅಪ್ಪರ ತನಕ ಏಳು ಸಮುದ್ರದ ಆಚೆಯ ಊರಿಗೆ ಹೋಗಬಾರದೆಂದು ನಿಷೇಧವಿತ್ತು. ಆ ಊರಲ್ಲಿ ಒಬ್ಬಳು ರಾಕ್ಷಸಿ ಮನುಷ್ಯರನ್ನು ತಿನ್ನುವುದು. ಈತ ಹೋಗುವಂದು ರಾಕ್ಷಸಿ ಊರ ಹೊರಗೆ ಹೋಗಿದ್ದಳು. ರಾಕ್ಷಸಿಗೆ ಒಬ್ಬಳು ಮಗಳು. ಅವಳ ಸಹಾಯದಿಂದ ಆತ ಆ ದಿನ ನಿಲ್ಲುತ್ತಾನೆ. ರಾಕ್ಷಸಿಯ ಜೀವ ಎಲ್ಲಿರುವುದೆಂದು ತಿಳಿಯುತ್ತಾನೆ. ಮರುದಿನ ಊರ ಹೊರಗಿನ ಬಾವಿಯ ನೀರು ಆರಿಸುತ್ತಾನೆ. ಆ ಬಾವಿಯೊಳಗೆ ಒಂದು ಆನೆ – ಅದರ ಹೊಟ್ಟೆಯೊಳಗೆ ಒಂದು ಆಮೆ – ಅದರ ಹೊಟ್ಟೆಯೊಳಗೆ ಒಂದು ಗಿಳಿ ಇರುತ್ತದೆ. ಆ ಗಿಳಿಯ ಜೀವ ಹೋದಾಗ ರಾಕ್ಷಸಿಯ ಜೀವ ಹೋಗುತ್ತದೆ. ರಾಕ್ಷಸಿ ಮಗಳನ್ನು ಜೊತೆ ಸೇರಿಕೊಂಡು ಊರಿಗೆ ಹೊರಡುತ್ತಾನೆ. ಸಮುದ್ರದ ಮಧ್ಯೆ ಆತನನ್ನು ಕೊಲ್ಲಲು ಪ್ರಯತ್ನಿಸುತ್ತಾರೆ. ಮೀನುಗಳ ಸಹಾಯದಿಂದ ಒಂದು ಊರಿಗೆ ಸೇರುತ್ತಾನೆ. ಚರ್ಮವನ್ನು ತೊಟ್ಟುಕೊಂಡು ದನ ಮೇಯಿಸುತ್ತಾನೆ. ಆ ಊರಿನ ಅರಸನ ಮಗಳು ಆತನ ನಿಜ ರೂಪ ತಿಳಿದು ಮದುವೆಯಾಗುತ್ತಾಳೆ.

ಗೌ.ಕ.ಜ.ಕ. ೩೮. ಮೀನಿನ ಹೆಂಡತಿ – ತಂಗಿಯ ಮತ್ಸರ : ಹುಡುಗಿ ಮೀನನ್ನು ಮದುವೆಯಾಗುವುದು. ಅವಳ ತಂಗಿ ಮತ್ಸರದಿಂದ ಬಾವಿಗೆ ದೂಡುವುದು.

ಒಬ್ಬ ಅರಸ. ಆತನಿಗೆ ಮಕ್ಕಳಿರುವುದಿಲ್ಲ. ಗದ್ದೆ ಕಡೆ ತಿರುಗುವಾಗ ಏಡಿ
ಯೊಂದು ನೂರಾರು ಮರಿಗಳನ್ನು ಕೂಡಿಕೊಂಡು ಆಟವಾಡುತ್ತದೆ. ಅರಸನಿಗೆ
ಏಡಿಯ ಸಂಸಾರವನ್ನು ಕಂಡು ಬೇಸರವಾಗುತ್ತದೆ. ಅರಮನೆಯಲ್ಲಿ ಯಾರೊಡ
ನೆಯೂ ಮಾತನಾಡದೆ ಮಲಗುತ್ತಾನೆ. ಅರಮನೆಗೆ ಆ ದಿನ ಬೇಡನೊಬ್ಬ ಬರು
ತ್ತಾನೆ. ಆತ ಅರಸನಿಗೆ ಮಕ್ಕಳಾಗುವಂತೆ ಹಾರೈಕೆ ಮಾಡುತ್ತಾನೆ. ಮೀನು
ಮಗುವಾಗಿ ಹುಟ್ಟುತ್ತದೆ. ಮೀನನ್ನು ಕೆರೆಯಲ್ಲಿ ಬಿಡುತ್ತಾರೆ. ಕೆಲವು ವರ್ಷ
ಗಳಾದಾಗ ಮೀನು ದೊಡ್ಡದಾಗುತ್ತದೆ. ನನಗೆ ಮದುವೆಯಾಗಬೇಕೆಂದು ಅರಸ
ನೊಂದಿಗೆ ಒತ್ತಾಯಪಡಿಸುತ್ತದೆ. ಅರಸ ಒಬ್ಬಳು ಹುಡುಗಿಯನ್ನು ಹುಡುಕುತ್ತಾನೆ.
ಮದುವೆ ಮಾಡಿಸುತ್ತಾನೆ. ಹುಡುಗಿಗೆ ತುಂಬ ಬೇಸರವಾಗುತ್ತದೆ. ಹಾಗೇ ಬೇಸರ
ದಲ್ಲಿ ಕುಳಿತಿರಲು ಅಲ್ಲಿಗೆ ಶಿವಪಾರ್ವತಿಯರು ಬರುತ್ತಾರೆ. ಮೂರು ಮಂತ್ರದ ಕಲ್ಲು
ಕೊಟ್ಟು, ನೀನು ಮೀನಿನ ಹತ್ತಿರ ಹೋಗುವಾಗ ಈ ಕಲ್ಲನ್ನು ಹೊಡೆಯಬೇಕು.
ಮದುಮಗಳು ಮೂರು ಕಲ್ಲನ್ನು ಸೆರಗಲ್ಲಿ ಕಟ್ಟಿಕೊಂಡು ಕೆರೆದಂಡೆಗೆ ಹೋಗುತ್ತಾಳೆ.
ಮೀನು ತಿನ್ನಲು ಬರುತ್ತದೆ. ಮೂರು ಕಲ್ಲುಗಳನ್ನು ಒಂದೊಂದಾಗಿ ಹೊಡೆದಾಗ
ಮೀನು ಮನುಷ್ಯ ರೂಪವಾಗಿ ಪರಿವರ್ತನೆ ಹೊಂದುತ್ತದೆ. ಅರಸುಕುಮಾರನಿಗೂ
ಆಕೆಗೂ ಮದುವೆ ನೆರವೇರಿಸುತ್ತಾರೆ. ಕೆಲವು ತಿಂಗಳು ಕಳೆಯುತ್ತದೆ. ಆಕೆಯನ್ನು
ತವರಿಗೆ ಕರೆದೊಯ್ಯುತ್ತಾರೆ. ತವರಲ್ಲಿ ಆಕೆಯ ಚಿಕ್ಕಮ್ಮನ ಒಬ್ಬಳೇ ಮಗಳು
ಇರುತ್ತಾಳೆ. ಒಂದು ದಿನ ಸ್ನಾನ ಮಾಡಲು ಹೋದಾಗ ಅಕ್ಕ ಇವಳನ್ನು ಮೋಸ
ದಿಂದ ನೀರಿಗೆ ದೂಡುತ್ತಾಳೆ. ನೀರಲ್ಲಿ ತೇಲುತ್ತಾ ಹೋಗುವಾಗ ಹಾವೊಂದು
ಸಿಗುತ್ತದೆ. ಆ ಹಾವಿಗೆ ೧೨ ವರ್ಷದಿಂದ ಒಂದು ಬಾವು ಎದ್ದಿದೆ. ಇವಳ ಕೈ
ಮುಟ್ಟಿದಾಕ್ಷಣ ಅದು ಒಡೆಯುತ್ತದೆ. ಹಾವು ಆ ಸಂತೋಷದಲ್ಲಿ ಗರ್ಭಿಣಿ ಹೆಂಗಸಿಗೆ
ಮಾಯದ ಅರಮನೆ ಮಾಡಿಕೊಡುತ್ತದೆ. ಅವಳು ಅಲ್ಲಿ ಗಂಡು ಮಗುವಿಗೆ ಜನ್ಮ
ಕೊಡುತ್ತಾಳೆ. ಮಗುವಿಗೆ ಮೀನುಕುಮಾರ ಎಂದು ಹೆಸರು. ಮಗು ದೊಡ್ಡ
ದಾಗುತ್ತದೆ. ಬಳೆಗಾರನೊಬ್ಬನ ಸಹಾಯದಿಂದ ತಾಯಿ ಮತ್ತು ಮೀನುಕುಮಾರ
ಅರಸುಕುಮಾರನನ್ನು ಸೇರುತ್ತಾರೆ. ಸುಖವಾಗಿರುತ್ತಾರೆ. [ಕ.ಜ.ಕ. (ವೀ)]

ಗೌ.ಕ.ಜ.ಕ. ೩೯. **ಅಣ್ಣ ಮತ್ತು ತಂಗಿ ಕಥೆ :** ಅಣ್ಣಂದಿರು ಇಲ್ಲದಿದ್ದಾಗ ಅತ್ತಿಗೆ
ಯಂದಿರು ನಾದಿನಿಗೆ ತೊಂದರೆ ಕೊಡುವುದು. ಹೆಂಡತಿ
ಯರನ್ನು ಅಣ್ಣಂದಿರು ಕೊಲ್ಲುವುದು.

ಒಂದು ಊರಲ್ಲಿ ಏಳು ಜನ ಸಹೋದರರಿಗೆ ಒಬ್ಬಳೇ ತಂಗಿ. ಅವರು ತಬ್ಬಲಿ
ಮಕ್ಕಳು. ಅಣ್ಣಂದಿರಿಗೆಲ್ಲಾ ಮದುವೆಯಾಗುತ್ತದೆ. ತಂಗಿಯ ಮೇಲೆ ಅವರಿಗೆ
ತುಂಬಾ ಪ್ರೀತಿ. ಅವಳ ಪ್ರತಿ ಕೂದಲಿಗೂ ಮುತ್ತು ತರಲು ಊರೂರು ಹೋಗು
ತ್ತಾರೆ. ಏಳು ಜನ ಅತ್ತಿಗೆಯಂದಿರು ನಾದಿನಿಯನ್ನು 'ಎರ್ಪೆ' ಹೂವು ಕೊಯ್ಯಲು

ಕರೆದೊಯ್ದು, ಮರಕ್ಕೆ ಹತ್ತಲು ಹೇಳಿ ಮರದಲ್ಲಿ ಬಿಟ್ಟು ಬರುತ್ತಾರೆ. ಆಕೆ ಕೂಗಿ ಕೂಗಿ ಮರದಡಿ ದೊಡ್ಡ ಕೆರೆಯಾಗುತ್ತದೆ. ಅಲ್ಲಿಗೆ ಒಂದು ಹುಲಿ ಬರುತ್ತದೆ. ಹುಲಿಗೆ ತನ್ನ ಕತೆ ಹೇಳಿ ತನ್ನನ್ನು ತಿನ್ನಬೇಕು, ಕಿರುಬೆರಳೊಂದನ್ನು ಉಳಿಸಬೇಕು ಎನ್ನುತ್ತಾಳೆ. ಹುಲಿ ತಿಂದು ಹೋಗುತ್ತದೆ. ಅಲ್ಲಿಗೆ ಒಬ್ಬಳು ಮುದುಕಿ ಬರುತ್ತಾಳೆ. ಒಣಗಿದ ಕಿರುಬೆರಳನ್ನು ಸೆರಗಲ್ಲಿ ಕಟ್ಟಿಕೊಳ್ಳುತ್ತಾಳೆ. ಆ ಕಿರುಬೆರಳು ಬೇಡಿದ ಅಕ್ಕಿಯೊಂದಿಗೆ ಸೇರಿ ಅಕ್ಕಿಯನ್ನು ಹಾಕುವ ಮಡಕೆಯಲ್ಲಿ ಇರುತ್ತದೆ. ಕೆಲವು ಸಮಯ ಕಳೆದಾಗ ಆ ಕಿರುಬೆರಳು ಸುಂದರ ಹೆಣ್ಣಾಗುತ್ತದೆ. ಮುದುಕಿಗೆ ಸಹಾಯವಾಗುತ್ತದೆ. ಮುದುಕಿ ಬೇಡಲು ಹೋದಾಗ ಈ ಹುಡುಗಿಯನ್ನು ಕರೆದೊಯ್ಯುತ್ತಾಳೆ. ಹುಡುಗಿಗೆ ಅಣ್ಣನವರ ಪರಿಚಯ ಆಗುತ್ತದೆ. ಅತ್ತಿಗೆಯಂದಿರನ್ನು ಅಣ್ಣಂದಿರು ಏಳು ದಾರಿ ಸೇರುವಲ್ಲಿ ತಲೆ ಕಡಿಯುತ್ತಾರೆ. [ತು.ಜ.ಕ. (ವೀ)]

ಗೌ.ಕ.ಜ.ಕ. ೪೦. ಅಣ್ಣನು ಮರವಾಗಿ ಪರಿವರ್ತನೆಯಾಗುವುದು : ತಂಗಿಯನ್ನು ಶಿಕ್ಷಿಸಿದ ಅಣ್ಣನನ್ನು ಅಪ್ಪ ಕೊಂದಾಗ ಮರವಾಗಿ ಪರಿವರ್ತನೆಯಾಗುವುದು.

ಒಂದು ಊರಲ್ಲಿ ಗಂಡ ಹೆಂಡತಿ ಮತ್ತು ಇಬ್ಬರು ಮಕ್ಕಳು. ಮೊದಲ ಮಗು ಗಂಡು. ಆತ ಗದ್ದೆಯ ಕೆಲಸ ಮಾಡುತ್ತಾನೆ. ಎರಡನೆಯ ಮಗು ಹೆಣ್ಣು. ಆಕೆ ಅಡುಗೆ ಕೆಲಸ ಮಾಡುತ್ತಾಳೆ. ಒಂದು ದಿನ ಅಣ್ಣ ಗದ್ದೆ ಕೆಲಸ ಮಾಡುವಲ್ಲಿಗೆ ತಂಗಿ ಬುತ್ತಿ ತರುತ್ತಾಳೆ. ಬುತ್ತಿ ತರುವಾಗ ಸ್ವಲ್ಪ ತಡವಾಗುತ್ತದೆ. ಅಣ್ಣ ತಂಗಿಯ ಮೇಲೆ ಕೋಪಗೊಂಡು ಕಲ್ಲಲ್ಲಿ ಗುದ್ದಿ ಮುಳ್ಳು ಚುಚ್ಚುತ್ತಾನೆ. ತಂಗಿ ಕೂಗುತ್ತಾ ಬರುತ್ತಾಳೆ. ಅಣ್ಣ ಕೊಟ್ಟ ಶಿಕ್ಷೆಯನ್ನು ತಂದೆಗೆ ವಿವರಿಸುತ್ತಾಳೆ. ಅಪ್ಪ ಮಗನನ್ನು ಕೊಲ್ಲುವ ಯೋಚನೆ ಮಾಡುತ್ತಾನೆ. ಹಟ್ಟಿಯ ಬಾಗಿಲಿಗೆ ಹಾವು ಬಿಡುತ್ತಾನೆ. ಮಗ ಎತ್ತುಗಳನ್ನು ಹೊಡೆದುಕೊಂಡು ಬಂದಾಗ ಹಾವು ಕಡಿದು ಸಾಯುತ್ತಾನೆ. ಮಗನ ಹೆಣವನ್ನು ಹೊಂಡದಲ್ಲಿ ಹಾಕುತ್ತಾನೆ. ಆ ಹೊಂಡದ ಮೇಲೆ ಒಂದು ಸಂಪಿಗೆ ಮರ ಬೆಳೆಯುತ್ತದೆ. ಅದು ಮಗ ಪುನರ್‌ಜನ್ಮವಾಗಿ ಬಂದದ್ದು ಎಂದು ಗೊತ್ತಾಗುತ್ತದೆ. ಹೂವು ಕೊಯ್ಯುವಾಗ ತಂಗಿಗೆ ಮಂಗಳ ಕಾರ್ಯ ನೆರವೇರುವ ಸಮಯ ಬರುತ್ತದೆ. ಹೂವು ಕೊಯ್ಯಲು ಸಂಪಿಗೆ ಮರದಡಿ ಹೋದಾಗ ತಂಗಿಯನ್ನು ಮರ ನಿಂದಿಸುತ್ತದೆ. ನಂತರ ತಂದೆ ಹೂವು ಕೊಯ್ಯಲು ಹೋಗುತ್ತಾನೆ. ತಂದೆಯನ್ನು ನಿಂದಿಸುತ್ತದೆ. ಪ್ರಯೋಜನಕ್ಕಿಲ್ಲದ ಮರವೆಂದು ಆ ಮರವನ್ನು ಕಡಿದು ಹಾಕುತ್ತಾನೆ.

ಗೌ.ಕ.ಜ.ಕ. ೪೧. ಉತ್ತರಕ್ಕಾಗಿ ದೇವರಲ್ಲಿಗೆ ಪ್ರಯಾಣ : ಉತ್ತರ ಪಡೆದ ನಾಯಕನಿಗೆ ಪ್ರತಿಫಲ ದೊರೆಯುತ್ತದೆ.

ಗಂಡ ಹೆಂಡತಿ ಒಬ್ಬ ಮಗ. ತಂದೆ ತೀರಿಕೊಂಡರೂ ಮಗನಿಗೆ ಊಟಕ್ಕೆ ಕಷ್ಟವೇ ಆಗುವುದಿಲ್ಲ. ಆತನ ತಾಯಿ 'ಇದೆಲ್ಲವನ್ನೂ ನಮಗೆ ಶಿವಕೊಟ್ಟ' ಎನ್ನುತ್ತಾಳೆ. ಆತ ಒಂದು ದಿನ ಶಿವನನ್ನು ಕಾಣಲು ಹೋಗುತ್ತಾನೆ. ದಾರಿಯಲ್ಲಿ ಮೂರು ಜನ ತಮ್ಮ ಕಷ್ಟವನ್ನು ಶಿವನಿಗೆ ಹೇಳೆನ್ನುತ್ತಾರೆ. ಒಬ್ಬ ಮಾವಿನ ಮರದ ಹಣ್ಣು ಹಾಳಾಗುವುದೇಕೆ ? ಎಂದು, ಇನ್ನೊಬ್ಬ ನಿಧಿಯ ಮೇಲೆ ಮಲಗಿದಾತನನ್ನು ಎಬ್ಬಿಸುವುದು ಹೇಗೆ ? ಎಂದೂ, ಮತ್ತೊಬ್ಬ ನೀರನ್ನು ಕಟ್ಟಿಹಾಕಿ ಹೇಗೆ ನಿಲ್ಲಿಸುವುದೆಂದು ಮೂರು ಪ್ರಶ್ನೆಗಳನ್ನು ಕೇಳಲು ಹೇಳುತ್ತಾರೆ. ಈತ ಶಿವನಲ್ಲಿ ಈ ಮೂರು ಪ್ರಶ್ನೆ ಕೇಳುತ್ತಾನೆ. ಮೊದಲನೆಯವನಿಗೆ ಗುರುಶಿಷ್ಯರ ಸಂಬಂಧ ಸರಿಇಲ್ಲದೇ ಮಕ್ಕಳು ಕಲ್ಲೆಸೆಯುವುದು, ಎರಡನೆಯವನಿಗೆ ನಿಧಿಯ ಕಾವಲುಗಾರನಾದ ಸರ್ಪಕ್ಕೆ ಆಹಾರ ಕೊಡಬೇಕು, ಮೂರನೆಯವನಿಗೆ ಮನೆಯಲ್ಲಿ ೨೪ ವರ್ಷದಿಂದ ಋತುವಾದ ಹುಡುಗಿ ಇದ್ದಾಳೆ, ಅವಳನ್ನು ಮದುವೆ ಮಾಡಿಕೊಡಬೇಕು. ಆತನಿಗೆ ಮೂರು ಪ್ರಶ್ನೆಗಳಿಗೆ ಉತ್ತರದೊಂದಿಗೆ ಗುರುವಿದ್ಯೆ, ನಿಧಿ, ಹೆಣ್ಣು ಸಿಗುತ್ತವೆ.

[ಕ. ಜ. ಕ. (ವೀ)]

ಗೌ.ಕ.ಜ.ಕ. ೪೨. ಕ್ರೂರ ಅಕ್ಕಂದಿರು ಮತ್ತು ಒಳ್ಳೆಯ ತಂಗಿ : ಮುದುಕಿಯ ಸಹಾಯದಿಂದ ಒಳ್ಳೆಯ ತಂಗಿ ಗೆಲ್ಲುವುದು.

ಒಬ್ಬ ಅರಸನಿಗೆ ಮಕ್ಕಳಿರುವುದಿಲ್ಲ. ಆತ ಎರಡನೇ ಮದುವೆಯಾಗುತ್ತಾನೆ. ಆಕೆಗೆ ಗರ್ಭ ನಿಲ್ಲುತ್ತದೆ. ಅದೇ ಸಮಯಕ್ಕೆ ಗಂಡ ದಂಡಿಗೆ ಹೋಗಬೇಕಾಗುತ್ತದೆ. ಗಂಡ ದಂಡಿಗೆ ಹೋದಾಗ ಮೊದಲ ಪತ್ನಿ ಗರ್ಭಿಣಿಗೆ ಶಿಕ್ಷೆ ಕೊಡುತ್ತಾಳೆ. ಗರ್ಭಿಣಿಯ ಸೊಂಟಕ್ಕೆ ಕಲ್ಲುಕಟ್ಟಿ ಮಾಳಿಗೆ ಹತ್ತುವಂತೆ ಹೇಳುತ್ತಾಳೆ. ಹೀಗೆ ನಾನಾ ರೀತಿಯ ಶಿಕ್ಷೆ ಕೊಡತ್ತಾಳೆ. ಆಕೆ ಹೆರುತ್ತಾಳೆ. ಗಂಡು ಮಗುವಾಗುತ್ತದೆ. ಮಗುವನ್ನು ಮುದುಕಿಗೆ ಕೊಟ್ಟು, ಆಕೆಗೆ ಕಪ್ಪೆಗಳು ಹುಟ್ಟಿವೆ ಎನ್ನುತ್ತಾಳೆ. ಎರಡನೆಯ ಬಾರಿ ಗರ್ಭಿಣಿಯಾಗುತ್ತಾಳೆ. ಅದು ಹೆಣ್ಣು ಮಗುವಾಗಿ ಜನಿಸುತ್ತದೆ. ಮೂರನೆ ಬಾರಿಯೂ ಹೆಣ್ಣು ಮಗುವಾಗುತ್ತದೆ. ಮೂರು ಮಕ್ಕಳನ್ನು ಒಬ್ಬಳು ಮುದುಕಿ ಸಾಕುತ್ತಾಳೆ. ಈ ಮೂರು ಮಕ್ಕಳನ್ನು ಅರಮನೆಗೆ ಕರೆದುಕೊಂಡು ಬಂದು ಮೊದಲ ಪತ್ನಿಯ ಮಾತ್ಸರ್ಯವನ್ನು ಹೇಳುತ್ತಾಳೆ. ಅರಸ ಮೊದಲ ಪತ್ನಿಯ ತಲೆ ಕಡಿಯುತ್ತಾನೆ.

ಗೌ.ಕ.ಜ.ಕ. ೪೩. ಅತಿಮಾನುಷ ಸಹಾಯಕರು : ತಲೆಬುರುಡೆಯ ಸಹಾಯದಿಂದ ಚಿನ್ನದ ಮೈ ಮತ್ತು ನರಿಯ ಮೋಸ.

ಒಬ್ಬ ಅರಸನಿಗೆ ಮಕ್ಕಳಿರುವುದಿಲ್ಲ. ಒಂದು ದಿನ ಅವರಲ್ಲಿಗೆ ಒಬ್ಬ ಬೇಡ ಬರುತ್ತಾನೆ. ಆತ ರಾಣಿಗೆ ಮೂರು ಮಕ್ಕಳಾಗಲಿ ಎಂದು ಹಾರೈಕೆ ಮಾಡುತ್ತಾನೆ.

ಮತ್ತು ಹುಟ್ಟಿದ ಮೊದಲ ಮಗುವನ್ನು ನನಗೆ ಕೊಡಬೇಕು ಎಂದು ಮಾತು ತೆಗೆದು ಕೊಳ್ಳುತ್ತಾನೆ. ರಾಣಿ ಗರ್ಭ ಧರಿಸುತ್ತಾಳೆ. ಒಂದರ ನಂತರ ಒಂದರಂತೆ ಮೂರು ಮಕ್ಕಳಾಗುತ್ತವೆ. ಅದರಲ್ಲಿ ಮೊದಲ ಮಗು ತುಂಬಾ ಚುರುಕು. ಕೆಲವು ವರ್ಷಗಳು ಕಳೆಯುತ್ತವೆ. ಈ ಮಕ್ಕಳು ದೊಡ್ಡವರಾಗುತ್ತಾರೆ. ಒಂದು ದಿನ ಬೇಡ ಅಜ್ಜ ಬರುತ್ತಾನೆ. ಮಗುವನ್ನು ಕೇಳುತ್ತಾನೆ. ದೊಡ್ಡ ಮಗನನ್ನು ಕೊಡಲು ದಂಪತಿಗಳಿಗೆ ಮನಸ್ಸು ಒಪ್ಪುವುದಿಲ್ಲ. ಆದರೂ ಕೊಟ್ಟು ಕಳುಹಿಸು ತ್ತಾರೆ. ಕಾಡು ಮೇಡಾಗಿ ಇಬ್ಬರೂ ಹೋಗುತ್ತಾರೆ. ಬೇಡ ಅಜ್ಜನ ಮನೆ ಸೇರಿಕೊಳ್ಳುತ್ತಾನೆ. ಆ ಮನೆಯೊಳಗೆ ೧೬ ಕೋಣೆಗಳಿರುತ್ತವೆ. ಒಂದೊಂದು ಕೋಣೆಯಲ್ಲೂ ವಿಚಿತ್ರ ದೃಶ್ಯಗಳು. ಒಂದು ಕೋಣೆಯೊಳಗೆ ಎಷ್ಟೋ ತಲೆ ಬುರುಡೆಗಳು ನೇತಾಡುತ್ತಿರುತ್ತವೆ. ಇನ್ನೊಂದು ಕೋಣೆಯೊಳಗೆ ಚಿನ್ನ, ಬಂಗಾರ, ಮುತ್ತು ರತ್ನಗಳ ರಾಶಿ. ಹದಿನಾರನೆ ಕೋಣೆಗೆ ಹೋಗಬಾರದೆಂದು ಬೇಡ ಹೇಳುತ್ತಾನೆ. ಒಂದು ದಿನ ಪೂಜೆಯ ಸಮಯಕ್ಕೆ ಬೇಡ ಸ್ನಾನಕ್ಕೆ ಹೋಗು ತ್ತಾನೆ. ಆಗ ಈತ ತಲೆಬುರುಡೆಯಿರುವ ೧೬ನೇ ಕೋಣೆಗೆ ಹೋಗುತ್ತಾನೆ. ಆ ತಲೆಬುರುಡೆಗಳು ಹುಡುಗನಿಗೆ ಬೇಡನ ಕತೆ ಹೇಳುತ್ತವೆ. ಬೇಡನನ್ನು ಪೂಜೆಯ ಸಮಯಕ್ಕೆ ಕೊಲ್ಲುವ ಉಪಾಯ ಹೇಳುತ್ತವೆ. ಇನ್ನೊಂದು ಕೋಣೆಗೆ ಹೋದಾಗ ಆತನ ಮೈ ಕೈ ಚಿನ್ನವಾಗುತ್ತದೆ. ಬೇಡ ಅಜ್ಜ ಪೂಜೆಗೆ ಕುಳಿತು ಕೊಳ್ಳುತ್ತಾನೆ. ಆ ಸಮಯಕ್ಕೆ ಈ ಹುಡುಗ ಅಜ್ಜನ ತಲೆ ಕಡಿಯುತ್ತಾನೆ. ಆದರೆ ತುಂಡಾದ ತಲೆ ಕೂಡಲೇ ಸೇರಿಕೊಳ್ಳುತ್ತದೆ. ಅಷ್ಟರೊಳಗೆ ಹುಡುಗ ದೂರದ ಕಾಡಿಗೆ ತಲುಪುತ್ತಾನೆ. ಹಾಗೇ ಕಾಡಲ್ಲಿ ಬರುವಾಗ ಮಂಗವೊಂದು ಎದುರು ಸಿಗುತ್ತದೆ. ಮಂಗವನ್ನು ಹೊಡೆದು ಅದರ ಚರ್ಮವನ್ನು ತೊಟ್ಟುಕೊಳ್ಳುತ್ತಾನೆ. ಆ ಊರಲ್ಲಿ ಒಬ್ಬ ಅರಸನಿರುತ್ತಾನೆ. ಆ ಮನೆಗೆ ಈ ಹುಡುಗ ದನ ಮೇಯಿಸಲು ನಿಲ್ಲುತ್ತಾನೆ. ಆತನ ಮೈಯಲ್ಲೆಲ್ಲಾ ಹುಳ ಆಗುತ್ತದೆ. ಆತ ಸ್ನಾನ ಮಾಡುವುದು ರಾತ್ರಿ ಎಲ್ಲರೂ ನಿದ್ರಿಸಿದ ನಂತರ. ಒಂದು ದಿನ ಅರಸನ ಮಗಳೊಬ್ಬಳು ಈತ ಸ್ನಾನ ಮಾಡುವುದನ್ನು ಅಡಗಿ ಕುಳಿತು ನೋಡುತ್ತಾಳೆ. ಇವನ ಮೈ ಪಳಪಳಂತ ಹೊಳೆಯುತ್ತಿರುತ್ತದೆ. ಆಗ ಅವಳು ಆ ಚರ್ಮವನ್ನು ಬೆಂಕಿಗೆ ಹಾಕಿ ಬೇರೆ ಬಟ್ಟೆ ಕೊಡುತ್ತಾಳೆ. ಕೆಲವು ದಿನ ಕಳೆದು ಅರಸನ ಮಗಳಿಗೂ ಚಿನ್ನದ ಮೈಯ ಹುಡುಗನಿಗೂ ಮದುವೆ ನೆರವೇರುತ್ತದೆ. ಮದುವೆಗೆಂದು ತುಪ್ಪಕ್ಕೆ ಹೋಗುತ್ತಾರೆ. ದಾರಿಯಲ್ಲಿ ಒಂದು ನರಿ 'ನಾನು ತುಪ್ಪ ಕೊಡುತ್ತೇನೆ, ನೀವು ನಾಳೆ ಬನ್ನಿ' ಎಂದು ಹೇಳುತ್ತದೆ. ಮರುದಿನ ನರಿ ತನ್ನ ಬಾಲವನ್ನು ಗುದ್ದಿ, 'ಪಾತ್ರೆ ತುಂಬ ತುಪ್ಪ ಇದೆ. ಇದನ್ನು ಮದುವೆಯ ಚಪ್ಪರದ ಅಡಿಯಲ್ಲಿ ಊಟ ಬಡಿಸುವಾಗಲೇ ಬಿಚ್ಚಬೇಕು'

ಎಂದು ಹೇಳುತ್ತದೆ. ಮದುವೆ ಮನೆಯಲ್ಲಿ ಊಟಕ್ಕೆ ತುಪ್ಪದ ಪಾತ್ರೆ ಬಿಚ್ಚಿದಾಗ ಅದು ವಾಸನೆ ಬರುತ್ತದೆ. ಮದುವೆಗೆ ಬಂದ ಎಲ್ಲರೂ ಮೋಸಹೋಗುತ್ತಾರೆ.

ಗೌ.ಕ.ಜ.ಕ. ೪೪. ಮಗಳನ್ನು ಮದುವೆಯಾಗಬಯಸುವ ತಂದೆ: ಮಗಳು ಕಾಲುದೀಪದ ರೂಪದಲ್ಲಿ ತಪ್ಪಿಸಿಕೊಳ್ಳುವುದು.

ಒಂದು ಊರಲ್ಲಿ ಒಬ್ಬ ಅರಸನಿಗೆ ಒಬ್ಬಳೇ ಮಗಳು. ಆತ ತನ್ನ ಮಗಳನ್ನು ತಾನೇ ಮದುವೆಯಾಗುವುದೆಂದು ಡಂಗುರ ಸಾರುತ್ತಾನೆ. ಮಗಳಿಗೆ ತಂದೆಯ ನಿರ್ಧಾರವನ್ನು ಪ್ರತಿಭಟಿಸಲು ಆಗುವುದಿಲ್ಲ. ಅವಳು ಕಾಲ್ದೀಪವೊಂದರ ಒಳಗೆ ಕುಳಿತು ಸಮುದ್ರದಾಚೆ ಗಾಳಿ ಬೀಸಿ ಕಾಲ್ದೀಪ ಹೋಗಲಿ, ಸಮುದ್ರಕ್ಕೆ ಬೀಳಲಿ ಎನ್ನುತ್ತಾಳೆ. ಕಾಲ್ದೀಪ ಸಮುದ್ರದಲ್ಲಿ ಬಿದ್ದು ತೇಲುತ್ತಿರುತ್ತದೆ. ಆ ಊರಿನ ಮಂತ್ರಿಗೆ ಆ ಕಾಲ್ದೀಪ ಸಿಗುತ್ತದೆ. ಕಾಲ್ದೀಪವನ್ನು ಬೆಂಕಿಯ ಎದುರು ಇಟ್ಟಾಗ ಒಡೆದು ಸುಂದರ ಯುವತಿ ಹೊರಬರುತ್ತಾಳೆ. ಆ ಯುವತಿಯ ಕಣ್ಣು, ಕೈ, ಕಾಲು, ದೇಹ, ತಲೆಯನ್ನು ಬೇರ್ಪಡಿಸಿ ಬೇರೆ ಬೇರೆ ಸ್ಥಳದಲ್ಲಿ ಹುಗಿಯುತ್ತಾರೆ. ಆ ಮನೆಗೆ ಒಬ್ಬಳು ಮುದುಕಿ ಹೂವು ಮಾರಲು ಬರುತ್ತಾಳೆ. ಆ ಮುದುಕಿಗೆ ಬೇರ್ಪಟ್ಟ ಶರೀರದ ಬೇರೆ ಬೇರೆ ಭಾಗಗಳು ಸಿಗುತ್ತವೆ. ಅವೆಲ್ಲವನ್ನೂ ಒಟ್ಟು ಮಾಡಿದಾಗ ಸುಂದರ ಯುವತಿಯಾಗುತ್ತಾಳೆ. ಅವಳನ್ನು ಮಂತ್ರಿ ಮಗನಿಗೆ ಮದುವೆ ಮಾಡಿ ಸುಖದಲ್ಲಿರುತ್ತಾರೆ. [ಕ.ಜ.ಕ. (ಸಂ), ತು.ಜ.ಕ. (ರಾ)]

ಗೌ.ಕ.ಜ.ಕ. ೪೫. ಸಹಾಯಕ ಆಕಳು: ಶಿವನ ಸಹಾಯದಿಂದ ಸತ್ತವನು ಬದುಕುವುದು.

ಒಂದು ಊರಲ್ಲಿ ಇಬ್ಬರು ಅಣ್ಣ ತಮ್ಮಂದಿರು. ಅಣ್ಣನಿಗೆ ದಂಡಿಗೆ ಕರೆ ಬರುತ್ತದೆ. ದಂಡಿಗೆ ಹೋಗುವಾಗ ಅತ್ತಿಗೆಯನ್ನು ಅಕ್ಕನಂತೆ ನೋಡಿಕೊಳ್ಳಲು ತಮ್ಮನಿಗೆ ಹೇಳುತ್ತಾನೆ. ಆದರೆ ಅತ್ತಿಗೆ ಮೈದುನನೊಂದಿಗೆ ಮೋಹಗೊಳ್ಳುತ್ತಾಳೆ. ಮೈದುನ ಒಪ್ಪಲಿಲ್ಲವೆಂದು ಆತನಿಗೆ ಕಷ್ಟ ಕೊಡುತ್ತಾಳೆ. ವಿಷದ ಊಟ ಬಡಿಸುತ್ತಾಳೆ. ಮೈದುನ ಮನೆಬಿಟ್ಟು ದನ ಕಾಯಲು ಹೋಗುತ್ತಾನೆ. ಮೈದುನನಿಗೆ ಅಪವಾದ ಹೊರಿಸಿ ಆತನ ತಲೆ ಕಡಿಸುತ್ತಾಳೆ. ಮೇವಿಗೆ ಬಂದ ಎಲ್ಲಾ ಜಾನುವಾರುಗಳು ಕೂಗುತ್ತವೆ. ಅದೇ ದಾರಿಯಾಗಿ ಶಿವಪಾರ್ವತಿಯರು ತಿರುಗುತ್ತಾ ಬರುತ್ತಾರೆ. ಸತ್ತಾತನನ್ನು ಬದುಕಿಸುತ್ತಾರೆ. ಈ ಕಡೆ ಮನೆಯಲ್ಲಿ ಅಣ್ಣ ದಂಡಿಂದ ಬರುತ್ತಾನೆ. ತಮ್ಮನನ್ನು ಕೊಂದ ವಿಚಾರ ತಿಳಿಯುತ್ತದೆ. ಹೆಂಡತಿಯ ತಲೆ ಕಡಿಯುತ್ತಾನೆ.

[ಕ.ಜ.ಕ. (ವೀ)]

ಗೌ.ಕ.ಜ.ಕ. ೪೬. ಸಹಾಯಕ ಆಕಳು: ಬಡವನಿಗೆ ಆಕಳುವಿನ ಸಹಾಯದಿಂದ ಮುತ್ತು ದೊರಕುವುದು.

ಬಡವನೊಬ್ಬ ಕಷ್ಟಪಟ್ಟು ಬೇಸಾಯ ಮಾಡುತ್ತಾನೆ. ಆ ಬೆಳೆಯನ್ನು ಮೇಯಲು ಕಬಿಲೆ ಹಸುವೊಂದು ಬರುತ್ತದೆ. ಒಂದು ದಿನ ಆತ ಹಸುವಿನ ಬಾಲವನ್ನು ಹಿಡಿದು ಓಡಿಸುತ್ತಾನೆ. ಹಸು ನದಿಗೆ ಹಾರಿ ಪಾತಾಳ ಸೇರುತ್ತದೆ. ಹಸುವಿನ ಬಾಲದಲ್ಲಿ ನೇತಾಡಿದ ಈತ ಪಾತಾಳರಾಜನನ್ನು ಭೇಟಿಯಾಗುತ್ತಾನೆ. ಆತನ ಕಷ್ಟ ಸುಖಗಳನ್ನು ವಿಚಾರಿಸಿ, ಬಲಶಾಲಿ, ಪರಾಕ್ರಮಿ ನೀನು ಎಂದು ಅವನಿಗೆ ಚೀನಿಕಾಯೊಂದನ್ನು ಕೊಡುತ್ತಾನೆ. ಬಡವ ಮರುದಿನ ಬಾಲದಲ್ಲಿ ನೇತಾಡಿ ಬರುತ್ತಾನೆ. ಬರುವಾಗ ಪಾತಾಳದ ಸುದ್ದಿಯನ್ನು ಅಥವಾ ಚೀನಿಕಾಯಿಯ ವಿಚಾರ ವನ್ನು ಯಾರಿಗೂ ಹೇಳಬಾರದು ಎಂದು ಪಾತಾಳರಾಜ ನಿಷೇಧ ಹಾಕುತ್ತಾನೆ. ಮನೆಗೆ ಬಂದ ಬಡವ ಚೀನಿಕಾಯನ್ನು ಭಾಗ ಮಾಡುತ್ತಾನೆ. ಅದರೊಳಗೆ ಮುತ್ತು ಇರುತ್ತದೆ. ಮುತ್ತನ್ನು ನೋಡಿದ ಹೆಂಡತಿ ಚೀನಿಕಾಯಿಯ ಕತೆಯನ್ನು ಕೇಳುತ್ತಾಳೆ. ಗಂಡ ನಿಷೇಧವನ್ನು ಮೀರಿ ಹೇಳುತ್ತಾನೆ. ಆ ಕೂಡಲೇ ಅತ ಸಾವನ್ನಪ್ಪುತ್ತಾನೆ. ಚೀನಿಕಾಯಿಯ ಮುತ್ತು ಮಾಯವಾಗುತ್ತದೆ.

ಗೌ.ಕ.ಜ.ಕ. ೪೭. ಸಹಾಯಕ ಎತ್ತುಗಳು.

ಅಜ್ಜ ಅಜ್ಜಿಗೆ ಒಬ್ಬನೇ ಮಗ ಮತ್ತು ಎರಡು ಎತ್ತುಗಳು. ಅಜ್ಜ ಅಜ್ಜಿಯರ ಕಾಲ ಕಳೆಯಿತು. ಎತ್ತುಗಳು ಮನೆ ಬಿಟ್ಟು ದೇಶಾಂತರ ಹೋಗುತ್ತವೆ. ಒಂದು ಅಜ್ಜಿಯ ಮನೆಯಲ್ಲಿ ವಾಸ ಮಾಡುತ್ತವೆ. ಅಜ್ಜಿ ಎತ್ತುಗಳನ್ನು ಕೊಂದು ತಿನ್ನಲು ಯೋಚಿಸುತ್ತಾಳೆ. ಎತ್ತುಗಳಿಗೆ ಈ ವಿಚಾರ ತಿಳಿದು ರಾತ್ರಿಯೇ ಹೊರಡುತ್ತವೆ. ದಾರಿಯಲ್ಲಿ ಒಬ್ಬ ಬಡವ ಪ್ರಾಣ ಸಂಕಟದಿಂದ ಬಿದ್ದಿರುತ್ತಾನೆ. ಆತನ ಬಾಯಿಗೆ ಎತ್ತುಗಳೆರಡು ತಮ್ಮ ಬಾಯಲ್ಲಿ ನೀರು ತುಂಬಿಕೊಟ್ಟು ಬದುಕಿಸುತ್ತವೆ. ಮುಂದೆ ಹೋದಾಗ ಒಬ್ಬ ರಾಜನ ಆಸ್ಥಾನ ಸಿಗುತ್ತದೆ. ರಾಜ ಈ ಎತ್ತುಗಳನ್ನು ಕೊಲ್ಲಲು ಹುಲಿಗಳನ್ನು ಬಿಡುತ್ತಾನೆ. ಎತ್ತುಗಳ ಕೊಂಬಿಗೆ ಬಡವ ಹಾಲುಬಳ್ಳಿ ಕಟ್ಟಿ ಯುದ್ಧಕ್ಕೆ ಕಳುಹಿಸಿಕೊಡುತ್ತಾನೆ. ಎತ್ತುಗಳು ಕೊಂಬಿನಿಂದ ಹುಲಿಗಳನ್ನು ಇರಿದು ಕೊಲ್ಲುತ್ತವೆ. ರಾಜ ಎತ್ತುಗಳ ಶೂರತನವನ್ನು ಕಂಡು ತನ್ನ ರಾಜ್ಯದ ಅರ್ಧ ಭಾಗವನ್ನು ಬಹು ಮಾನವಾಗಿ ಕೊಡುತ್ತಾನೆ. ಮತ್ತು ಎತ್ತುಗಳ ಒಟ್ಟಿಗಿದ್ದವನಿಗೆ ತನ್ನ ಮಗಳನ್ನು ಮದುವೆಮಾಡಿ ಕೊಡುತ್ತಾನೆ. [ತು.ಜ.ಕ. (ರಾ)]

ಗೌ.ಕ.ಜ.ಕ. ೪೮. ಸೂರ್ಯ ಚಂದ್ರರ ಸಹಾಯದಿಂದ ಹುಡುಗಿ ಪಾರಾಗುವುದು.

ಒಬ್ಬಳು ಗರ್ಭಿಣಿ ಇರುತ್ತಾಳೆ. ಅವಳಿಗೆ ಮಾವಿನಹಣ್ಣು ತಿನ್ನುವ ಆಸೆ ಆಗುತ್ತದೆ. ಆ ಆಸೆಯಿಂದಾಗಿ ಅವಳ ಮೈಯೆಲ್ಲಾ ನೀರು ತುಂಬುತ್ತದೆ.. ಅವಳ ಗಂಡ ಹಣ್ಣಿಗಾಗಿ ಕಾಡು ತಿರುಗುತ್ತಾನೆ. ಒಂದು ಮರದಲ್ಲಿ ಒಂದು ಹಣ್ಣು ಇತ್ತು. ಆ ಮರದಲ್ಲಿ ಒಂದು ಸರ್ಪ ವಾಸವಾಗಿತ್ತು. ಹಣ್ಣು ಕೊಡಬೇಕಾದರೆ ಸರ್ಪದ

ಒಪ್ಪಿಗೆ ಬೇಕಿತ್ತು. ಸರ್ಪ ಹೆಣ್ಣು ಕೊಡುವುದಾದರೂ ಒಂದು ಮಾತು ಪೂರೈಸ ಬೇಕೆಂದು ಗಂಡಸಿನಲ್ಲಿ ಕೇಳಿಕೊಂಡಿತು. ಹೆಣ್ಣು ಮಗು ಹುಟ್ಟಿದರೆ ಸರ್ಪಕ್ಕೆ ಕೊಡುವು ದೆಂದು ಗಂಡ-ಹೆಂಡತಿ ಒಪ್ಪಂದ ಮಾಡಿದರು. ಹೆಣ್ಣು ಮಗುವೇ ಹುಟ್ಟುತ್ತದೆ. ಮಗು ದೊಡ್ಡವಳಾದರೂ ಸರ್ಪಕ್ಕೆ ಕೊಡುವುದಿಲ್ಲ. ಸರ್ಪ ಒಂದು ದಿನ ಆ ಮನೆಗೆ ಬರುತ್ತದೆ. ಆ ಮಗುವನ್ನು ಕೇಳುತ್ತದೆ. ಆಗ ಆ ಹೆಣ್ಣು ಮನೆಬಿಟ್ಟು ಓಡುತ್ತಾಳೆ. ಅವಳನ್ನು ಸರ್ಪ ಬೆನ್ನಟ್ಟುತ್ತದೆ. ಓಡುತ್ತಿದ್ದಂತೆ ಬಯಲಿನ ಪೊದರೊಂದರಿಂದ ಮೊಲವೊಂದು ಓಡುತ್ತದೆ. ಸರ್ಪ ಹೆಣ್ಣನ್ನು ಬಿಟ್ಟು ಮೊಲವನ್ನು ಬೆನ್ನಟ್ಟುತ್ತದೆ. ಮೊಲ ಮತ್ತು ಸರ್ಪವನ್ನು ಸೂರ್ಯ ಚಂದ್ರರು ನೂಲಿನ ಸಹಾಯದಿಂದ ಮೇಲು ಲೋಕಕ್ಕೆ ಎಳೆದುಕೊಳ್ಳುತ್ತಾರೆ. [ತು.ಜ.ಕ. (ರಾ)]

ಗೌ.ಕ.ಜ.ಕ. ೪೯. ಸಹಾಯಕ ಗಿಳಿಗಳು.

ಏಳು ಜನ (ಅಣ್ಣ ತಮ್ಮಂದಿರು) ಸಹೋದರರು ಒಬ್ಬಳೇ ತಂಗಿಗೆ ಮುತ್ತು ತರಲು ಊರ ಹೊರಗೆ ಹೋಗುತ್ತಾರೆ. ಹುಡುಗಿ ಬಾಗಿಲು ಭದ್ರವಾಗಿ ಹಾಕಿಕೊಂಡು ಮನೆಯೊಳಗಿರುತ್ತಾಳೆ. ಅಲ್ಲಿಗೆ ಒಬ್ಬಳು ರಾಕ್ಷಸಿ ಬರುತ್ತಾಳೆ. ಅಣ್ಣಂದಿರು ಬಂದದ್ದು ಎಂದು ರಾಕ್ಷಸಿ ಸುಳ್ಳು ಹೇಳುತ್ತಾಳೆ. ಆಗ ಅಂಗಳದಲ್ಲಿರುವ ಹಲಸಿನ ಮರ, ತೆಂಗಿನ ಮರ, ಬಾಳೆಗಿಡಗಳು ರಾಕ್ಷಸಿ ಸುಳ್ಳು ಹೇಳುವುದೆಂದು ಹೇಳುತ್ತವೆ. ರಾಕ್ಷಸಿ ವಿಷದ ಹಲ್ಲೊಂದನ್ನು ಬಾಗಿಲಿಗೆ ಇಟ್ಟು ಹೋಗುತ್ತಾಳೆ. ಅಣ್ಣಂದಿರು ಬರುತ್ತಾರೆ. ತಂಗಿಗೆ ಮೂರು ಮರಗಳು ಸಹಾಯ ಮಾಡುತ್ತವೆ. ಬಾಗಿಲು ತೆಗೆದು ಆರತಿ ಮಾಡಲು ಬಾಗಿಲ ಹೊರಗೆ ವಿಷದ ಹಲ್ಲಿಗೆ ಹೆಜ್ಜೆ ಇಡುತ್ತಾಳೆ. ವಿಷವೇರಿ ಸತ್ತ ತಂಗಿಯ ಹೆಣವನ್ನು ಕಾಡಲ್ಲಿ ಮರದ ತುದಿಗೆ ತೊಟ್ಟಿಲು ಕಟ್ಟಿ ತೂಗಿಬಿಟ್ಟು ಬರುತ್ತಾರೆ. ಆ ಮರದಲ್ಲಿ ಸಾವಿರದೊಂಬ ಗಿಳಿಗಳು ವಾಸವಾಗಿರುತ್ತವೆ. ಆ ಗಿಳಿಗಳು ಆಕೆಯನ್ನು ಜೀವಗೊಳಿಸುತ್ತವೆ. ಕೆಲವು ತಿಂಗಳು ಕಳೆದಾಗ ಸಹೋದರರಿಗೆ ತಂಗಿಯ ನೆನಪಾಗುತ್ತದೆ. ತೊಟ್ಟಿಲು ನೋಡುವಾಗ ತಂಗಿ ಜೀವವಿರುತ್ತಾಳೆ. ತಂಗಿಯನ್ನು ಮರದಿಂದ ಇಳಿಸಿ ಮನೆಗೆ ಕರೆದುಕೊಂಡು ಬಂದು ಸುಖದಲ್ಲಿರುತ್ತಾರೆ. ಗಿಳಿಗಳೆಲ್ಲಾ ಆಕೆಯೊಂದಿಗೆ ವಾಸವಿರುತ್ತವೆ.

ಗೌ.ಕ.ಜ.ಕ. ೫೦. ನಿಧಿ ಸಂಪತ್ತಿಗಾಗಿ ಸಹೋದರರ ಸಾವು.

ಸಹೋದರರಿಬ್ಬರು ಕಾಡಿಗೆ ಬೇಟೆಗೆ ಹೋಗುತ್ತಾರೆ. ಅರ್ಧ ದಾರಿಯಲ್ಲಿ ನಾಲ್ಕು ಕೈಯ ಕೊಪ್ಪರಿಗೆ ಕಾಣಲು ಸಿಗುತ್ತದೆ. ಅಣ್ಣ ತಮ್ಮ ಇಬ್ಬರಿಗೂ ನಿಧಿಯನ್ನು ದೋಚುವ ಮನಸ್ಸಾಗುತ್ತದೆ. ಅಣ್ಣ ತಮ್ಮನನ್ನು ಗೋಣಿ ಚೀಲ ತರಲು ಮನೆಗೆ ಕಳುಹಿಸುತ್ತಾನೆ. ತಮ್ಮ ಮನೆಯಿಂದ ಬರುವಾಗ ಅಣ್ಣನಿಗೆ ವಿಷಮಿಶ್ರಿತ ಆಹಾರದ ಬುತ್ತಿ ತರುತ್ತಾನೆ. ತಮ್ಮ ದೂರದಿಂದ ಬರುವಾಗಲೇ ಅಣ್ಣ ಆತನನ್ನು ಗುಂಡು

ಹೊಡೆದು ಸಾಯಿಸುತ್ತಾನೆ. ಗೋಣಿಚೀಲದೊಳಗೆ ಇರುವ ಬುತ್ತಿಯನ್ನು ಅಣ್ಣ ಊಟ ಮಾಡಿ ಆತನೂ ಸಾಯುತ್ತಾನೆ. ಆ ಕೊಪ್ಪರಿಗೆ ಅಲ್ಲೇ ಇದೆ. ನಾವೆಲ್ಲರೂ ಹೋಗೋಣವೇ ?

ಗೌ.ಕ.ಜ.ಕ. ೫೧. ಮಂಗ ಅರಸು ಮಕ್ಕಳನ್ನು ರಾಕ್ಷಸಿಯಿಂದ ಪಾರುಮಾಡುವುದು.

ಒಬ್ಬ ಅರಸನಿಗೆ ಮೂವರು ಪತ್ನಿಯರು. ಅವರಿಗೆ ಮಕ್ಕಳಿರುವುದಿಲ್ಲ. ಒಂದು ದಿನ ಅರಸ ಗದ್ದೆ ಕಡೆ ಹೋಗುವಾಗ ಒಂದು ಏಡಿ ಕಾಣಲು ಸಿಗುತ್ತದೆ. ಏಡಿಗೆ ನೂರಾರು ಮರಿಗಳಿರುತ್ತವೆ. ಅರಸನಿಗೆ ಅದನ್ನು ಕಂಡು ಬೇಸರ ಆಗುತ್ತದೆ. ಏಡಿಗಾದರೂ ನೂರಾರು ಮರಿಗಳಿವೆ, ನನಗೆ ಒಂದೂ ಮಕ್ಕಳಿಲ್ಲವೆಂದು ಅರಮನೆಗೆ ಬಂದು ಯಾರಲ್ಲೂ ಮಾತನಾಡದಿರುತ್ತಾನೆ. ಆ ದಿನ ಅರಮನೆಗೆ ಒಬ್ಬರು ಜೋಯಿಸರು ಬರುತ್ತಾರೆ. ಜೋಯಿಸರೊಂದಿಗೆ ಅರಸನ ಪತ್ನಿಯರಿಗೆ ಮಕ್ಕಳಾಗದ ವಿಚಾರವನ್ನು ಹೇಳುತ್ತಾರೆ. ಆಗ ಜೋಯಿಸರು ಸಮುದ್ರದಾಚೆಯಲ್ಲಿ ಒಂದು ಮಾವಿನ ಮರವಿದೆ. ಅದರಲ್ಲಿ ಮೂರು ಮಾವಿನ ಹಣ್ಣಿರುತ್ತದೆ. ಅದನ್ನು ತಿಂದರೆ ರಾಣಿಯರಿಗೆ ಮಕ್ಕಳಾಗುತ್ತವೆ ಎಂದರು. ಅಲ್ಲದೆ ಆ ಮರದಡಿಗೆ ಮೂವರೂ ರಾಣಿಯರು ಸ್ನಾನ ಮಾಡಿ ಬಿಳಿ ಬಟ್ಟೆ ಉಟ್ಟು ಹಿಂದಿನ ರಾತ್ರಿಯೇ ಹೋಗಬೇಕು. ಬೆಳಗಿನ ಜಾವ ಮಾವಿನ ಹಣ್ಣು ಬೀಳುತ್ತದೆ. ಅದನ್ನು ತಿನ್ನಬೇಕು. ಮೂವರೂ ರಾಣಿಯರು ಜ್ಯೋತಿಷ್ಯರ ಮಾತಿನಂತೆ ಶುದ್ಧದಿಂದ ಹೋಗುತ್ತಾರೆ. ಬೆಳಗಾದಾಗ ಮೂರು ಹಣ್ಣುಗಳು ಬೀಳುತ್ತವೆ. ಇಬ್ಬರು ಅಕ್ಕಂದಿರಿಗೆ ಒಳ್ಳೆಯ ಮಾವಿನ ಹಣ್ಣು ಮತ್ತು ಕೊನೆಯ ತಂಗಿಗೆ ಮಂಗ ತಿಂದ ಹಣ್ಣು ಸಿಗುತ್ತದೆ. ಮೂವರೂ ತಿನ್ನುತ್ತಾರೆ. ಗರ್ಭ ನಿಲ್ಲುತ್ತದೆ. ಮಕ್ಕಳಾಗುತ್ತದೆ. ಮಂಗ ತಿಂದ ಹಣ್ಣನ್ನು ತಿಂದವಳಿಗೆ ಮಂಗದ ಮರಿಯೂ, ಉಳಿದ ಇಬ್ಬರು ರಾಣಿಯರಿಗೆ ಎರಡು ಮಕ್ಕಳೂ ಆಗುತ್ತವೆ. ತಿಂಗಳು ಕಳೆದು ವರ್ಷವಾಯಿತು. ವರ್ಷಗಳು ಅದಂತೆ ಮಂಗದ ಮರಿ ತುಂಬಾ ಚುರುಕು ಆಗುತ್ತದೆ. ಇಬ್ಬರು ಮಕ್ಕಳು ದಿನದಿಂದ ದಿನಕ್ಕೆ ದಡ್ಡರಾಗುತ್ತಾರೆ. ಮಂಗ ಬೇಸಾಯ ಮಾಡುವುದರಲ್ಲಾಗಲೀ, ವಿದ್ಯೆಯಲ್ಲಾಗಲೀ ಹೆಚ್ಚು ಚುರುಕಾಯಿತು. ಅರಸ ಮಂಗನನ್ನು ಹೆತ್ತವಳನ್ನು ಅರಮನೆಯಿಂದ ಹೊರಗೆ ಹಾಕಿದನು. ಹೀಗೆ ಮಂಗ ಮತ್ತು ಮಕ್ಕಳ ಬದುಕು ಬೇರೆಯಾಯಿತು. ಮಂಗನ ಚುರುಕನ್ನು ಕಂಡ ಅರಸ ಮಕ್ಕಳನ್ನು ಮನೆಯಿಂದ ಹೊರಗೆ ಹಾಕುತ್ತಾನೆ. ಮಕ್ಕಳು ದೇಶಾಂತರ ಹೋಗುತ್ತಾರೆ. ಮಕ್ಕಳೊಂದಿಗೆ ಮಂಗನೂ. 'ನಾನೂ ಬರುತ್ತೇನೆ ಅಣ್ಣಂದಿರೇ' ಎಂದು ಹೋಗುತ್ತದೆ. ಮಂಗನಿಗೆ ಕಲ್ಲು ಹೊಡೆಯುತ್ತಾರೆ. ಆದರೂ ಮಂಗ ಅಣ್ಣಂದಿರನ್ನು ಹಿಂಬಾಲಿಸುತ್ತದೆ. ದೊಡ್ಡ ಕಾಡಿಗೆ ಬರುತ್ತಾರೆ. ಕಾಡಲ್ಲಿ ಮಂಗ ಅಣ್ಣಂದಿರಿಗೆ ಸಹಾಯ ಮಾಡುತ್ತದೆ. ರಾತ್ರಿಯಾದಾಗ ಮಲಗಲು ಒಂದು ಮನೆಗೆ

ಹೋಗುತ್ತಾರೆ. ಅದು ರಾಕ್ಷಸಿ ಅಜ್ಜಿಯ ಮನೆ. ಆ ಅಜ್ಜಿ ಮಕ್ಕಳನ್ನು ಕೊಂದು ತಿನ್ನಲು ಆಲೋಚಿಸುತ್ತಾಳೆ. ಮಂಗ ಅಜ್ಜಿಯ ಎಲ್ಲಾ ತಯಾರಿಯನ್ನು ಅರ್ಥ ಮಾಡಿಕೊಂಡು ಮಕ್ಕಳನ್ನು ಅಲ್ಲಿಂದ ರಾತ್ರೋ ರಾತ್ರಿ ರಕ್ಷಿಸುತ್ತದೆ. ಮಲತಾಯಿ ಮಗ ಮಂಗ ಮಾಡಿದ ಸಹಾಯವನ್ನು ಮಕ್ಕಳು ಮನೆಯಲ್ಲಿ ಹೇಳುತ್ತಾರೆ. ಅಂದಿನಿಂದ ಮಂಗ ಮತ್ತು ಮಂಗನ ಪಡೆದವ್ವಳನ್ನು ಅರಮನೆಗೆ ಕರೆದುಕೊಳ್ಳುತ್ತಾರೆ. ಈಗ ಸುಖವಾಗಿದ್ದಾರೆ.

ಗೌ.ಕ.ಜ.ಕ. ೫೨. ಮಂಗ ಅರಸು ಮಕ್ಕಳನ್ನು ಕಾಪಾಡುವುದು.

ಈ ಪಠ್ಯ ಗೌ.ಕ.ಜ.ಕ. ೧೩ರ ವರ್ಗವನ್ನು ಹೋಲುತ್ತದೆ. ಆದರೆ ಗೌ.ಕ.ಜ.ಕ. ೧೩ರ ಪೂರ್ವಾರ್ಧ ಭಾಗ ಈ ಪಠ್ಯದಲ್ಲಿ ಇಲ್ಲ. ಉತ್ತರಾರ್ಧ ಭಾಗ ಅಂದರೆ ಅರಸು ಮಕ್ಕಳು ಮತ್ತು ಮಂಗ ದೇಶಾಂತರ ಹೋಗುವುದರ ನಂತರದ ಭಾಗವಿದೆ.

ಗೌ.ಕ.ಜ.ಕ. ೫೩. ಮಂಗ ರಾಕ್ಷಸಿಯನ್ನು ಕೊಲ್ಲುವುದು: ಮಂಗ ಹುಡುಗಿಯನ್ನು ಅಪಾಯದಿಂದ ಪಾರುಮಾಡುವುದು.

ಒಂದು ಊರಲ್ಲಿ ಅಜ್ಜ ಅಜ್ಜಿ ಮತ್ತು ಒಬ್ಬಳು ಮಗಳು. ಅಜ್ಜ ಅಜ್ಜಿ ಬೇಸಾಯದ ಕೆಲಸಕ್ಕೆ ಹೋದಾಗ ಮಗಳು ಅಡುಗೆ ಮಾಡುತ್ತಿದ್ದಳು. ಒಂದು ದಿನ ಅಜ್ಜಿ ತನ್ನ ದುಡ್ಡಿನ ಗಂಟು ಒಲೆಯ ಬುಡದಲ್ಲಿದೆ ಎಂದು ಅಜ್ಜನಿಗೆ ಹೇಳುತ್ತಾಳೆ. ಅದೇ ಸಮಯಕ್ಕೆ ಒಬ್ಬ ಮಂಗನನ್ನು ಕುಣಿಸುವಾತ ಆ ಮಾತನ್ನು ಕೇಳಿಸಿಕೊಳ್ಳುತ್ತಾನೆ. ನೇರ ಮನೆಗೆ ಬಂದು ಅಜ್ಜಿ ಹೇಳಿದ ದುಡ್ಡಿನ ಗಂಟನ್ನು ಪಡೆದುಕೊಳ್ಳುತ್ತಾನೆ. ಸಂಜೆಗೆ ಅಜ್ಜಿ ಬಂದಾಗ ದುಡ್ಡಿನ ಗಂಟು ಇರುವುದಿಲ್ಲ. ಮಗಳನ್ನು ಆ ಕಾರಣಕ್ಕಾಗಿ ದೇಶಾಂತರ ಹೋಗೆಂದು ಮನೆಯಿಂದ ಹೊರಹಾಕುತ್ತಾಳೆ. ಅವಳು ಅಳುತ್ತಾ ಇದೇ ಮಂಗನನ್ನು ಕುಣಿಸುವಾತನೊಂದಿಗೆ ಸೇರಿಕೊಳ್ಳುತ್ತಾಳೆ. ಅಲ್ಲಿಯೂ ಆಕೆ ಅಡುಗೆ ಮಾಡಲಿಕ್ಕೆ, ಅಲ್ಲಿ ಆಕೆಗೆ ಅಡುಗೆ ಮಾಡಲು ಮಂಗ ಸಹಾಯಕ. ಆ ಕಾಡಿನಲ್ಲಿ ಒಬ್ಬ ರಾಕ್ಷಸನಿರುತ್ತಾನೆ. ರಾಕ್ಷಸನಲ್ಲಿ ತುಂಬ ಹಣದ ರಾಶಿ, ಆಭರಣ, ಒಡವೆಗಳಿರುತ್ತವೆ. ಮಂಗ ರಾಕ್ಷಸನ ಸ್ನೇಹ ಮಾಡಿ, ರಾಕ್ಷಸನಿಗೆ ಹೆಣ್ಣು ಕೊಡುತ್ತೇನೆಂಬ ಆಸೆ ಹುಟ್ಟಿಸುತ್ತಾನೆ. ಕಾಡಲ್ಲಿ ದೊಡ್ಡದೊಂದು ಬೆಂಕಿ ರಾಶಿ ಮಾಡುತ್ತಾನೆ. ರಾಕ್ಷಸನನ್ನು ಆ ಬೆಂಕಿಗೆ ಸುತ್ತು ಬರಲು ಹೇಳಿ ಬೆಂಕಿಗೆ ದೂಡುತ್ತಾನೆ. ರಾಕ್ಷಸ ಬೆಂಕಿಗೆ ಬಿದ್ದು ಬೂದಿಯಾಗುತ್ತಾನೆ. ಅವನ ಮನೆಗೆ ನುಗ್ಗಿ ಬೇಕಷ್ಟು ಸಂಪತ್ತುಗಳನ್ನು ಕಟ್ಟಿಕೊಳ್ಳುತ್ತಾರೆ. ಮಗಳು ಹಣದ ಗಂಟು ತಂದಳೆಂದು ಅವಳನ್ನು ಮನೆಗೆ ಸೇರಿಸಿಕೊಳ್ಳುತ್ತಾರೆ. ಹಿಂದಿನಂತೆ ಸುಖವಾಗಿದ್ದಾರೆ.

ಗೌ.ಕ.ಜ.ಕ. ೫೪. ಕೃತಜ್ಞ ಪ್ರಾಣಿಗಳು : ಕಲ್ಲೆಂಟೆ, ಏಡಿ, ಕೇರೆ ಹಾವು ಮುದುಕರಿಗೆ ಸಹಾಯಕವಾಗುವುದು.

ಒಂದು ಊರಲ್ಲಿ ಅಜ್ಜ ಅಜ್ಜಿಗೆ ಬೇಸಾಯದ ಕೆಲಸ. ಒಮ್ಮೆ ಪದಾರ್ಥಕ್ಕೆಂದು 'ಕಲ್ಲೆಂಟೆ'ಗಳನ್ನು ತಂದು ಗುದ್ದುತ್ತಾರೆ. ಅದರಲ್ಲಿ ಒಂದು ಕಲ್ಲೆಂಟೆ ತಪ್ಪಿಸಿಕೊಳ್ಳುತ್ತದೆ. ಆ ಕಲ್ಲೆಂಟೆ ಅಜ್ಜ ಅಜ್ಜಿಯರ ಸಹಾಯಕ್ಕೆ ಬರುತ್ತದೆ. ಒಂದು ದಿನ ಕಲ್ಲೆಂಟೆ ಅಜ್ಜನಿಗೆ ಬುತ್ತಿ ತರುತ್ತದೆ. ಅಜ್ಜ ಗದ್ದೆ ಉಳುತ್ತಿರುತ್ತಾನೆ. ಅಜ್ಜ ಚಹ ಕುಡಿದಾಗ ಕಲ್ಲೆಂಟೆ ಗದ್ದೆ ಉಳುತ್ತದೆ. ಊರಿನ ಜನರಿಗೆ ತುಂಬಾ ಆಶ್ಚರ್ಯ. ಆ ದಿನ ರಾತ್ರಿ ಅಜ್ಜನ ಎತ್ತುಗಳನ್ನು ಕದಿಯುತ್ತಾರೆ. ಮರುದಿನ ಕಲ್ಲೆಂಟೆ ಏಡಿ ಮತ್ತು ಕೇರೆ ಹಾವಿನ ಗೆಳೆತನ ಮಾಡುತ್ತದೆ. ಆದಿನ ರಾತ್ರಿ ಒಂದು ಮನೆಗೆ ಹೋಗಿ ಅಲ್ಲಿಂದ ಒಂದು ಹಟ್ಟಿ ಎತ್ತುಗಳನ್ನು ಹೊಡೆದುಕೊಂಡು ಬರುತ್ತದೆ. ಎರಡು ಎತ್ತುಗಳು ಕದ್ದದ್ದಕ್ಕೆ ಒಂದು ಹಟ್ಟಿ ಎತ್ತುಗಳನ್ನು ತಂದುಕೊಟ್ಟು ಅಜ್ಜ, ಅಜ್ಜಿ, ಕಲ್ಲೆಂಟೆ ಸುಖದಲ್ಲಿರುತ್ತಾರೆ.

ಗೌ.ಕ.ಜ.ಕ. ೫೫. ಕೃತಜ್ಞ ಪ್ರಾಣಿ ಮತ್ತು ಮಲತಾಯಿ ಕಾಟ.

ಒಂದು ಊರಿನಲ್ಲಿ ಅರಸು ಮತ್ತು ಪ್ರಧಾನಿ ಇಬ್ಬರಿಗೂ ಮಕ್ಕಳಾಗಿರುವುದಿಲ್ಲ. ಬ್ರಾಹ್ಮಣನೊಬ್ಬ ಕೊಟ್ಟ ಮಾಂತ್ರಿಕ ಹಣ್ಣಿನಿಂದಾಗಿ ಪ್ರಧಾನಿಗೆ ಗಂಡು ಮಗವೂ, ಅರಸನಿಗೆ ಹುಲಿ ಮರಿಯೂ ಹುಟ್ಟುತ್ತದೆ. ಪ್ರಧಾನಿ ಮಗನಿಗೆ ಪ್ರಾಯ ಬಂದಾಗ ಮದುವೆ ಮಾಡುತ್ತಾರೆ. ಹುಲಿಗೂ ಮದುವೆ ಮಾಡುತ್ತಾರೆ. ಆದರೆ ಹುಲಿ ತನಗೆ ಕೊಟ್ಟ ಹುಡುಗಿಯರನ್ನೆಲ್ಲಾ ತಿನ್ನುತ್ತದೆ. ಆರು ಹುಡುಗಿಯರನ್ನು ತಿಂದು, ಏಳನೆಯವಳನ್ನು ತರುತ್ತಾರೆ. ಅವಳು ಕಾಯಿಲೆಯಲ್ಲಿರುವ ಸರ್ಪಕ್ಕೆ ಸಹಾಯ ಮಾಡುತ್ತಾಳೆ. ಸರ್ಪ ಮಾಂತ್ರಿಕ ಕಲ್ಲು ಕೊಟ್ಟು, ಹುಲಿಯನ್ನು ಮನುಷ್ಯನಾಗಿ ಪರಿವರ್ತಿಸಲು ಸಹಾಯ ಮಾಡುತ್ತದೆ. ಮುಂದೆ ಅವಳು ಗರ್ಭ ಧರಿಸುತ್ತಾಳೆ. ತವರಲ್ಲಿ ಮಲತಾಯಿ ಮಗಳು ಈಕೆಯನ್ನು ಬಾವಿಗೆ ದೂಡುತ್ತಾಳೆ. ಅವಳು ಪಾತಾಳ ಸೇರುತ್ತಾಳೆ. ಅಲ್ಲಿ ೧೨ ವರ್ಷಗಳಿಂದ ಕಾಯಿಲೆ ಬಿದ್ದಿದ್ದ ಸರ್ಪದ ಕಾಯಿಲೆ ಗುಣವಾಗುತ್ತದೆ. ಆ ಸರ್ಪವು ಬಾಣಂತಿಯನ್ನು, ಹುಟ್ಟಿದ ಮಗುವನ್ನು ಸಾಕುತ್ತದೆ. ಮಗು ಹುಟ್ಟುವಾಗ ಸೊಂಟದಿಂದ ಕೆಳಗೆ ಬೆಳ್ಳಿಯ ಹೊಳಪೂ, ಸೊಂಟದಿಂದ ಮೇಲೆ ಚಿನ್ನದ ಹೊಳಪನ್ನೂ ಪಡೆಯುತ್ತದೆ. ಹುಲಿಕುಮಾರನನ್ನು ಅರಸನಿಗೆ ಸರ್ಪವು ಒಪ್ಪಿಸುತ್ತದೆ. ಸರ್ಪ ತನ್ನ ಎಲ್ಲಾ ಸರ್ವಸ್ವವನ್ನು ಬಿಟ್ಟುಕೊಟ್ಟು ಸಾವನ್ನಪ್ಪುತ್ತದೆ.

ಗೌ.ಕ.ಜ.ಕ. ೫೬. ಕ್ರೂರ ಅಣ್ಣಂದಿರು ಮತ್ತು ಒಳ್ಳೆಯ ತಮ್ಮ : ಕಿರಿಯ ತಮ್ಮ ಪ್ರಾಣಿಗಳ ಸಹಾಯದಿಂದ ಮದುವೆಯಾಗಿ ಅಣ್ಣಂದಿರನ್ನು ಸೋಲಿಸುವುದು.

ಒಂದು ಊರಲ್ಲಿ ಒಬ್ಬ ಅರಸನಿಗೆ ಮೂವರು ಪತ್ನಿಯರು ಇರುತ್ತಾರೆ. ಅವರಿಗೆ ಮಕ್ಕಳಾಗುವುದಿಲ್ಲ. ಅರಸನ ಕೊನೆಯ ಪತ್ನಿಗೆ ಅಂಗಳದಲ್ಲಿ ಮಾಂತ್ರಿಕ ಮಾವಿನ ಹಣ್ಣು ಸಿಗುತ್ತದೆ. ಮೂವರು ಪತ್ನಿಯರೂ ಆ ಹಣ್ಣನ್ನು ಹಂಚಿ ತಿನ್ನುತ್ತಾರೆ. ಕೊನೆಯವಳಿಗೆ ಗೊರಟನ್ನು ಕೊಡುತ್ತಾರೆ. ಉಳಿದಿಬ್ಬರು ಸಿಪ್ಪೆ ತಿನ್ನುತ್ತಾರೆ. ಮೂವರಿಗೂ ಮಕ್ಕಳಾಗುತ್ತವೆ. ಕೊನೆಯವಳ ಮಗುವನ್ನು ಗೊಬ್ಬರದ ರಾಶಿಯಲ್ಲಿ ಹುದುಗಿಸುತ್ತಾರೆ. ಆ ಮಗುವಿಗೆ ಕಬಿಲೆ ಹಸು ಸಹಾಯ ಮಾಡುತ್ತದೆ. ಮಕ್ಕಳು ಮೂವರೂ ದೊಡ್ಡವರಾಗುತ್ತಾರೆ. ಓದಿ ವಿದ್ಯಾವಂತ ರಾಗುತ್ತಾರೆ. ಮೂವರು ಮಕ್ಕಳೂ ದೇಶಾಂತರ ಹೋಗುತ್ತಾರೆ. ಕೊನೆಯವನಿಗೆ ಚೊಟ್ಟು ಕಾಲಿನ ಕುದುರೆ ಕೊಡುತ್ತಾರೆ. ಸುಮಾರು ದೂರ ಹೋಗುವಾಗ ಒಂದು ಅರಮನೆ ಸಿಗುತ್ತದೆ. ಅಲ್ಲಿ ಸ್ವಯಂವರ ಇಟ್ಟಿರುತ್ತಾರೆ. ಬೇರೆ ಬೇರೆ ದೇಶದ ರಾಜಕುಮಾರರು ಬಂದು ನೆಲೆಸಿದ್ದಾರೆ. ಸ್ವಯಂವರದಲ್ಲಿ ಆನೆ ಯಾರ ಕೊರಳಿಗೆ ಹಾರ ಹಾಕುತ್ತದೋ ಅವರಿಗೆ ಅರಸನ ಮಗಳನ್ನು ಮದುವೆ ಮಾಡ ಲಾಗುತ್ತಿತ್ತು. ಚೊಟ್ಟು ಕಾಲಿನ ಕುದುರೆಯವನಿಗೆ ಆನೆ ಹಾರ ಹಾಕುತ್ತದೆ. ಹೀಗೆ ಮುಂದುವರಿದು ಹೋದಾಗ ಇನ್ನೊಂದು ಕಡೆ ಸ್ವಯಂವರ ನೆರವೇರುತ್ತಿತ್ತು. ಅಲ್ಲಿಯೂ ಚೊಟ್ಟು ಕುದುರೆಯವನಿಗೆ ಆನೆ ಹಾರ ಹಾಕುತ್ತದೆ. ಇಬ್ಬರು ಪತ್ನಿಯ ರೊಂದಿಗೆ ಮುಂದೆ ಹೋದಾಗ ಮತ್ತೊಂದು ಸ್ವಯಂವರದಲ್ಲೂ ಈತನ ಕೊರಳಿಗೇ ಹಾರ ಬೀಳುತ್ತದೆ. ಈ ಎಲ್ಲಾ ಸ್ವಯಂವರದಲ್ಲೂ ಅಣ್ಣಂದಿರು ಸೋಲುತ್ತಾ ಬಂದು, ಕೊನೆಯಲ್ಲಿ ತಮ್ಮನನ್ನು ಹೊಡೆದು ಕೊಂದರು. ಆಗ ಈತನ ಮೂವರು ಪತ್ನಿಯರು ತಮ್ಮ ಮಾಯಾ ಶಕ್ತಿಯಿಂದ ಬದುಕಿಸುತ್ತಾರೆ. ಮೂವರೊಡನೆ ಚೊಟ್ಟು ಕಾಲಿನವ ಅರಮನೆಗೆ ಬಂದು, ಅರಮನೆಯಲ್ಲಿ ಸುಖವಾಗಿರುತ್ತಾನೆ.

ಗೌ.ಕ.ಜ.ಕ. ೫೭. ಕಳವಾದ ಮಾಂತ್ರಿಕ ವಸ್ತುಗಳು ಪ್ರಾಣಿಗಳ ಸಹಾಯದಿಂದ ಮತ್ತೆ ದೊರೆಯುವುದು.

ಒಂದು ಊರಲ್ಲಿ ಬಡವ ಮುದುಕನಿರುತ್ತಾನೆ. ಆತನಿಗೆ ಒಬ್ಬ ಮಗನಿರು ತ್ತಾನೆ. ಮಗ ಸೌದೆ ಮಾರಿಬಂದ ಹಣದಿಂದ ಜೀವನ ಸಾಗಬೇಕು. ಮಗನಿಗೆ ಪ್ರಾಯ ಬರುತ್ತದೆ. ಮದುವೆಯಾಗುವುದಾದರೂ ಬಡವನಿಗೆ ಹೆಣ್ಣು ಕೊಡು ವವರಾರು ? ಮಗನ ಸಂಪಾದನೆಯ ಸ್ವಲ್ಪ ಭಾಗ ಮದುವೆ ಖರ್ಚಿಗಾಗಿ ಇಟ್ಟಿದ್ದ. ಮರುದಿನ ಹೆಣ್ಣು ಹುಡುಕಲು ನೂರು ರೂಪಾಯಿ ಕೊಟ್ಟು ಮಗನನ್ನು ಕಳುಹಿಸಿದ. ಆ ದಿನ ಹೆಣ್ಣಿನ ಬದಲು ಒಂದು ನಾಯಿಯನ್ನು ಕೊಂಡುಕೊಂಡ. ಮರುದಿನ ನೂರು ರೂಪಾಯಿಯಲ್ಲಿ ಬೆಕ್ಕು ಕೊಂಡುಕೊಂಡ. ಮೂರನೇ ದಿನ ಗಿಳಿ ಕೊಂಡುಕೊಂಡ. ನಾಲ್ಕನೆಯ ದಿನ ಒಂದು ಹುತ್ತದ ಸುತ್ತು ನಾಲ್ಕು ಜನ ದೊಣ್ಣೆ ಹಿಡಿದು ಕೂತಿರುತ್ತಾರೆ. ಅವರಿಗೆ ಹಣ ಕೊಟ್ಟು ಸರ್ಪದ ಪ್ರಾಣ

ಉಳಿಸಿದ. ಹೀಗೆ ನಾಯಿ, ಬೆಕ್ಕು, ಗಿಳಿ ಮತ್ತು ಸರ್ಪ ಈ ನಾಲ್ಕು ಜೀವಿಗಳ ಪ್ರಾಣವನ್ನು ಉಳಿಸಿದ, ಸರ್ಪ ಆತನ ಸಹಾಯಕ್ಕೆ ಮಾಂತ್ರಿಕ ಉಂಗುರ ಮತ್ತು ಕೋಲು ಕೊಡುತ್ತದೆ. ಐದನೆಯ ದಿನ ಪಕ್ಕದ ಊರಿನ ಅರಸನ ಮಗಳನ್ನು ಮಾತಾಡಿಸುತ್ತಾನೆ. ಈತನಿಗೆ ಮಾಂತ್ರಿಕ ವಸ್ತುವಿನಿಂದಾಗಿ ಬೇಕಷ್ಟು ಐಶ್ವರ್ಯ ಆಗುತ್ತದೆ. ಅರಮನೆ ಆಗುತ್ತದೆ. ಅರಸನ ಮಗಳ ಮದುವೆಯೂ ಇವನೊಂದಿಗೆ ನೆರವೇರುತ್ತದೆ. ಪಕ್ಕದ ಹಳ್ಳಿಯ ಮತ್ತೊಬ್ಬ ಅರಸನಿಗೆ ಈತನ ಮಾಯದ ಸಂಪತ್ತಿನ ಬಗ್ಗೆ ಬೆರಗು ಹುಟ್ಟುತ್ತದೆ. ಆತ ಒಬ್ಬಳು ಮುದುಕಿಯನ್ನು ಸೌದೆ ಒಡೆಯುವ ಮುದುಕನ ಮನೆಗೆ ಕಳುಹಿಸುತ್ತಾನೆ. ಮುದುಕಿ ಆ ಮನೆಯಲ್ಲಿ ಕೆಲಸದ ಆಳು ಆಗಿರುತ್ತಾಳೆ. ಒಂದು ದಿನ ಈತನಿಗೆ ದಂಡಿಗೆ ಹೋಗಲು ಕರೆ ಬರುತ್ತದೆ. ಮನೆಯ ಜವಾಬ್ದಾರಿಯನ್ನು ಮುದುಕಿಯ ವಶಕ್ಕೆ ಬಿಟ್ಟು ಹೋಗುತ್ತಾನೆ. ಮುದುಕಿ ಈತನ ಮಡದಿಯನ್ನು ಹೊಳೆಗೆ ಸ್ನಾನಕ್ಕೆ ಕರೆದೊಯ್ದು ಮಾಂತ್ರಿಕ ಉಂಗುರ ಮತ್ತು ಕೋಲನ್ನು ಪಡೆದುಕೊಂಡು ಪಲಾಯನ ಮಾಡುತ್ತಾಳೆ. ಆದರೆ ನಾಯಿ, ಗಿಳಿ, ಬೆಕ್ಕುಗಳು ಮುದುಕಿಯ ವಶವಾದ ಉಂಗುರ ಮತ್ತು ಕೋಲನ್ನು ಮತ್ತೆ ಪಡೆದುಕೊಡುತ್ತವೆ.

ಗೌ.ಕ.ಜ.ಕ. ೫೮. ಮೂರು ಮಾಂತ್ರಿಕ ವಸ್ತುಗಳು. ಹಣ. ಕಂಬಳಿ ಮತ್ತು ಟೊಪ್ಪಿಗೆಗಳ ಸಹಾಯದಿಂದ ಬಗೆಬಗೆಯ ಕೆಲಸಗಳನ್ನು ಮಾಡುವುದು.

ಒಬ್ಬ ಬಡವನಿಗೆ ಮೂರು ಜನ ಮಕ್ಕಳು. ಅವರು ದೇಶಾಂತರ ಹೊರಡುತ್ತಾರೆ. ಮೊದಲನೆಯವ ಹಣದ ಗಂಟನ್ನೂ ಎರಡನೆಯವ ಮಾಂತ್ರಿಕ ಕಂಬಳಿಯನ್ನೂ ಮೂರನೆಯವ ಮಾಂತ್ರಿಕ ಟೊಪ್ಪಿಗೆಯನ್ನೂ ಹಿಡಿದುಕೊಂಡು ಹೋಗುತ್ತಾರೆ.

ಒಂದು ಊರಲ್ಲಿ ಒಬ್ಬ ಅರಸನ ಮಗಳಿಗೆ ಸ್ವಯಂವರ. ಸ್ವಯಂವರದಲ್ಲಿ ಕವಡೆ ಆಟ ಆಡಿ ಗೆದ್ದರೆ ಅರಸನ ಮಗಳೊಂದಿಗೆ ಮದುವೆ. ಸೋತರೆ ಅರಸನ ಮಗಳ ಅಡಿಯಾಳು ಎಂದು ನಿರ್ಧಾರವಾಗಿರುತ್ತದೆ. ಒಬ್ಬನ ಹಣದ ಗಂಟು ಮುಗಿಯುತ್ತದೆ. ಮತ್ತೊಬ್ಬನ ಟೊಪ್ಪಿಗೆ ಒತ್ತೆ ಇಡಬೇಕಾಗುತ್ತದೆ. ಮೂರನೆಯವ ಮಾಂತ್ರಿಕ ಕಂಬ್ಳಿಯೊಂದಿಗೆ ಬಳೆ ಮಾರುವವನಂತೆ ನಟಿಸಿ. ಅರಸನ ಮಗಳನ್ನು ಕಂಬ್ಳಿಯಲ್ಲಿ ಕೂತುಕೊಳ್ಳಿಸಿ, 'ಜಾವು ಕಂಬಳಿ' ಎನ್ನುತ್ತಾನೆ. ಕಂಬಳಿ ದಟ್ಟ ಕಾಡೊಂದಕ್ಕೆ ಹೋಗುತ್ತದೆ. ಆತ ಮೂರು ದಿನ ನಿದ್ದೆ ಮಾಡುವುದಿಲ್ಲ. ನಾಲ್ಕನೆಯ ದಿನ ಆತ ನಿದ್ದೆ ಮಾಡುವಾಗ ಕಂಬ್ಳಿಯಲ್ಲಿ ಕುಳಿತು 'ಜಾವು ಕಂಬ್ಳಿ' ಎನ್ನುತ್ತಾಳೆ. ಆತನಿಗೆ ಎಚ್ಚರಾದಾಗ ಅವಳು ಇರುವುದಿಲ್ಲ. ಕಂಬ್ಳಿಯೂ ಇರುವುದಿಲ್ಲ. ಒಬ್ಬನೆ ಕಾಡಲ್ಲಿ ತಿರುಗಾಡುತ್ತಾನೆ. ಒಂದು ಕಡೆ ಒಂದು ಹಣ್ಣಿನ ಮರಕ್ಕೆ ಮೂರು ಕೊಂಬೆಯ

ಹಣ್ಣಿಗೂ ಬೇರೆ ಬೇರೆ ಗುಣಗಳು. ಮರದಿಂದ ಎರಡು ಹಣ್ಣು ಕೊಯ್ಯುತ್ತಾನೆ. ಒಂದು ಹಣ್ಣು ತಿಂದರೆ ಮಂಗನಾಗುವುದು. ಇನ್ನೊಂದು ತಿಂದರೆ ಗಿಳಿಯಾಗುವುದು. ಮತ್ತೊಂದು ಹಣ್ಣು ತಿಂದರೆ ಮನುಷ್ಯನಾಗುವುದು. ಗಿಳಿಯಾಗುವ ಹಣ್ಣು ತಿಂದು ಮಂಗನಾಗುವ ಹಣ್ಣನ್ನು ಕಟ್ಟಿಕೊಂಡು, ಅದೇ ಅರಮನೆಗೆ ಬರುತ್ತಾನೆ. ಗಿಳಿ ಅರಸನ ಮಗಳನ್ನು ಮಂಗನಂತೆ ಪರಿವರ್ತಿಸಿ ಹೋಗುತ್ತದೆ. ಮರುದಿನದಿಂದ ಅರಸನ ಮಗಳನ್ನು ಮನುಷ್ಯನಾಗಿ ಪರಿವರ್ತಿಸುವಂತೆ ಡಂಗುರ ಸಾರುತ್ತಾನೆ. ಗಿಳಿ ರೂಪದಾತ ಅದೇ ಮರಕ್ಕೆ ಬಂದು ಮನುಷ್ಯನಾಗುವ ಹಣ್ಣು ತಿಂದು ಒಂದು ಹಣ್ಣನ್ನು ಅರಸನ ಮನೆಗೆ ತರುತ್ತಾನೆ. ಅರಸನ ಮಗಳನ್ನು ಮಂಗನಿಂದ ಮಾನವನಾಗಿ ಪರಿವರ್ತಿಸಿ ಕಂಬ್ಳಿ, ಟೊಪ್ಪಿಗೆ ಮತ್ತು ಸೇವಕರಾದ ಅಣ್ಣಂದಿರನ್ನು ಬಿಡಿಸಿಕೊಳ್ಳುತ್ತಾನೆ.
[ಕ.ಜ.ಕ. (ಸಂ), (ವೀ) ತು.ಜ.ಕ. (ವೀ)]

ಗೌ.ಕ.ಜ.ಕ. ೫೯. ಮಾಂತ್ರಿಕ ತೆಂಗಿನಕಾಯಿ.

ಇಬ್ಬರು ಸಹೋದರರು. ಅಣ್ಣ ಬಡವ. ಆತ ಸೌದೆ ಮಾರಿ ಜೀವನ ಮಾಡುತ್ತಿದ್ದ. ಒಮ್ಮೆ ಅಣ್ಣನಿಗೆ ದೇವರು ಪ್ರತ್ಯಕ್ಷನಾಗಿ ಮೂರು ತೆಂಗಿನಕಾಯನ್ನು ಮಂತ್ರಿಸಿ ಕೊಟ್ಟನು. ಆ ತೆಂಗಿನ ಕಾಯಿಯಿಂದ ತಮ್ಮನಿಗೆ ಮತ್ಸರ ಆಗುತ್ತದೆ. ಮರುದಿನ ತಮ್ಮನೂ ಸೌದೆ ಹೊತ್ತುಕೊಂಡು ಹೋಗುತ್ತಾನೆ. ಆ ದಿನವೂ ದೇವರು ಪ್ರತ್ಯಕ್ಷವಾಗಿ ಮೂರು ಮಂತ್ರಿಸಿದ ತೆಂಗಿನಕಾಯನ್ನು ಕೊಡುತ್ತಾನೆ. ತೆಂಗಿನ ಕಾಯನ್ನು ತಂದು, ಅದನ್ನು ಉಪಯೋಗಿಸುವಾಗ ಮಂತ್ರ ಹೇಳಬೇಕೆಂದು ದೇವರು ಹೇಳುತ್ತಾನೆ. ನೀನು ಏನನ್ನು ಕೇಳಿಕೊಂಡಿರುವೆಯೋ ಅದು ಸಿಗುತ್ತದೆ. ಅದೇ ಸಂದರ್ಭಕ್ಕೆ ಆತನ ಹೆಂಡತಿ ಅದೇನು ಎಂದು ಕೇಳುತ್ತಾಳೆ. 'ನಿನ್ನ ಅಯ್ಯೆ ಬೊದ್ದೆ' (ನಿನ್ನ ತಾಯಿ ಯೋನಿ) ಎಂದು ಒಂದನ್ನು ಒಡೆಯುತ್ತಾನೆ. ಆಕೆಯ ಮೈಯೆಲ್ಲಾ ಬೊದ್ದೆಗಳಾಗುತ್ತವೆ. ಎರಡನೆಯದನ್ನು ಹೆಂಡತಿಯ ಮೈಯಲ್ಲಿದ್ದ ಬೊದ್ದೆ ಹೋಗಲು ಹೇಳುತ್ತಾನೆ. ಇದ್ದ ಒಂದು ಬೊದ್ದೆಯೂ ಇಲ್ಲದಾಗುತ್ತದೆ. ಕೊನೆಗೆ ಒಂದೇ ಒಂದು ಬೊದ್ದೆ ಸಾಕೆಂದು ಒಡೆದಾಗ ಒಂದು ಬೊದ್ದೆಯಾಗುತ್ತದೆ. ಅಲ್ಲಿಗೆ ಮಾಂತ್ರಿಕ ತೆಂಗಿನಕಾಯಿ ಮುಗಿದಿರುತ್ತದೆ.

ಗೌ.ಕ.ಜ.ಕ. ೬೦. ಮಾಂತ್ರಿಕ ಹಣ್ಣು ತಿಂದು ಮಕ್ಕಳಾಗುವುದು.

ಒಬ್ಬ ರಾಜನಿಗೆ ಮಕ್ಕಳಾಗುವುದಿಲ್ಲ. ಋಷಿಯೊಬ್ಬ ಅರಮನೆಗೆ ಬಂದು ಮಾಂತ್ರಿಕ ಮಾವಿನ ಹಣ್ಣು ಕೊಡುತ್ತಾನೆ. ಆ ಮಾವಿನ ಹಣ್ಣಿನ ಸಿಪ್ಪೆಯನ್ನು ಎಸೆದು, ಗೊರಟನ್ನು ರಾಣಿಗೆ ತಿನ್ನಲು ಕೊಡಬೇಕೆಂದು ಹೇಳುತ್ತಾನೆ. ಗೊರಟನ್ನು ತಿನ್ನುವವರುಂಟೇ ಎಂದು ಸಿಪ್ಪೆಯನ್ನು ತಿಂದು, ಗೊರಟನ್ನು ಎಸೆಯುತ್ತಾಳೆ. ಗೊರಟನ್ನು ನಾಯಿ ನುಂಗುತ್ತದೆ. ರಾಣಿ ಮತ್ತು ನಾಯಿ ಇಬ್ಬರಿಗೂ ಗರ್ಭ ನಿಲ್ಲುತ್ತದೆ. ನಾಯಿಗೆ ಎರಡು ಮುದ್ದು ಹೆಣ್ಣು ಮಕ್ಕಳೂ, ರಾಣಿಗೆ ಮುದ್ದಾದ

ಎರಡು ನಾಯಿಮರಿಗಳು ಜನಿಸುತ್ತವೆ. ಮಕ್ಕಳು ಬೆಳೆದು ದೊಡ್ಡವರಾಗುತ್ತಾರೆ. ನಾಯಿಗೆ ಈ ಮಕ್ಕಳ ಮೇಲೆ ತುಂಬಾ ಪ್ರೀತಿ, ದಿನದಲ್ಲಿ ಒಮ್ಮೆ ಅರಮನೆಗೆ ಬಂದು ಮಕ್ಕಳನ್ನು ನೋಡಿ ಹೋಗುತ್ತಿರುತ್ತದೆ. ಊರವರು ಮಕ್ಕಳನ್ನು ತಮಾಷೆ ಮಾಡುತ್ತಾರೆ. ಒಂದು ದಿನ ನಾಯಿ ಅರಮನೆಗೆ ಬಂದಾಗ ಬಿಸಿ ನೀರು ಹೊಯ್ದು ನಾಯನ್ನು ಕೊಲ್ಲುತ್ತಾರೆ.

ಗೌ.ಕ.ಜ.ಕ. ೬೧. ಮಾಂತ್ರಿಕ ಪಕ್ಷಿ : ಹಕ್ಕಿಯ ತಲೆ ತಿಂದವನು ಮುತ್ತು ಕಾರುವುದು, ಶರೀರ ತಿಂದವನು ಅರಸನಾಗುವುದು.

ಬದನೆ ಸೆಟ್ಟಿ ಎಂಬವನಿಗೆ ಇಬ್ಬರು ಮಕ್ಕಳು. ಒಮ್ಮೆ ಬದನೆ ಸೆಟ್ಟಿಗೆ ಗಾಳ ಹಾಕಿ ದೊಡ್ಡ ಮೀನು ಸಿಗುತ್ತದೆ. ಅದನ್ನು ಮಕ್ಕಳು ಮನೆಗೆ ತರುವಾಗ ಕೈ ಜಾರಿ ನೀರಿಗೆ ಬೀಳುತ್ತದೆ. ಬದನೆ ಸೆಟ್ಟಿ ಆ ಸಿಟ್ಟಿನಲ್ಲಿ ಮಕ್ಕಳನ್ನು ಓಡಿಸುತ್ತಾನೆ. ಮಕ್ಕಳು ದೇಶಾಂತರ ಹೋಗುತ್ತಾರೆ. ಒಂದು ಕಡೆ ಒಬ್ಬ ಹಕ್ಕಿಯೊಂದರ ಬೇಟೆಗಾಗಿ ಕಾದು ಕುಳಿತಿರುತ್ತಾನೆ. ಆತ ಆ ಹಕ್ಕಿಯ ವೈಶಿಷ್ಟ್ಯವನ್ನು ಹೇಳುತ್ತಾನೆ. ಅದರ ಹೆಸರು ಜಟಾಯಿ ಹಕ್ಕಿಯೆಂದು, ಅದರ ತಲೆ ತಿಂದರೆ ಮುತ್ತು ಕಾರುತ್ತಾರಂತೆ. ಶರೀರ ತಿಂದರೆ ಅರಸನಾಗುತ್ತಾರಂತೆ. ಹಕ್ಕಿಯ ಬೇಟೆಗಾಗಿ ಕುಳಿತವ ಮನೆಗೆ ಹೋಗುತ್ತಾನೆ. ಹಕ್ಕಿಯನ್ನು ಇಬ್ಬರು ಸೋದರರು ಸೇರಿ ಕೊಲ್ಲುತ್ತಾರೆ. ಸ್ವಲ್ಪ ಮುಂದೆ ಹೋಗುವಾಗ ಅಜ್ಜಿಯೊಬ್ಬಳ ಮನೆ ಸಿಗುತ್ತದೆ. ಅಲ್ಲಿ ಹಕ್ಕಿಯನ್ನು ಸುಟ್ಟು ತಲೆಯನ್ನೊಬ್ಬ. ಶರೀರವನ್ನೊಬ್ಬನಂತೆ ತಿನ್ನುತ್ತಾರೆ. ತಲೆ ತಿಂದವ ಮುತ್ತು ಕಾರುತ್ತಾನೆ. ಶರೀರ ತಿಂದವ ಊರು ತಿರುಗಿಕೊಂಡು ಹೋಗುತ್ತಾನೆ. ಇನ್ನೊಂದು ಊರಲ್ಲಿ ಅರಸನ ಮಗಳಿಗೆ ಸ್ವಯಂವರ. ಹಕ್ಕಿಯ ಶರೀರ ತಿಂದವನ ಕೊರಳಿಗೆ ಆನೆ ಹೂಮಾಲೆ ಹಾಕುತ್ತದೆ. ಅರಸನ ಮಗಳನ್ನು ಮದುವೆಯಾಗು ತ್ತಾನೆ. ಮುಂದೆ ಅರಸನಾಗುತ್ತಾನೆ. [ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೬೨. ಪತ್ತಂಡೆ ಬುಡಂಡೆ ಮಂತ್ರ ಕಲಿಸುವುದು.

ಒಬ್ಬ ಅರಸನಿಗೆ ಒಬ್ಬಳೇ ಮಗಳು. ಆಕೆಯನ್ನು ಮದುವೆ ಮಾಡಿ ಕೊಡುತ್ತೇನೆಂದು ಒಬ್ಬಾತನನ್ನು ಮನೆ ಅಳಿಯನಾಗಿ ನಿಲ್ಲಿಸುತ್ತಾನೆ. ಮಗಳು ಪ್ರಾಯಕ್ಕೆ ಬರುತ್ತಾಳೆ. ಮನೆ ಅಳಿಯನಿಗೆ ಗದ್ದೆ ಉಳುವ ಕೆಲಸ. ಒಂದುದಿನ ಗದ್ದೆ ಉಳುವಾಗ ನೇಗಿಲು ಮುರಿಯುತ್ತದೆ. ಆತ ಗದ್ದೆ ಪುಣಿಯಲ್ಲಿ ಕುಳಿತು ಕೂಗುತ್ತಾನೆ. ಶಿವಪಾರ್ವತಿ ತಿರುಗಾಟಕ್ಕೆ ಹೊರಟವರು ಅಲ್ಲಿಗೆ ಬರುತ್ತಾರೆ. ನೇಗಿಲ ಹಿಡಿ ತುಂಡಾದದ್ದನ್ನು ಒಟ್ಟು ಸೇರಿಸಲು ಪತ್ತಂಡೆ ಬುಡಂಡೆ ಮಂತ್ರ ಕಲಿಸುತ್ತಾರೆ. ಅರಸ ತನ್ನ ಮಗಳಿಗೆ ಬೇರೆ ಅಳಿಯನನ್ನು ಹುಡುಕಿ ಮದುವೆ ಮಾಡುತ್ತಾನೆ. ಹೊಸ ಅಳಿಯ ಪಾಯಿಖಾನೆಗೆ ಹೋಗುವಾಗ ನೀರಿನ ಹಂಡೆ

ಮತ್ತು ಆತನನ್ನು ಪತ್ತಂಡೆ ಮಾಡುತ್ತಾನೆ. ಹೀಗೆ ಅರಸನ ಮಗಳು, ಅರಸನಿಗೆ ಸಾಲಕೊಟ್ಟ ಸಾಹೇಬ, ಮಾವ ಎಲ್ಲರನ್ನೂ ಪತ್ತಂಡೆ ಮಾಡುತ್ತಾನೆ. ಕೊನೆಗೆ ಅರಸನ ಮಗಳನ್ನು ಮನೆ ಅಳಿಯನಿಗೆ ಮದುವೆ ಮಾಡುತ್ತಾನೆ. ಎಲ್ಲರಿಗೂ ಬಿಡಂಡೆ ಮಂತ್ರ ಹೇಳುತ್ತಾನೆ. [ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೬೩. ಮಾಂತ್ರಿಕ ಕೋಟಿನ ಸಹಾಯದಿಂದ ಹುಡುಗ ಬೇರೆ ಬೇರೆ ಸಾಧನೆಗಳನ್ನು ಮಾಡುವುದು.

ಒಬ್ಬ ದನ ಕಾಯುವ ಹುಡುಗ. ಆತನನ್ನು ರಾಕ್ಷಸ ಕದ್ದೊಯ್ಯುತ್ತಾನೆ. ರಾಕ್ಷಸನ ಮನೆಯಲ್ಲಿ ತಲೆಬುರುಡೆಗಳು ಹುಡುಗನಿಗೆ ಉಪಾಯ ಹೇಳುತ್ತವೆ. ಹುಡುಗ ರಾಕ್ಷಸನನ್ನು ಮೂರು ತುಂಡು ಮಾಡಿ, ರಾಕ್ಷಸನ ಮಾಂತ್ರಿಕ ಕೋಟು ಹಾಕಿ ಊರಿಗೆ ಬರುತ್ತಾನೆ.

ಊರಿನ ಕೆರೆಯೊಂದರಲ್ಲಿ ತಾವರೆ ಹೂವು ದಿನಕ್ಕೊಂದು ಅರಳಿ ಮೇಲು ಲೋಕಕ್ಕೆ ಹೋಗುತ್ತಿರುತ್ತದೆ. ಒಂದು ದಿನ ತಾವರೆಯ ಎಸಳ ಮೇಲೆ ಕುಳಿತು ಕೊಳ್ಳುತ್ತಾನೆ. ತಾವರೆ ಹೂವು ಸೂರ್ಯ ಲೋಕಕ್ಕೆ ಬರುತ್ತದೆ. ಸೂರ್ಯ ದೇವರು ಹುಡುಗನಿಗೆ ಬೇಕಾದ ವರ ಕೊಟ್ಟು ಭೂಲೋಕಕ್ಕೆ ಕಳುಹಿಸುತ್ತಾರೆ. ಹುಡುಗ ಭೂಲೋಕದಲ್ಲಿ ಕುಷ್ಠ ರೋಗಿಯ ವೇಷದಲ್ಲಿರುತ್ತಾನೆ.

ಒಬ್ಬ ರಾಜ ಈ ಕುಷ್ಠನಿಗೆ ತನ್ನ ಕೊನೆಯ ಮಗಳನ್ನು ಮದುವೆ ಮಾಡಿಕೊಡು ತ್ತಾನೆ. ಒಮ್ಮೆ ಆ ರಾಜನಿಗೆ ಮಾಂಸ ತಿನ್ನಬೇಕೆಂಬ ಆಸೆಯಾಗುತ್ತದೆ. ಅಳಿಯಂದಿ ರನ್ನು ಕಾಡು ಬೇಟೆಗಾಗಿ ಕಳುಹಿಸುತ್ತಾನೆ. ಕುಷ್ಠನೂ ಒಂದು ಕೊತ್ತಲಿಕೆ (ಮಡಲಿನ ದಂಡು) ಯನ್ನು ಹಿಡಿದುಕೊಂಡು ಕಾಡಿಗೆ ಹೋಗುತ್ತಾನೆ. ರಾಜನ ಉಳಿದ ಅಳಿ ಯಂದಿರು ನಾಯಿ, ಬೆಕ್ಕು, ಮಂಗಗಳನ್ನು ಮಾಂಸ ಮಾಡಿ ಅರಮನೆಗೆ ತರುತ್ತಾರೆ. ಕುಷ್ಠನಿಗೆ ಮೊಲ, ಪುಣುಗು ಬೆಕ್ಕು (ಕುತ್ರಿ), ಮುಚ್ಚ (ಮಂಗನ ಜಾತಿ), ಅಲಂಕ್ (ಚಿಪ್ಪು ಹಂದಿ) ಗಳು ಸಿಗುತ್ತವೆ.

ಒಂದು ದಿನ ಕುಷ್ಠ ಸ್ನಾನಕ್ಕೆ ಹೋದಾಗ ಮೈಯ ಚರ್ಮವನ್ನು ತೆಗೆದಿರಿಸು ತ್ತಾನೆ. ಆತನ ಹೆಂಡತಿ ಆ ಚರ್ಮವನ್ನು ಬೆಂಕಿಗೆ ಹಾಕುತ್ತಾಳೆ. ಕುಷ್ಠ ಸುಂದರ ಯುವಕನಾಗಿ ಪರಿವರ್ತನೆ ಹೊಂದುತ್ತಾನೆ.

ಗೌ.ಕ.ಜ.ಕ. ೬೪. ಜೀವಸೂಚಿಯಾಗಿ ತುಳಸಿಗಿಡ ಮತ್ತು ನೆಕ್ಕಿಗಿಡ.

ಒಂದು ಊರಲ್ಲಿ ಇಬ್ಬರು ಮಕ್ಕಳನ್ನು ದೇಶಾಂತರ ಕಳುಹಿಸುತ್ತಾರೆ. ಒಬ್ಬನಿಗೆ ಗಂಜಿ ಬುತ್ತಿ ಮತ್ತು ಚಂದ್ರಾಯುಧವನ್ನೂ ಇನ್ನೊಬ್ಬನಿಗೆ ಹಣದ ಬುತ್ತಿ ಮತ್ತು ಬೆಳ್ಳಿ ಕುದುರೆಯನ್ನೂ ಕೊಡುತ್ತಾರೆ. ದೇಶಾಂತರ ಹೋಗುವಾಗ ಮೂವರು

ಅರಸರ ಮನೆಯಲ್ಲಿ ಸ್ವಯಂವರದ ಸವಾಲನ್ನು ಏರ್ಪಡಿಸಿರುತ್ತಾರೆ. ಮೂರೂ ಕಡೆಯೂ ಕುದುರೆಯನ್ನು ಹಾರಿಸಿ ಅರಸರ ಮಕ್ಕಳನ್ನು ಗೆಲ್ಲುತ್ತಾನೆ. ಮೂವರನ್ನೂ ಅವರವರ ಮನೆಯಲ್ಲಿ ಬಿಟ್ಟು ಪಾರಿಜಾತದ ಹೂವು ತರಲು ಸಮುದ್ರದಾಚೆಗೆ ಹೋಗುತ್ತಾನೆ. ಹೋಗುವಾಗ ಆಕಸ್ಮಿಕವಾಗಿ ತನ್ನ ಜೀವಕ್ಕೆ ಅಪಾಯ ಬಂದರೆ ಜೀವಸೂಚಿಯಾಗಿ ತುಳಸಿಗಿಡ ಮತ್ತು ನೆಕ್ಕಿಗಿಡ ನೆಡುತ್ತಾನೆ.

ಪಾರಿಜಾತದ ಹೂವು ತರಲು ಸಮುದ್ರದಾಚೆ ಹೋದಾಗ ಏಳು ಜನ ದೇವ ಕನ್ಯೆಯರು ಸಿಗುತ್ತಾರೆ. ಅವರು ಸ್ನಾನ ಮಾಡುವಾಗ ಒಬ್ಬಳ ಸೀರೆ ಕದಿಯುತ್ತಾನೆ. ಅವಳು ಕರೆದಳೆಂದು ತಿರುಗಿ ನೋಡಿದಾಗ ಭಸ್ಮವಾಗುತ್ತಾನೆ. ದೇವಕನ್ಯೆಯರೆಲ್ಲಾ ಬಂದು ಮಂತ್ರದ ನೀರು ಮತ್ತು ದರ್ಬೆ ಕಡ್ಡಿ ತಾಗಿಸಿದಾಗ ಜೀವವಾಗುತ್ತಾನೆ. ಪಾರಿಜಾತ ಹೂವು ತರಲು ಮೂರು ಮಂತ್ರದ ಕಲ್ಲು ಕೊಡುತ್ತಾರೆ. ಆತ ಹೂವು ಕೊಯ್ಯಲು ಮರಕ್ಕೆ ಏರಿದವ ಬಿದ್ದು ಸಾಯುತ್ತಾನೆ. ಮೂರು ಜನ ಮಡದಿಯರಿಗೆ ತುಳಸಿ ಗಿಡ ಮತ್ತು ನೆಕ್ಕಿ ಗಿಡಗಳು ಸೂಚನೆ ಕೊಡುತ್ತವೆ. ಅವರು ಬಂದು ಆತನನ್ನು ಬದುಕಿಸುತ್ತಾರೆ. ಪಾರಿಜಾತ ಹೂವನ್ನು ಮೂವರ ಮುಡಿಗೆ ಇಟ್ಟು, ಅರಮನೆಗೆ ಕರೆದುಕೊಂಡು ಬಂದು, ಸುಖವಾಗಿರುತ್ತಾನೆ.

ಗೌ.ಕ.ಜ.ಕ. ೬೫. ಜೀವಸೂಚಿಯಾಗಿ ತುಳಸಿಗಿಡ.

ಒಂದು ಊರಲ್ಲಿ ಅಜ್ಜ–ಅಜ್ಜಿ ದನಕರುಗಳನ್ನು ಸಾಕುತ್ತಾರೆ. ಒಂದು ದಿನ ಅಜ್ಜಿಯೊಂದಿಗೆ ಕೋಪಗೊಂಡ ಅಜ್ಜ ಅವುಗಳನ್ನು ಕಾಡಿಗೆ ಬಿಡುತ್ತಾನೆ. ಕಾಡಲ್ಲಿ ಅವುಗಳು ಹುಲಿಯೊಂದಿಗೆ ಸೇರಿಕೊಳ್ಳುತ್ತವೆ. ಹುಲಿಗೆ ಒಂದು ಮರಿ ಇತ್ತು. ಹುಲಿಮರಿ ಮತ್ತು ಕರು ಒಟ್ಟಿಗೆ ಆಡುತ್ತಿದ್ದವು. ಒಂದು ದಿನ ತಾಯಿ ಹುಲಿ ದನ ವನ್ನು ಹಿಡಿದು ತಿನ್ನುತ್ತದೆ. ಮರಿ ಹುಲಿ ಮತ್ತು ಕರು ದೇಶಾಂತರ ಹೋಗುತ್ತವೆ. ದಾರಿಯಲ್ಲಿ ಶಿವ–ಪಾರ್ವತಿ ಪ್ರತ್ಯಕ್ಷರಾಗಿ ಹುಲಿಮರಿ ಮತ್ತು ಕರುವನ್ನು ಮಾನವ ರನ್ನಾಗಿ ಪರಿವರ್ತನೆ ಮಾಡುತ್ತಾರೆ. ಹುಲಿ ಮರಿ ಹುಲಿಪುತ್ರನೆಂದೂ, ಕರು ಬಸವ ಪುತ್ರನೆಂದೂ ಹೆಸರುವಾಸಿಯಾಗುತ್ತಾರೆ. ಇಬ್ಬರಿಗೂ ಅಗಲುವಿಕೆ ಬರುತ್ತದೆ. ಜೀವಸೂಚಿಯಾಗಿ ತುಳಸಿಗಿಡ ನೆಡುತ್ತಾರೆ. ಒಮ್ಮೆ ಬಸವ ಪುತ್ರ ಸಾಯುತ್ತಾನೆ. ತುಳಸಿ ಗಿಡದ ಸೂಚನೆಯಿಂದ ಬಸವಪುತ್ರನನ್ನು ಮಾಂತ್ರಿಕಶಕ್ತಿ ಬಳಸಿ ಹುಲಿಪುತ್ರ ಬದುಕಿಸುತ್ತಾನೆ. ಮುಂದೆ ಇಬ್ಬರೂ ಸುಖವಾಗಿರುತ್ತಾರೆ.

[ತು.ಜ.ಕ. (ವೀ)]

ಗೌ.ಕ.ಜ.ಕ. ೬೬. ಮಾಂತ್ರಿಕ ವಸ್ತುಗಳಿಂದ ಹಲವು ಸಾಧನೆಗಳನ್ನು ಮಾಡುವುದು.

ಒಬ್ಬ ಅರಸನಿಗೆ ಆರು ಜನ ಗಂಡು ಮಕ್ಕಳು ಮತ್ತು ಒಬ್ಬಳೇ ಹೆಣ್ಣು ಮಗಳು. ಸಹೋದರನೊಬ್ಬ ಊರು ತಿರುಗಲು ಹೊರಡುತ್ತಾನೆ. ಸಮುದ್ರ

ದಾಟಿ ಹೋಗುವುದೆಂದು ಹಡಗೊಂದನ್ನು ಕಟ್ಟಿಸುತ್ತಾನೆ. ಊರು ತಿರುಗಲು ಹೋಗುವಾಗ ಅರ್ಧ ದಾರಿಯಲ್ಲಿ ಒಂದು ಹಣ್ಣಿನ ಮರ ಸಿಗುತ್ತದೆ. ಆ ಮರದ ಹಣ್ಣಿನ ಬೀಜ ಹಾಕಿದ ಕೂಡಲೇ ಅದು ಗಿಡವಾಗುತ್ತದೆ. ಅದು ವಿಶಿಷ್ಟ ಮಹಿಮೆಯ ಬೀಜವೆಂದು ಜೇಬಲ್ಲಿ ಹಾಕುತ್ತಾನೆ. ಮುಂದೆ ಹೋದಾಗ ಅರಸನೊಬ್ಬನ ಮನೆ ಸಿಗುತ್ತದೆ. ಆತ ಆತ್ಮೀಯತೆಯಿಂದ ಬರಮಾಡಿಕೊಳ್ಳುತ್ತಾನೆ. ಕುಳಿತು ಸುಖ ಸಮಾಚಾರ ಮಾತನಾಡುವಾಗ ವಿಶಿಷ್ಟ ಶಕ್ತಿಯ ಬೀಜದ ಕುರಿತು ಚರ್ಚೆ ಬೆಳೆಯುತ್ತದೆ. ಹೀಗೆ ಆದ ಚರ್ಚೆಯಲ್ಲಿ ಆರು ಜನ ಸಹೋದರರು ಸೋಲುತ್ತಾರೆ. ಕೊನೆಗೆ ಒಬ್ಬಳೇ ತಂಗಿ ಅಣ್ಣಂದಿರನ್ನು ಹುಡುಕಲು ವೇಷ ಮರೆಸಿ ಹೊರಡುತ್ತಾಳೆ. ಅರ್ಧ ದಾರಿಯಲ್ಲಿ ಇದೇ ಮರ ಸಿಗುತ್ತದೆ. ತನ್ನ ಸಹೋದರರು ಇದಕ್ಕಾಗಿಯೇ ಸೋತಿರಬೇಕು ಎಂದು ಯೋಚಿಸುತ್ತಾಳೆ. ಅದೇ ಮರದ ಅಡಿಯಿಂದ ನಾಲ್ಕು ಡಬ್ಬಿ ಮಣ್ಣು ತುಂಬಿಸಿಕೊಂಡು ಮುಂದಕ್ಕೆ ಹೋಗುತ್ತಾಳೆ. ಅದೇ ಅರಸನ ಸ್ವಾಗತವಾಗುತ್ತದೆ. ಹಣ್ಣಿನ ಮರದ ಚರ್ಚೆಯಾಗಿ ಅರಸ ಸೋಲುತ್ತಾನೆ. ಸೋತು ಹೋದುದರಿಂದಾಗಿ ತನ್ನ ಭೂಮಿ ಸಂಪತ್ತನ್ನು ಬಿಟ್ಟು ಕೊಡುತ್ತಾನೆ. ಅಣ್ಣಂದಿರನ್ನು ಅರಸನ ಸೇವೆಯಿಂದ ಬಿಡಿಸಿಕೊಂಡು ಆಕೆ ಅರಮನೆಗೆ ಬರುತ್ತಾಳೆ. ಸೋತವನಿಗೆ ತಾನು ಸೋತದ್ದು ಒಬ್ಬ ಸಾಮಾನ್ಯ ಹೆಣ್ಣಿಗೆಂದು ಗೊತ್ತಾಗುತ್ತದೆ. ಆತ ಕಪ್ಪ ಕಾಣಿಕೆ ಕೊಡುವ ಬದಲು ಹೆಣ್ಣು ಕೇಳುತ್ತಾ ಬರುತ್ತಾನೆ. ಆಕೆಯನ್ನು ಮದುವೆಯಾಗುತ್ತಾನೆ. ಗುರುತಿಗಾಗಿ ಮುದ್ರೆಯ ಉಂಗುರವಿಡುತ್ತಾರೆ. ಮದುವೆಯಾಗಿ ಕೆಲವು ತಿಂಗಳು ಕಳೆದಾಗ ಆಕೆ ಗರ್ಭ ಧರಿಸಿ, ಗಂಡು ಮಗುವಿಗೆ ಜನ್ಮ ಕೊಡುತ್ತಾಳೆ. ಆಕೆ ಗಂಡನ ಮನೆಯಿಂದ ಬರುವಾಗ, ನಿನಗೆ ಹುಟ್ಟಿದ ಮಗನಿಂದ ಹೊಡೆಸುವೆನೆಂದು ಶಪಥ ಹಾಕುತ್ತಾಳೆ. ಆ ಮಾತನ್ನು ಮಗ ನೆರವೇರಿಸಿಕೊಡುತ್ತಾನೆ. ಉಂಗುರದ ಸಹಾಯದಿಂದ ತಂದೆ–ತಾಯನ್ನು ಒಟ್ಟು ಸೇರಿಸಿ ಸುಖವಾಗಿರುತ್ತಾರೆ.

ಗೌ.ಕ.ಜ.ಕ. ೬೭. ರಾಜಕುಮಾರಿ ಯಾರಿಗೆ ? ಉಪ ಕಥೆಗಳ ಮೂಲಕ ರಾಜನ ಮಗಳಿಗೆ ಯೋಗ್ಯ ಗಂಡನ ನಿರ್ಧಾರ.

ಒಬ್ಬ ರಾಜನಿಗೆ ಒಬ್ಬಳೇ ಮಗಳು. ಆಕೆಗೆ ಅರಮನೆಯಲ್ಲಿ ವಾಸವಾಗಲು ಮನಸ್ಸಿರುವುದಿಲ್ಲ. ಆಕೆಗಾಗಿ ಶಿಲ್ಪಿಯಿಂದ ಬಂಡೆಕಲ್ಲಿನಮೇಲೆ ಮನೆ ಕಟ್ಟಿಸುತ್ತಾನೆ. ಆ ಮನೆಗೆ ಹೋಗಲು ಯಾರಿಗೂ ಅವಕಾಶವಿಲ್ಲ. ಒಂದು ವೇಳೆ ಹೋದನೆಂದರೆ ಆತ ರಾಜನ ಮಗಳನ್ನು ಮದುವೆಯಾಗಲು ಅರ್ಹನೆಂದು ಗುರುತಿಸಲಾಗುತ್ತದೆ. ರಾಜನ ಮಗಳು ೧೨ ವರ್ಷದಿಂದ ಅಲ್ಲಿ ನಿದ್ದೆ ಮಾತ್ರ ಮಾಡುತ್ತಾಳೆ. ಈ ಕಥೆಗೆ ಮೂರು ಉಪಕಥೆಯಿಂದ ಅರ್ಹ ವ್ಯಕ್ತಿಯನ್ನು ಗುರುತಿಸುವುದು.

ಉಪಕಥೆ : ೧. ಒಬ್ಬ ಬ್ರಾಹ್ಮಣ ಕಾಶಿಗೆ ಹೋಗುತ್ತಾನೆ. ದಾರಿಯಲ್ಲಿ ಮೊಸಳೆಯೊಂದು ಕೆಸರಲ್ಲಿ ಬಿದ್ದಿರುತ್ತದೆ. ನೀರಿಲ್ಲದೆ ಅದು ಸಾಯುವ ಸ್ಥಿತಿಯಲ್ಲಿತ್ತು.

ಬ್ರಾಹ್ಮಣ ಆ ಮೊಸಳೆಯನ್ನು ನದಿಗೆ ಬಿಡಲು ಹೊತ್ತುಕೊಂಡು ಹೋಗುತ್ತಾನೆ. ಬ್ರಾಹ್ಮಣ ಮೊಸಳೆಯನ್ನು ನೀರಲ್ಲಿ ಬಿಟ್ಟೊಡನೆಯೆ ತಿನ್ನುತ್ತೇನೆಂದು ಬೆದರಿಕೆ ಹಾಕುತ್ತದೆ. ಬ್ರಾಹ್ಮಣ ಉಪಕಾರ ಮಾಡಲು ಹೋಗಿ ಅಪಾಯ ಒದಗುತ್ತದೆ. ನರಿಯೊಂದು ಅದೇ ದಾರಿಯಾಗಿ ಹೋಗುತ್ತದೆ. ಬಡ ಬ್ರಾಹ್ಮಣನನ್ನು ಮೊಸಳೆ ತಿನ್ನುವುದರಿಂದ ರಕ್ಷಿಸುತ್ತದೆ. ಇಲ್ಲಿ ಯಾರ ತಪ್ಪು ಎಂದು ನರಿ ವಿಮರ್ಶೆ ಮಾಡುತ್ತದೆ. ಆಗ ಮಾವಿನ ಮರವೊಂದು ತೀರ್ಪು ಕೊಡುತ್ತದೆ. ನಾವು ಹೂವು ಬಿಟ್ಟು ಕಾಯಾದಾಗ ನಮ್ಮನ್ನು ಎಲ್ಲರೂ ನೋಡುತ್ತಾರೆ. ಕಾಯಿ ಪಣ್ಣಾದ್ದೇ ತಡ ಕಲ್ಲು ದೊಣ್ಣೆ ಹೊಡೆದು ಅಪಮಾನ ಮಾಡುತ್ತಾರೆ. ಬೇಸಗೆ ಬಂದರೆ ನಮ್ಮ ಕೈ, ಕಾಲುಗಳನ್ನು ಕಡಿಯುತ್ತಾರೆಂದು ಹೇಳುತ್ತದೆ. ಇನ್ನೊಂದು ಎತ್ತು ನ್ಯಾಯ ತೀರ್ಪು ಕೊಡುತ್ತದೆ. ನಮ್ಮನ್ನು ಸುಮಾರು ವರ್ಷ ಬೇಸಾಯಕ್ಕಾಗಿ ಉಪಯೋಗಿಸಿ ನಮ್ಮ ಶಕ್ತಿ ಕಡಿಮೆಯಾದಾಗ ನಮ್ಮನ್ನು ಮಾಂಸಮಾಡಿ ತಿನ್ನುತ್ತಾರೆ. ಹಾಗಾಗಿ ಬ್ರಾಹ್ಮಣನನ್ನು ತಿನ್ನುವುದು ಒಳ್ಳೆಯದು. ಆಗ ನರಿ ಒಂದು ಉಪಾಯ ಹೇಳುತ್ತದೆ. ಮೊದಲು ಬ್ರಾಹ್ಮಣ ಮೇಲೆ ಬಂದು ನಿಲ್ಲಬೇಕು. ಆಮೇಲೆ ನ್ಯಾಯ ತೀರ್ಮಾನ. ನರಿಯ ಮಾತಿನಂತೆ ಮೊಸಳೆ ಬ್ರಾಹ್ಮಣನನ್ನು ಬಿಡುತ್ತದೆ. ಬ್ರಾಹ್ಮಣ ಮೇಲೆ ಬಂದಾಗ ನರಿ ಹೇಳುತ್ತದೆ. ತಪ್ಪು ಮೊಸಳೆಯದ್ದೇ. ಬ್ರಾಹ್ಮಣ ಕಾಶಿಗೆ ಹೊರಟಿದ್ದಾನೆ. ಮೊಸಳೆ ಸೋತುಹೋಗುತ್ತದೆ.

ಉಪಕಥೆ : ೨. ಒಂದು ಕಡೆ ನಾಲ್ಕು ಜನ ಕಾಶಿಗೆ ಹೋಗುತ್ತಾರೆ. ಮಧ್ಯ ದಾರಿಗೆ ತಲುಪುವಾಗ ರಾತ್ರಿಯಾಗುತ್ತದೆ. ಮೂರು ಜನ ನಿದ್ರಿಸುವಾಗ ಒಬ್ಬನು ಎಚ್ಚರದಿಂದಿರುವುದು ಎಂಬ ತೀರ್ಮಾನವಾಗುತ್ತದೆ. ಇವರಲ್ಲಿ ಒಬ್ಬ ಬ್ರಾಹ್ಮಣ, ಮತ್ತೊಬ್ಬ ಕುಂಬಾರ, ಇನ್ನಿಬ್ಬರಲ್ಲಿ ಒಬ್ಬ ನೇಕಾರ, ಮತ್ತೊಬ್ಬ ಬಡಗಿ. ಮೊದಲು ಕುಂಬಾರ ಕುಳಿತ. ಸುಮ್ಮನೆ ಇರುವುದಕ್ಕೆ ಬಾರದೆ ಸುಂದರವಾದ ಮಣ್ಣಿನ ಮೂರ್ತಿ ಮಾಡುತ್ತಾನೆ. ನಂತರ ಕುಳಿತವ ಬಡಗಿ. ಆತ ಮೂರ್ತಿಯನ್ನು ಸುಂದರವಾಗಿ ಕೆತ್ತುತ್ತಾನೆ. ಆನಂತರ ಕುಳಿತವ ನೇಕಾರ. ಆತ ಆ ಮೂರ್ತಿಗೆ ನೇಯ್ದು ಬಟ್ಟೆ ಹಾಕುತ್ತಾನೆ. ಕೊನೆಯದಾಗಿ ಬ್ರಾಹ್ಮಣ ಎದ್ದು ಪೂಜೆಮಾಡಿ ಆ ಮೂರ್ತಿಗೆ ಜೀವ ಕಲೆ ಕೊಡುತ್ತಾನೆ. ಬೆಳಗಾದಾಗ ನಾಲ್ವರಿಗೂ ಚರ್ಚೆ. ಈ ಮೂರ್ತಿ ಸುಂದರವಾದ ರೂಪವತಿ ಹೆಣ್ಣು. ಅವಳು ಯಾರಿಗೆ ಸೇರಬೇಕು ?

ಉಪಕಥೆ : ೩. ಒಂದು ಕಡೆ ಇಬ್ಬರು ಮಕ್ಕಳು ಮತ್ತು ತಂದೆ ತಾಯಿ ವಾಸವಾಗಿರುತ್ತಾರೆ. ಇಬ್ಬರು ಮಕ್ಕಳಲ್ಲಿ ಒಂದು ಗಂಡು. ಇನ್ನೊಂದು ಹೆಣ್ಣು. ಹೆಣ್ಣು ಮಗು ಚಿಕ್ಕವಳು, ಅವಳಿಗೆ ಪ್ರಾಯ ಬಂದಾಗ ಮದುವೆ ಮಾಡುವ ಜವಾಬ್ದಾರಿ ಮೂವರಿಗೂ ಬಿತ್ತು. ತಂದೆ ಮಗಳಿಗೆ ಯೋಗ್ಯ ಗಂಡನನ್ನು ಆಯ್ಕೆ ಮಾಡುತ್ತಾನೆ. ಹಾಗೇ ಅಣ್ಣ ಮತ್ತು ತಾಯಿ ಹುಡುಗಿಗೆ ಯೋಗ್ಯ ಗಂಡನನ್ನು

ಆಯ್ಕೆ ಮಾಡುತ್ತಾನೆ. ಹಾಗೇ ಅಣ್ಣ ಮತ್ತು ತಾಯಿ ಹುಡುಗಿಗೆ ಯೋಗ್ಯ ಗಂಡನ ಆಯ್ಕೆ ಮಾಡುತ್ತಾರೆ. ಮೂವರೂ ಒಂದೇ ಹೆಣ್ಣು ನೋಡುವ ಕ್ರಮ ಮಾಡುತ್ತಾರೆ. ಮೂವರಿಗೂ ಜಗಳ ಆಗುತ್ತದೆ. ಈ ಮಧ್ಯೆ ಹುಡುಗಿ ಪಾಷಾಣ ತಿಂದು ಸಾಯುತ್ತಾಳೆ. ತಂದೆ ತಾಯಿಯ ಕಡೆಯ ಇಬ್ಬರೂ ವರರೂ ಒಡವೆ, ವಸ್ತ್ರಗಳನ್ನು ಹೆಣದ ಮೇಲೆ ಹಾಕುತ್ತಾರೆ. ಆದರೆ ಅಣ್ಣನ ಕಡೆಯ ವರನು ಕಾಡಿಗೆ ಹೋಗಿ ಸಂಜೀವಿನಿ ಕಡ್ಡಿ ತಂದು ಬದುಕಿಸುತ್ತಾನೆ. ಈ ಹೆಣ್ಣು ಯಾರಿಗೆ ಸಿಗಬೇಕು ? ತಂದೆಯ ಕಡೆಯ ವರನಿಗೇ ಅಥವಾ ತಾಯಿ ಕಡೆಯ ವರನಿಗೇ ಅಥವಾ ಸಂಜೀವಿನಿ ಕಡ್ಡಿ ತಂದು ಬದುಕಿಸಿದ ಅಣ್ಣನ ಕಡೆಯ ವರನಿಗೇ ?

ಈ ಮೂರು ಉಪಕಥೆಗಳು ಮೂಲ ಕಥೆಯ ರಾಜನ ಮಗಳಿಗೆ ಯೋಗ್ಯ ಗಂಡನನ್ನು ನಿರ್ಧರಿಸುವುದಕ್ಕೆ ಸಹಾಯವಾಗುತ್ತವೆ. ಮೂಲ ಕಥೆಯ ಹಿನ್ನೆಲೆ ಹೀಗಿದೆ. ಒಂದು ಊರಲ್ಲಿ ಒಬ್ಬ ಅರಸ. ಆತನಿಗೆ ಮೂರು ಜನ ಗಂಡು ಮಕ್ಕಳು. ಅವರು ಮೂವರೂ ಮದುವೆಯ ಪ್ರಾಯಕ್ಕೆ ಬರುತ್ತಾರೆ. ಯಾರಿಗೆ ಪಟ್ಟ ಮೊದಲೋ ಅವರಿಗೆ ಮದುವೆ. ಹಕ್ಕಿನ ಪ್ರಕಾರ ತಂದೆಯ ಉತ್ತರಾಧಿಕಾರಿ ದೊಡ್ಡ ಮಗ ಆಗುತ್ತಾನೆ. ಅಣ್ಣತಮ್ಮಂದಿರ ಜಗಳ ಇತ್ಯರ್ಥ ಆಗಲು ಈ ಕಥೆಯನ್ನು ಹೇಳುತ್ತಾರೆ. [ಕ.ಜ.ಕ. (ಸಂ)]

ಗೌ.ಕ.ಜ.ಕ. ೬೮. ಪ್ರಾಣಿಗಳ ಭಾಷೆ ಗೊತ್ತಿರುವವನ ಕಥೆ : ಪ್ರಾಣಿಗಳ ಭಾಷೆ ಗೊತ್ತಿದ್ದವನು ತನ್ನ ಹೆಂಡತಿಯನ್ನು ಪಳಗಿಸಿದ ಕಥೆ.

ಒಂದು ಊರಲ್ಲಿ ಒಬ್ಬ ಧನಿಕ. ಅವನಿಗೆ ಪ್ರಾಣಿಗಳ ಭಾಷೆ, ಪಕ್ಷಿಗಳ ಭಾಷೆ ಅರ್ಥವಾಗುತ್ತದೆ. ಒಂದು ದಿನ ಅವನ ಕತ್ತೆ ಹಟ್ಟಿಯ ಎತ್ತುಗಳೊಂದಿಗೆ ಮಾತನಾಡುತ್ತದೆ. 'ನಾಳೆ ನೀನು ಜ್ವರವೆಂದು ಮಲಗಬೇಕು. ನೋಡು ನಾನೆಷ್ಟು ಆರಾಮದಲ್ಲಿದ್ದೇನೆ'. ಈ ಮಾತನ್ನು ಧನಿಕ ಕೇಳಸಿಕೊಂಡ, ಮಾರನೆ ದಿನ ಒಂದು ಎತ್ತು ಸೌಖ್ಯವಿಲ್ಲವೆಂದು ಮಲಗಿದೆ. ಆ ದಿನ ಕತ್ತೆಯನ್ನು ಎತ್ತಿಗೆ ಜೊತೆಮಾಡಿ ಉಳುತ್ತಾರೆ. ಕತ್ತೆಗೆ ಸಾಕಷ್ಟು ಪೆಟ್ಟು ಮತ್ತು ಕಷ್ಟಸಿಗುತ್ತದೆ. ಸಂಜೆ ಕತ್ತೆ ಎತ್ತಿನೊಂದಿಗೆ, 'ನಾಳೆ ನೀನು ಹೋಗಬೇಕು. ಯಾಕೆಂದರೆ, ನೀನು ಹೋಗಲಿಲ್ಲವಾದರೆ ನಿನ್ನನ್ನು ಮಾಂಸ ಮಾಡುವವರಿಗೆ ಕೊಡುತ್ತಾರಂತೆ' ಎಂದು ಕತ್ತೆ ಹೇಳಿತು. ಕತ್ತೆಯ ಉಪಾಯದಿಂದ ಧನಿಕನಿಗೆ ನಗುಬರುತ್ತದೆ. ಹೆಂಡತಿ ಧನಿಕನೊಂದಿಗೆ ಯಾಕೆ ನಗುವುದೆಂದು ವಿಚಾರಿಸುತ್ತಾಳೆ. ಪ್ರಾಣಿಗಳ ಮಾತು ತನಗೆ ಬರುತ್ತದೆ ಎಂದು ಸತ್ಯ ಹೇಳಿದರೆ ಧನಿಕ ಸಾಯುತ್ತಾನೆ. ಹೆಂಡತಿ ಎಷ್ಟು ಕೇಳಿದರೂ ಸುಮ್ಮನೆ ಎನ್ನುತ್ತಾನೆ. ನೀವು ಸತ್ತರೂ ಚಿಂತೆ ಇಲ್ಲ ಹೇಳಲೇಬೇಕೆಂದು ಒತ್ತಾಯ ಮಾಡುತ್ತಾಳೆ. ಮಾರನೆಯ ದಿನ ಎಲ್ಲ ಸಂಬಂಧಿಕರು, ಬಂಧುಗಳು, ಕುಟುಂಬಸ್ಥರು ಸೇರುತ್ತಾರೆ. ಧನಿಕ ೧೨ ಗಂಟೆಗೆ ಹೆಂಡತಿಗೆ ನಗಾಡಿದ ವಿಚಾರ ಹೇಳುವುದೆಂದು ತೀರ್ಮಾನವಾಗು

ತ್ತದೆ. ಆ ದಿನ ಧನಿಕನ ನಾಯಿ ಮತ್ತು ಕೋಳಿ ತುಂಬಾ ಬೇಸರದಲ್ಲಿ ಮಲಗಿರುತ್ತವೆ. ಧನಿಕ ಅವುಗಳ ಮಾತನ್ನು ಕೇಳಿಸಿಕೊಳ್ಳುತ್ತಾನೆ. ಧನಿಕ ಒಳ್ಳೆಯವ. ಹೆಂಡತಿಯ ಮಾತು ಕೇಳಿ ಹಾಳಾಗುತ್ತಾನೆ. ಧನಿಕ ಸತ್ತರೆ ನಮಗೆ ಗತಿ ಇಲ್ಲ. ಇದಕ್ಕೆ ಒಂದೇ ಉಪಾಯ. ಒಂದು ಕೋಣೆಯಲ್ಲಿ ಉಪ್ಪಿನ ಕಾಯಿ, ಸಾರು ಕಣ್ಣಿಗೆ ಹಾಕಿ ಹೆಂಡತಿಗೆ ನಾಲ್ಕು ಬಿಗಿದರೆ ಎಲ್ಲ ಸರಿಯಾಗುತ್ತದೆ. ಅದು ಹೌದೆಂದು ಧನಿಕನಿಗೆ ತೋರುತ್ತದೆ. ೧೨ ಗಂಟೆಗೆ ಹೆಂಡತಿಯನ್ನು ಕೋಣೆಗೆ ಸೇರಿಸಿ ನಾಲ್ಕು ಬಿಗಿಯುತ್ತಾನೆ. ದಮ್ಮಯ್ಯ ಇನ್ನು ಹೇಳುವುದು ಬೇಡ ಎಂದು ಓಡಿ ಹೊರಬರುತ್ತಾಳೆ. [ಕ.ಜ.ಕ. (ಸಂ)]

ಗೌ.ಕ.ಜ.ಕ. ೬೯. ಸೂಸಮ್ಮಾ ಸೂಸಮ್ಮಾ ಬಾಗಿಲು ತೆರೆ.

ಒಂದೂರಲ್ಲಿ ಇಬ್ಬರು ಸಹೋದರರಿದ್ದರು. ಕಾಸಿಮ ಬಡವ, ಆಲಿಬಾಬ ಶ್ರೀಮಂತ. ಕಾಸಿಮ ಸೌದೆ ಮಾರಿ ಜೀವನ ಮಾಡುತ್ತಿದ್ದ. ಒಂದು ದಿನ ಕಳ್ಳರು ಬಂಡೆಯೊಳಗಿಂದ ಚಿನ್ನಾಭರಣಗಳನ್ನು ತೆಗೆಯುವುದನ್ನು ನೋಡುತ್ತಾನೆ. ಕಳ್ಳರು ಒಂದು ಮಂತ್ರ ಹೇಳುತ್ತಿದ್ದರು. 'ಸೂಸಮ್ಮಾ ಸೂಸಮ್ಮಾ ಬೇಗ ಬಾಗಿಲು ತೆಗಿ'. ಆಗ ಬಂಡೆ ಒಡೆದು ನಿಲ್ಲುತ್ತದೆ. ನಂತರ 'ಸೂಸಮ್ಮಾ ಸೂಸಮ್ಮಾ ಬೇಗ ಬಾಗಿಲು ಮುಚ್ಚು' ಎಂದಾಗ ಬಂಡೆ ಒಡೆದುಕೊಂಡದ್ದು ಮುಚ್ಚಿಕೊಳ್ಳುತ್ತದೆ. ಕಾಸಿಮನೂ ಅದೇ ಮಂತ್ರ ಹೇಳಿ ಆಭರಣಗಳನ್ನು ಮುತ್ತು ರತ್ನಗಳನ್ನು ತಂದು ಶ್ರೀಮಂತ ನಾಗುತ್ತಾನೆ. ಅಣ್ಣನ ಹೆಂಡತಿಗೆ ಕಾಸಿಮನ ಶ್ರೀಮಂತಿಕೆಯು ಮತ್ಸರವನ್ನುಂಟು ಮಾಡುತ್ತದೆ. ನಿಧಿ ಇರುವ ಮತ್ತು ನಿಧಿ ತರುವ ಉಪಾಯವನ್ನು ಕಾಸಿಮ ಅಣ್ಣನಿಗೆ ಹೇಳುತ್ತಾನೆ. ಕಾಸಿಮನ ಅಣ್ಣ ಬಂಡೆಯೊಳಗೆ ಹೋದವ ಅಲ್ಲೇ ಉಳಿಯುತ್ತಾನೆ. ಕಳ್ಳರು ಬಂದು ಆತನನ್ನು ಸಿಗಿದು ಹಾಕುತ್ತಾರೆ. ಸಿಗಿದು ಹಾಕಿದ ಅಣ್ಣನ ಹೆಣವನ್ನು ಕಾಸಿಮ ಸಮಗಾರನಿಂದ ಹೊಲಿಸಿ ಜೀವ ಮಾಡಿಸುತ್ತಾನೆ. ಆ ಗುಹೆಯೊಳಗಿದ್ದ ಆಭರಣಗಳನ್ನು ಸಂಪೂರ್ಣ ಮುಗಿಸುತ್ತಾನೆ. ಬಂಡೆಯೊಳಗಿನ ಸಂಪತ್ತು ಮುಗಿಯಲು ಕಳ್ಳರು ಊರು ತಿರುಗುತ್ತಾರೆ. ಕಾಸಿಮನ ಮನೆಗೆ ಬಂದು ನಿಲ್ಲುತ್ತಾರೆ. ಕಳ್ಳರನ್ನು ಗುರುತಿಸಿ ಸರಕಾರಕ್ಕೆ ಒಪ್ಪಿಸುತ್ತಾನೆ.

[ಕ.ಜ.ಕ. (ವೀ)]

ಗೌ.ಕ.ಜ.ಕ. ೭೦. ಜೋಳದ ಬೀಜದಿಂದ ಬೊಂಬೆಗೆ ಜೀವಕೊಡುವುದು. ಮಕ್ಕಳಿಲ್ಲದ ದಂಪತಿಗಳಿಗೆ ಬೊಂಬೆ ಮಗುವಾಗಿ ಬರುವುದು.

ಒಂದು ಊರಲ್ಲಿ ಅಜ್ಜ ಅಜ್ಜಿ ಇಬ್ಬರಿಗೆ ಮಕ್ಕಳಿರುವುದಿಲ್ಲ. ಒಮ್ಮೆ ಸಂತೆಯಿಂದ ಒಂದು ಸೇರು ಬೆಲ್ಲ ತಂದು ಬೊಂಬೆ ಮಾಡುತ್ತಾರೆ. ಕಣ್ಣಿಗೆ ಜೋಳದ ಬೀಜ ಇಟ್ಟಾಗ ಬೊಂಬೆಗೆ ಜೀವ ಬರುತ್ತದೆ. ಬೊಂಬೆಗೆ ಜೀವ ಬಂದ ಕೂಡಲೇ ಅಜ್ಜಿಯನ್ನು ಬಿಟ್ಟು ದೂರ ಓಡುತ್ತದೆ. ದಾರಿಯಲ್ಲಿ ಊರವರು. ಪ್ರಾಣಿಗಳು ಬೊಂಬೆಗೆ ಎದುರಾಗುತ್ತಾರೆ. ಬೊಂಬೆ ಹೆದರಿ ಓಡಿ ಮಡಿಕೆಗೆ ನುಗ್ಗುತ್ತದೆ. ಮಡಿಕೆ

ಉರುಳಿಕೊಂಡು ಅಜ್ಜ ಅಜ್ಜಿಯ ಮನೆಗೆ ಬರುತ್ತದೆ. ಊರವರಿಗೆ ಬೊಂಬೆಯು ಮಗುವೆಂಬ ವಿಚಾರ ತಿಳಿಯುತ್ತದೆ.

ಗೌ.ಕ.ಜ.ಕ. ೭೧. ಅದ್ಭುತ ಬಾಲಕ: ಸೌದೆಕೊಳ್ಳಿಯೊಳಗೆ ಅದ್ಭುತ ಬಾಲಕ ನಿರುವುದು, ಅವನು ಅನೇಕ ಸಾಧನೆಗಳನ್ನು ಮಾಡುವುದು.

ರಾಜರಾಣಿಗೆ ಮೂವರು ಹೆಣ್ಣು ಮಕ್ಕಳು. ಇಬ್ಬರಿಗೆ ಮದುವೆ ಮಾಡಿ ಒಬ್ಬಳಿಗೆ ಸೌದೆಕೊಳ್ಳಿ ಕೊಡುತ್ತಾರೆ. ಆ ಸೌದೆಕೊಳ್ಳಿಯಲ್ಲಿ ಸುಂದರ ಯುವಕ ಇರುತ್ತಾನೆ. ಆತನಿಗೆ ಮಾಂತ್ರಿಕ ಶಕ್ತಿ ತಿಳಿದಿರುತ್ತದೆ. ಮಂತ್ರದ ಕಲ್ಲಿಂದ ಅರಮನೆ ನಿರ್ಮಾಣ ಮಾಡುತ್ತಾನೆ. ಆತ ಬೇರೊಂದು ದೇಶದ ಅರಸನ ಮಗ. ಅವನನ್ನು ಆ ದೇಶದಿಂದ ಕರೆಸಬೇಕೆಂದರೆ ಬಂಗಾರದ ಬೀಸಣಿಕೆಯನ್ನೂ ಅಲ್ಲಿಗೇ ಕಳುಹಿಸಬೇಕೆಂದರೆ ಬೆಳ್ಳಿಯ ಬೀಸಣಿಕೆಯನ್ನೂ ಬೀಸಬೇಕಂತೆ. ಅರಸನ ಉಳಿದಿಬ್ಬರು ಮಕ್ಕಳಿಗೆ ಕೊನೆಯ ತಂಗಿಯೊಂದಿಗೆ ಮತ್ಸರವಾಗುತ್ತದೆ. ಅಕ್ಕಂದಿರು ತಂಗಿಯ ಗಂಡನನ್ನು ಕೊಲ್ಲುವ ಯೋಚನೆ ಮಾಡುತ್ತಾರೆ. ಕೊಳ್ಳಿಕುಮಾರನಿಗೆ ಉಕ್ಕಿನ ಹುಡಿಯನ್ನು ಮೈಗೆ ಹಾಕಿ ತಿಕ್ಕಿ ಸ್ನಾನ ಮಾಡಿಸುತ್ತಾರೆ. ಅವಂ ವಿಷವೇರಿ ಸಾಯಲು ತಯಾರಾಗುತ್ತಾನೆ.

ಈ ಕಡೆ ಆತನ ಪತ್ನಿ ಬಂಗಾರದ ಬೀಸಣಿಕೆ ಬೀಸಿದರೂ ಬೆಳ್ಳಿಯ ಬೀಸಣಿಕೆ ಬೀಸಿದರೂ ಕೊಳ್ಳಿಕುಮಾರ ಬರುವುದಿಲ್ಲ. ಆಕೆ ಗಂಡು ವೇಷ ಹಾಕಿ ಕೊಳ್ಳಿ ಕುಮಾರನ ಅರಮನೆಗೆ ಹೊರಡುತ್ತಾಳೆ. ಅರ್ಧ ದಾರಿ ತಲುಪಿದಾಗ ಆಯಾಸ ಪರಿಹಾರಕ್ಕೆಂದು ಅಶ್ವತ್ಥ ಕಟ್ಟೆಯಲ್ಲಿ ಕುಳಿತಾಗ ಎರಡು ಗಿಳಿಗಳು ಆ ಮರದಲ್ಲಿ ಮಾತನಾಡುತ್ತವೆ. ಕೊಳ್ಳಿಕುಮಾರನ ಕಾಯಿಲೆಗೆ ಔಷಧಿಯಾಗಿ ಈ ಮರದ ತೊಗಟೆಯೂ ನಮ್ಮಿಬ್ಬರ ಹಿಕ್ಕೆಯೂ ಸೇರಿ ರಸ ಮಾಡಿ ಲೇಪ ಮಾಡಿದರೆ ಆಗ ಗುಣವಾಗುತ್ತಾನೆ ಎಂದು ಹಕ್ಕಿಗಳು ಮಾತನಾಡುತ್ತವೆ. ಆಕೆ ಆ ಪ್ರಕಾರ ಕಾಯಿಲೆ ಗುಣಕ್ಕೆ ಬೇಕಾದ ಔಷಧಿ ತಯಾರಿಸಿಕೊಂಡು ಕೊಳ್ಳಿಕುಮಾರನ ಅರಮನೆಗೆ ಹೋಗುತ್ತಾಳೆ. ಅಲ್ಲಿ ಅರಸ ಮಗನ ಕಾಯಿಲೆ ವಾಸಿಯಾದರೆ, ಔಷಧಿ ಮಾಡಿದಾತನಿಗೆ ಅರ್ಧ ರಾಜ್ಯ ಕೊಡುತ್ತೇನೆಂದು ಡಂಗುರ ಸಾರಿರುತ್ತಾನೆ. ಈಕೆಯ ಔಷಧದಿಂದ ಕೊಳ್ಳಿಕುಮಾರ ಗುಣಮುಖನಾಗುತ್ತಾನೆ.

ಗೌ.ಕ.ಜ.ಕ. ೭೨. ಅಣ್ಣ ತಂಗಿಯನ್ನು ಮದುವೆಯಾಗ ಬಯಸಿದ ಕಥೆ: ನೀರಿಗೆ ಬಿದ್ದ ಇಬ್ಬರೂ ಮೀನಾಗಿ ಪರಿವರ್ತನೆ ಹೊಂದುವುದು.

ಒಬ್ಬ ಅರಸನಿಗೆ ಬೆಳ್ಳಿ ಜುಟ್ಟಿನ ಮಗಳು ಮತ್ತು ಚಿನ್ನದ ಹೊಕ್ಕಳಿನ ಮಗ ಹುಟ್ಟುತ್ತಾರೆ. ಅಣ್ಣ ತಂಗಿ ಗೊಬ್ಬರ ಹೊರುತ್ತಾರೆ. ನಂತರ ಒಟ್ಟಿಗೆ ನದಿಗೆ ಸ್ನಾನಕ್ಕೆ ಹೋಗುತ್ತಾರೆ. ತಂಗಿ ಸ್ವಲ್ಪ ಮೇಲೆ ಸ್ನಾನ ಮಾಡುತ್ತಾಳೆ. ಅಣ್ಣ ಕೆಳಗೆ

ಸ್ನಾನ ಮಾಡುತ್ತಾನೆ. ತಂಗಿಯ ತಲೆಯಿಂದ ಒಂದು ಕೂದಲು ಅಣ್ಣನ ಹೊಕ್ಕಳಿಗೆ ಸುತ್ತಿಕೊಳ್ಳುತ್ತದೆ. ಅಣ್ಣ ಅದೇ ಕೂದಲಿನ ಹುಡುಗಿಯನ್ನು ಮದುವೆಯಾಗ ಬೇಕೆಂದು ಹಟ ಹಿಡಿಯುತ್ತಾನೆ. ಊರಿನ ಯಾವ ಭಾಗಕ್ಕೂ ಹೋದರೂ ತಂಗಿಯನ್ನು ಹೊರತು ಆ ಕೂದಲಿನ ಹೆಣ್ಣು ಸಿಗುವುದಿಲ್ಲ. ಅಣ್ಣನ ಹಟದಿಂದ ತಂಗಿಗೆ ಬೇಸರ ಆಗುತ್ತದೆ. ಹೆಗ್ಗಣವೊಂದು ಅವಳನ್ನು ಸುರಂಗ ಮಾರ್ಗ ಮಾಡಿ ಕಾಡಿಗೆ ಕರೆದೊಯ್ಯುತ್ತದೆ. ಆಕೆ ನೇರಳೆ ಮರ ಹತ್ತಿ ಕುಳಿತುಕೊಳ್ಳುತ್ತಾಳೆ. ಮರದಡಿಯಲ್ಲಿ ಅವಳ ಕಣ್ಣೀರ ಕೆರೆ ಆಗಿರುತ್ತದೆ. ಮನೆಯಿಂದ ಯಾರೇ ಬಂದು ಕರೆದರೂ ಇಳಿಯುವದಿಲ್ಲ. ಕೊನೆಗೆ ಅಣ್ಣನೇ ಬಂದು ಕರೆಯುತ್ತಾನೆ. ಮರವೇರುತ್ತಾನೆ. ಅಣ್ಣ ಕೊಂಬೆಗೆ ಹೋದಾಗ ಅವಳು ಗೆಲ್ಲಿಗೆ ಹೋಗುತ್ತಾಳೆ. ಅಣ್ಣ ಗೆಲ್ಲಿಗೆ ಹೋದಾಗ ಅವಳು ಹಾರಿ ನೀರಿಗೆ ಬಿದ್ದು ಬಾಳೆ ಮೀನಾಗುತ್ತಾಳೆ. ಅಣ್ಣ ಮುಗುಡು ಮೀನಾಗುತ್ತಾನೆ.

ಗೌ.ಕ.ಜ.ಕ. ೭೩. ಅಣ್ಣನು ತಂಗಿಯನ್ನು ಮದುವೆಯಾಗ ಬಯಸಿದ ಕಥೆ : ನೀರಿಗೆ ಬಿದ್ದ ಇಬ್ಬರೂ ಮೀನಾಗಿ ಪರಿವರ್ತನೆ ಹೊಂದುವ ಕಥೆ.

ಒಬ್ಬ ಅರಸನಿಗೆ ಏಳು ಜನ ಗಂಡು ಮಕ್ಕಳು. ಒಬ್ಬಳೇ ಹೆಣ್ಣು ಮಗಳು. ಅವರಲ್ಲಿ ಆರು ಜನರಿಗೆ ಮದುವೆ ಆಗಿರುತ್ತದೆ. ಒಂದು ದಿನ ಕೊನೆಯವ ಒಂದು ಹೂವಿನ ಗಿಡ ನೆಡುತ್ತಾನೆ. ಅದರಲ್ಲಿ ಒಂದು ಹೂವು ಆಗುತ್ತದೆ. ಆ ಹೂವನ್ನು ಕೊಯ್ದು ಮನೆಯ ಬಾಗಿಲ ಮೇಲೆ ಇಡುತ್ತಾನೆ. ಈ ಹೂವನ್ನು ಮುಡಿದವರನ್ನು ಮದುವೆಯಾಗುವುದೆಂದು ಪಣ ತೊಡುತ್ತಾನೆ. ಅದನ್ನು ತಂಗಿ ಮುಡಿಯುತ್ತಾಳೆ. ತಂಗಿಯನ್ನೇ ಮದುವೆಯಾಗುವುದೆಂದು ಹಠ ಮಾಡುತ್ತಾನೆ. ತಂಗಿ ಬೇಸರದಲ್ಲಿ ಕಾಡಿಗೆ ಹೋಗಿ ಮರವೊಂದರಲ್ಲಿ ಕುಳಿತು ಅಳುತ್ತಾಳೆ. ಮರದ ಕೆಳಗೆ ಕಣ್ಣೀರ ಕೆರೆಯಾಗುತ್ತದೆ. ಅದೇ ಮರದ ಕೆಳಗೆ ಒಬ್ಬಳು ರಾಕ್ಷಸಿ ನೀರು ಕುಡಿಯಲು ಬರುತ್ತಾಳೆ. ರಾಕ್ಷಸಿಗೆ ಮುದ್ರೆಯ ಉಂಗುರ ಕೊಟ್ಟು ತನ್ನ ಕಥೆಯನ್ನು ಹೇಳುತ್ತಾಳೆ.

ರಾಕ್ಷಸಿ ನೇರ ಮದುವೆ ಮನೆಗೆ ಬರುತ್ತಾಳೆ. ಮುದ್ರೆ ಉಂಗುರ ತೋರಿಸಿ, ಮದುಮಗಳ (ತಂಗಿಯ) ಹುಡುಕಾಟಕ್ಕೆ ಸಹಕಾರ ಮಾಡುತ್ತಾಳೆ. ಯಾರು ಬಂದು ಕರೆದರೂ ಆಕೆ ಮರದಿಂದ ಇಳಿಯುವುದಿಲ್ಲ. ಕೊನೆಗೆ ಅಣ್ಣನೂ ಮರ ಏರುತ್ತಾನೆ. ಇಬ್ಬರೂ ಕೆರೆಗೆ ಬಿದ್ದು ಮೀನಾಗಿ ಪರಿವರ್ತನೆ ಹೊಂದುತ್ತಾರೆ. [ಕ.ಜ.ಕ. (ಸಂ), ತು.ಜ.ಕ. (ವಿ)]

ಗೌ.ಕ.ಜ.ಕ. ೭೪. ಮಾವ ಸೊಸೆಯನ್ನು ಕೆರೆಗೆ ಬಲಿ ಕೊಡುವುದು.

ಒಬ್ಬ ಧನಿಕ ಒಂದು ಕೆರೆ ತೋಡಿಸುತ್ತಾನೆ. ವಿಧಿಯ ಪ್ರಕಾರ ಧನಿಕನ ಸೊಸೆ ಹೊನ್ನಮ್ಮಳನ್ನು ನೀರಿಗಾಗಿ ಬಲಿಕೊಡಬೇಕಾಗುತ್ತದೆ. ಹೊನ್ನಮ್ಮಳ ಗಂಡ ದಂಡಿಗೆ

ಹೋಗಿರುತ್ತಾನೆ. ಹೆಂಡತಿಯನ್ನು ಬಲಿಕೊಡುವಾಗ ಗಂಡನಿಗೆ ಸ್ವಪ್ನ ಬೀಳುತ್ತದೆ. ಗಂಡ ದಂಡಿನಿಂದ ಬರುತ್ತಾನೆ. ಹೊನ್ನಮ್ಮ ಮಗುವನ್ನು ತೊಟ್ಟಿಲಲ್ಲಿ ಹಾಕಿ ಮೊಲೆಯುಣ್ಣಿಸಿ ಆ ಕೋಣೆಗೆ ಬಾಗಿಲು ಹಾಕುತ್ತಾಳೆ. ಬರುವಾಗ ಗಂಡನಲ್ಲದೆ ಬೇರಾರಿಗೂ ಬಾಗಿಲು ತೆಗೆಯಲು ಆಗದಿರಲಿ ಎಂದು ಸತ್ಯದ ಮಾತು ಹೇಳಿ ಕೆರೆಗೆ ಇಳಿಯುತ್ತಾಳೆ. ಗಂಡ ದಂಡಿನಿಂದ ಬರುವಾಗ ಹೆಂಡತಿ ಕೆರೆಗೆ ಇಳಿದು ಹೋಗಿದ್ದಾಳೆ. ಗಂಡನೂ ಕೆರೆಗೆ ಇಳಿಯುತ್ತಾನೆ ಕೆರೆಯೊಳಗಿಂದ ಕಂಚಿನ ಕೊಡ ಹಿಡಿದುಕೊಂಡು ಬರುತ್ತಾನೆ. ತಾಯಿ–ತಂದೆಯನ್ನು ಮನೆ ಒಳಗೆ ಹಾಕಿ ಬೆಂಕಿ ಕೊಡುತ್ತಾನೆ. ತಂಗಿ ಉಳಿಯುತ್ತಾಳೆ. ಅಣ್ಣ ಮತ್ತು ತಂಗಿ ಇಬ್ಬರೂ ಕೆರೆಗೆ ಸೇರುತ್ತಾರೆ.

ಗೌ.ಕ.ಜ.ಕ. ೭೫ ಮಗುವನ್ನು ಬಲಿಕೊಡಬಯಸಿದ ತಾಯಿ.

ಒಬ್ಬ ಅರಸನಿಗೆ ಏಳು ಜನ ಮಕ್ಕಳು. ಅರಸನಿಗೆ ಬೇರೆ ಊರಿಗೆ ಹೋಗುವುದಾದರೆ ಹೊಳೆದಾಟಬೇಕಾಗುತ್ತದೆ. ಅದಕ್ಕಾಗಿ ಒಂದು ದೋಣಿ ಮಾಡಿಸುವ ಕೆಲಸಕ್ಕೆ ಹೊರಡುತ್ತಾನೆ. ಯಾವ ಕಾಡಲ್ಲಿ ಹುಡುಕಿದರೂ ದೋಣಿಗಾಗುವ ಮರ ಸಿಗುವುದಿಲ್ಲ. ಆ ದಿನ ಮರ ಹುಡುಕಲು ಹೋದವರು ರಾತ್ರಿ ಕಾಡಲ್ಲೇ ನಿಲ್ಲುತ್ತಾರೆ. ಬೆಳಗಾದಾಗ ಅವರು ಇರುವಲ್ಲೇ ದೊಡ್ಡ ಮರವೊಂದು ಕಾಣಿಸುತ್ತದೆ. ಆ ಮರವನ್ನು ಶುಭ ಮುಹೂರ್ತದಲ್ಲಿ ಕಡಿಯುವುದೆಂದು ನಿಶ್ಚಯಿಸುತ್ತಾರೆ. ಆ ಮರದಲ್ಲಿ 'ಜಡೆದಾರಿ ದೇವಿ' ನೆಲೆಯಾಗಿತ್ತು. ಆ ದೇವಿ ಮರ ಕಡಿಯುವುದನ್ನು ತಡೆದು, ನನಗೆ ನೆಲೆ ಬೇಕೆಂದು ಅರಸನೊಂದಿಗೆ ಕೇಳಿತು. ಅರಸನ ಮಗುವೊಂದನ್ನು ಬಿಂದುವಾಗಿ ಕೊಡಬೇಕೆಂದು ದೇವಿ ಕೇಳಿಕೊಂಡಿತು. ಆ ರೀತಿಯಾಗಿ ಒಪ್ಪಿ, ಮರವನ್ನು ಕಡಿದರು. ದೋಣಿ ಮಾಡಿ ನೀರಿಗೆ ಎಳೆದರೆ ದೋಣಿಯನ್ನು ನೀರಿನವರೆಗೆ ತರಲು ಆಗುವುದಿಲ್ಲ. ಮರುದಿನ ಊರಿಗಾಗಿ ತನ್ನ ಮಗುವೊಂದನ್ನು ಬಲಿಕೊಡಲು ಅರಸ ಸಿದ್ಧನಾಗುತ್ತಾನೆ. ಅರಸನ ಪತ್ನಿ ಬಲಿ ಕೊಡುವುದಕ್ಕೆ ಒಪ್ಪದೆ, ಮಕ್ಕಳೊಂದಿಗೆ ತವರಿಗೆ ಹೋಗುತ್ತಾಳೆ. ಅರಸ ಇದೇ ಚಿಂತೆಯಲ್ಲಿ ಹಾಸಿಗೆ ಹಿಡಿಯುತ್ತಾನೆ. ಅರಸನ ತಂಗಿಗೆ ಅಣ್ಣನ ಕಷ್ಟ ತಿಳಿಯುತ್ತದೆ. ಆಕೆ ತನ್ನ ಮಗುವನ್ನು ಬಲಿಕೊಡಲು ಒಪ್ಪುತ್ತಾಳೆ. ಜನ ಎಲ್ಲಾ ಸೇರಿ ದೇವಿಗೆ ಮಗುವಿನ ತಲೆ ಅರ್ಪಿಸುವ ಸಮಯಕ್ಕೆ ದಿವ್ಯಶಕ್ತಿಯಿಂದ ಆ ಕಾರ್ಯ ನಿಲ್ಲುತ್ತದೆ. ದೋಣಿ ನೀರಿಗೆ ಬರುತ್ತದೆ. ಅಂದಿನಿಂದ ಅರಸನ ತಂಗಿಯ ಮಕ್ಕಳಿಗೆ ಆಸ್ತಿ ಸೇರುತ್ತದೆ.

ಗೌ.ಕ.ಜ.ಕ. ೭೬. ಜಾಣ ಹೆಂಡತಿ : ತನ್ನ ಜಾಣತನದಿಂದ ಗಂಡನ ಹೊಡೆತದಿಂದ ತಪ್ಪಿಸಿಕೊಳ್ಳುವುದು.

ಒಂದು ಊರಲ್ಲಿ ಒಬ್ಬ ಶ್ಯಾನುಭಾಗನಿದ್ದನು. ಉಗ್ರಾಣಿ ಪಟೇಲರೊಂದಿಗೆ ಊರು ತಿರುಗಿ ಬಂದ ಅವನು ಹೆಂಡತಿಗೆ ಹೊಡೆಯುತ್ತಿದ್ದನು. ಕಾರಣವೇ ಇಲ್ಲದೇ ಹೊಡೆಯುವುದಕ್ಕೆ ಆಕೆಯ ತಾಯಿ ಒಂದು ದಿನ ಉಪಾಯ ಹೇಳುತ್ತಾಳೆ. ಆ ದಿನ

ಹೊಡೆಯುವಾಗ ಗುಡ್ಡೆಯಿಂದ ಗುಡ್ಡೆಗೆ ಅಡ್ಡ ಉಂಟೆಂದು ಹೇಳುತ್ತಾಳೆ. ಆ ಮಾತು ಸತ್ಯವೇ ಎಂದು ಪರೀಕ್ಷೆ ಮಾಡಲು ಗಂಡ ಊರು ಮೇಲೆ ಹೋಗುತ್ತಾನೆ. ಹಾಗೆ ಹೋಗುವಾಗ ಒಬ್ಬ ಎರಡು ಆನೆಗಳಿಗೆ ನೊಗ ಕಟ್ಟಿ ಬಂಡೆ ಕಲ್ಲನ್ನು ಉಳು ತ್ತಿದ್ದಾನೆ. ಆತ ಉಳುವುದನ್ನು ನಿಲ್ಲಿಸಿ ನೀ ಉಳುತ್ತಿರು. ನಾನು ತಿಂಡಿ ತಿಂದು ಬರುತ್ತೇನೆಂದು ಹೊರಡುತ್ತಾನೆ. ಆತ ಬರುವವರೆಗೂ ಇವನಿಗೆ ನೇಗಿಲು ಎತ್ತಲು ಆಗುವುದಿಲ್ಲ. ಆತ ಕೊಬ್ಬರಿ ಕಾಯನ್ನು ತಿನ್ನಲು ಇವನಿಗೂ ಸ್ವಲ್ಪ ತರುತ್ತಾನೆ. ಇವನಿಗೆ ಅದನ್ನು ತಿನ್ನಲೂ ಆಗುವುದಿಲ್ಲ. ಇನ್ನೊಂದು ಕಡೆ ಹೋಗುವಾಗ ಒಬ್ಬ ಎರಡು ಆನೆಗಳನ್ನು ಕಟ್ಟಿಕೊಂಡು ಗಾಳ ಹಾಕುತ್ತಿದ್ದ. ಅಲ್ಲಿಗೆ ಒಂದು ಗಿಡುಗ ಬಂದು ಆ ಗಾಳದವನನ್ನು ಮತ್ತು ಆನೆಯನ್ನು ಕಚ್ಚಿಕೊಂಡು ಒಂದು ಆಲದ ಮರದಲ್ಲಿ ಕುಳಿತುಕೊಳ್ಳುತ್ತದೆ. ಆಲದ ಮರ ಮುರಿಯುವ ಹಾಗಾಗುತ್ತದೆ. ಆ ಮರದ ಬುಡದಲ್ಲಿ ಅರಸನ ಮನೆ ಇತ್ತು. ಅರಸನ ಮಗಳು ಒಂದು 'ಸ್ಟ್ಯಾಟ' ತೆಗೆದು ಮರ ಮುರಿಯದಂತೆ ಆಧಾರ ಕೊಡುತ್ತಾಳೆ. ಅಲ್ಲಿಂದ ಶ್ಯಾನುಭಾಗ ಮನೆಗೆ ಬಂದು ಹೆಂಡತಿಯೊಂದಿಗೆ ಸುಖವಾಗಿರುತ್ತಾನೆ. [ಕ.ಜ.ಕ. (ಸಂ)]

ಗೌ.ಕ.ಜ.ಕ. ೭೭. ಜಾಣ ಮಗಳು : ಅರಸನ ಮಗನನ್ನು ಸೋಲಿಸುವುದು.

ಒಬ್ಬ ಅರಸನಿಗೆ ಕೆಲಸದ ಅಜ್ಜನಿರುತ್ತಾನೆ. ಅರಸನ ಮಗ ಮತ್ತು ಅಜ್ಜನ ಮಗಳು ಒಟ್ಟಿಗೆ ವಿದ್ಯಾಭ್ಯಾಸ ಮಾಡುತ್ತಾರೆ. ಅಜ್ಜನ ಮಗಳು ಅರಸನ ಮಗನಿಗಿಂತ ಹೆಚ್ಚು ಬುದ್ಧಿವಂತೆ ಮತ್ತು ಚುರುಕು. ಅರಸನ ಮಗನಿಗೆ ಆಕೆಯ ಮೇಲೆ ಹಟ ಬೀಳುತ್ತದೆ. (ನೋಡಿ ಈ ಪತ್ಯದ ಮುಂದಿನ ವಿವರಣೆಗೆ ಗೌ.ಕ.ಜ.ಕ. ೭೮)

[ಕ.ಜ.ಕ. (ವೀ), ತು.ಜ.ಕ. (ವಿ)]

ಗೌ.ಕ.ಜ.ಕ. ೭೮. ಜಾಣ ಸೊಸೆ: ಜಾಣ ಸೊಸೆ ಮಡಕೆಯೊಳಗೆ ಕುಂಬಳಕಾಯಿ ಬೆಳೆಸುವುದು ಮತ್ತು ಪ್ರತಿ ಸವಾಲು ಹಾಕುವುದು.

ಒಬ್ಬ ಬಡವನಿಗೆ ಏಳು ಜನ ಗಂಡು ಮಕ್ಕಳು. ಅವರಿಗೆ ಮದುವೆಯಾಗು ತ್ತದೆ. ಕೊನೆಯ ಮಗನ ಹೆಂಡತಿ ತುಂಬಾ ಚುರುಕಾಗಿರುತ್ತಾಳೆ. ಒಮ್ಮೆ ಆ ಊರಿನ ರಾಜ ಬಡವನೊಂದಿಗೆ ಪಂಥ ಹೂಡುತ್ತಾನೆ. ಗಡಿಗೆ ಒಳಗೆ ಕುಂಬಳಕಾಯಿ ತರಬೇಕು. ಏಳು ದಿನದ ಒಳಗಡೆ ತರಲಿಲ್ಲವಾದರೆ ನಿನ್ನ ತಲೆ ತೆಗೆಯಲಾಗುತ್ತದೆ. ಬಡವನ ಸೊಸೆ ಅದೇ ದಿನ ಮಡಿಕೆಯೊಳಗೆ ಕುಂಬಳಕಾಯಿ ಮಿಡಿ ಹಾಕುತ್ತಾಳೆ. ಒಂದು ವಾರ ಕಳೆದಾಗ ಕುಂಬಳಕಾಯಿ ಮಡಿಕೆ ಒಳಗೆ ಆಗುತ್ತದೆ. ರಾಜ ಸೋಲು ತ್ತಾನೆ.

ಮರುದಿನ ಎತ್ತು ಹಾಕಿದ ಕರು ತರಲು ಆಜ್ಞೆ ಮಾಡುತ್ತಾನೆ. ಸೊಸೆ ಮಾವನಿಗೆ ಉಪಾಯ ಹೇಳುತ್ತಾಳೆ. ನೀವು ನಾಳೆ ಹಲಸಿನ ಮರದ ಬುಡದಲ್ಲಿ

ಕುಳಿತುಕೊಳ್ಳಿ. ನಾನು ರಾಜನ ಮನೆಗೆ ಹೋಗುತ್ತೇನೆ. ಮರುದಿನ ಆಕೆ ಅರಮನೆಗೆ ಹೋಗುವಾಗ ಅರ್ಧ ದಾರಿಯಲ್ಲಿ ರಾಜ ಸಿಗುತ್ತಾನೆ. ಎಲ್ಲಿಗೆ ಹೋಗುವುದು. ನನ್ನ ಮಾವ ಮೈನೆರೆದಿದ್ದಾರೆ. ತಲೆಗೆ ನೀರು ಹಾಕಲು ಜನ ಕರಿಸಬೇಕು. ಹಾಗಾಗಿ ಹೋಗುವುದು. ನಿನಗೆ ಹುಚ್ಚು. ಎಲ್ಲಾದರೂ ಗಂಡಸರು ಮೈನೆರೆಯುವುದುಂಟೇ. ನೀವೆ ಹೇಳಿರುವಿರಿ. ಎತ್ತು ಹಾಕಿದ ಕರು ಬೇಕಂತೆ. ಅದು ಹೌದಾದರೆ ನನ್ನ ಮಾವ ಮೈನೆರೆದಿದ್ದೂ ಸರಿಯಾಗುತ್ತದೆ. ರಾಜ ಸೋಲುತ್ತಾನೆ. ಜಾಣ ಸೊಸೆಯಿಂದಾಗಿ ಬಡವನ ತಲೆ ಉಳಿಯುತ್ತದೆ.

ಗೌ.ಕ.ಜ.ಕ. ೭೯. ನಂಬಿಕಸ್ಥ ಹೆಂಡತಿ ಗಂಡನನ್ನು ಉಳಿಸುವುದು.

ಒಬ್ಬಾತ ಮೈನೆರೆಯದ ಹುಡುಗಿಯನ್ನು ಮದುವೆಯಾಗುತ್ತಾನೆ. ಕೆಲವು ದಿನ ಕಳೆದು ಆತ ಗಟ್ಟದ ಮೇಲೆ ಕೆಲಸಕ್ಕೆ ಹೋಗುತ್ತಾನೆ. ಆತ ಅಲ್ಲಿ ಒಂದು ತುಳಸಿ ಗಿಡ ನೆಡುತ್ತಾನೆ. ಈ ತುಳಸಿ ಗಿಡಕ್ಕೆ ಪ್ರತಿನಿತ್ಯ ನೀರು ಹಾಕುತ್ತಿರುತ್ತಾನೆ. ಒಂದು ದಿನ ತುಳಸಿ ಗಿಡ ಬಾಡಿ ಹೋಗುತ್ತದೆ. ಆತ ಧನಿಕನೊಂದಿಗೆ ರಜೆ ಕೇಳಿ ಊರಿಗೆ ಹೊರಡುತ್ತಾನೆ. ಯಾಕೆ ಊರಿಗೆ ಹೋಗುವುದೆಂದು ಧನಿಕ ಕೇಳುತ್ತಾನೆ. ಆಗ 'ನನ್ನ ಹೆಂಡತಿ ಋತುಮತಿಯಾಗಿದ್ದಾಳೆ ಎಂದು ತುಳಸಿ ಗಿಡವು ಸೂಚಿಸಿತು. ಹಾಗಾಗಿ ಹೋಗುತ್ತೇನೆ' ಎಂದು ಹೇಳುತ್ತಾನೆ. ಧನಿಕನಿಗೆ ಈತನ ಹೆಂಡತಿ ಪತಿವ್ರತೆ ಯೆಂದು ತಿಳಿದು ಆಕೆಯನ್ನು ಗಟ್ಟದ ಮೇಲೆ ಹೊತ್ತು ತರುವ ಮನಸ್ಸಾಗುತ್ತದೆ. ಧನಿಕ ಹತ್ತು ಜನ ಆಳುಗಳನ್ನು ಆತನ ಊರಿಗೆ ಕಳುಹಿಸುತ್ತಾನೆ. ಅವರು ಪತಿ ವ್ರತೆಯ ಮನೆಯಲ್ಲಿ ನಿಲ್ಲುತ್ತಾರೆ. ಆಕೆಗೆ ಅವರ ಕುತಂತ್ರ ತಿಳಿಯುತ್ತದೆ. ಆಕೆ ಅವರನ್ನು ಬಹಳ ಸುಲಭದಿಂದ ಮೋಸಗೊಳಿಸುತ್ತಾಳೆ. [ಕ.ಜಾ.ಕ. (ವೀ)]

ಗೌ.ಕ.ಜ.ಕ. ೮೦. ನಂಬಲರ್ಹ ಸ್ನೇಹಿತರು.

ಒಂದು ಊರಿನಲ್ಲಿ ತಾಯಿ ಮತ್ತು ಮಗ ಇಬ್ಬರು ಇರುತ್ತಾರೆ. ಮಗನಿಗೆ ಊರೆಲ್ಲಾ ಸ್ನೇಹಿತರು. ಒಂದು ದಿನ ತಾಯಿಗೆ ಮಗನ ಮಿತ್ರರನ್ನೆಲ್ಲಾ ಪರೀಕ್ಷೆ ಮಾಡುವ ಯೋಚನೆಯಾಗುತ್ತದೆ. ಮಗನೊಂದಿಗೆ ಆಕೆ ಕೆಲವು ಪ್ರಶ್ನೆ ಕೇಳುತ್ತಾಳೆ, ನಿನ್ನ ಸ್ನೇಹಿತರಿಂದ ಏನು ಲಾಭ ? ನಿನಗಾಗಿ ಅವರು ಏನು ಮಾಡಿಯಾರು ? ಎಂಬು ದಾಗಿ. ಒಂದು ದಿನ ಎಲ್ಲರನ್ನೂ ಪರೀಕ್ಷೆ ಮಾಡೋಣ. ಆ ದಿನ ತಾಯಿ ಸತ್ತಳೆಂದು ಎಲ್ಲ ಮಿತ್ರರಿಗೂ ಹೇಳಬೇಕು. ನನ್ನ ಹೆಣದ ರೂಪ ಮಾಡಿ ಚಾವಡಿಯಲ್ಲಿ ಬಿಳಿ ಬಟ್ಟೆ ಹೊದಿಸಬೇಕು. ಆ ಬಿಳಿ ಬಟ್ಟೆಯಡಿಯಲ್ಲಿ ಅವಲಕ್ಕಿ, ಬೆಲ್ಲ, ತೆಂಗಿನಕಾಯಿ ಮಿಶ್ರ ಮಾಡಿಡಬೇಕು. ಎಲ್ಲ ಮಿತ್ರರೂ ಬಂದ ಮೇಲೆ ತಾಯಿಯ ಹೆಣವನ್ನು ಸುಡುವುದು ಬೇಡ. ಹೊಂಡಕ್ಕೆ ಹಾಕಿ ಹುಗಿಯುವುದು ಬೇಡ. ಎಲ್ಲರೂ ಕೂಡಿ ಕೊಂಡು ತಿನ್ನೋಣ ಎನ್ನಬೇಕು. ಆಗ ನಿನ್ನ ಪ್ರಾಣ ಸ್ನೇಹಿತ ಯಾರೆಂದು ಗುರುತು

ಹಚ್ಚಬಹುದು. ತಾಯಿಯ ಉಪಾಯದಂತೆ ಎಲ್ಲಾ ತಯಾರಿ ಆಗುತ್ತದೆ. ಮಿತ್ರರೂ ಬರುತ್ತಾರೆ. ತಿನ್ನಲು ಹೇಳುತ್ತಾನೆ. ಮಿತ್ರರೆಲ್ಲರೂ ಕೋಪಗೊಂಡರು. ಕೆಲವರು ಹೊಡೆಯಲು ಬಂದರು. ಒಬ್ಬ ಮಾತ್ರ ಹಾಗೇ ಕುಳಿತಿರುತ್ತಾನೆ. ಮತ್ತೆಲ್ಲರೂ ಹೊರಟು ಹೋದರು. ಉಳಿದವ ಮಿತ್ರನನ್ನು ಕೂಡಿಕೊಂಡು ತಿನ್ನಲು ಪ್ರಾರಂಭಿಸುತ್ತಾನೆ. ಆಗ ತಾಯಿ ಹೇಳುತ್ತಾಳೆ. ಇವನೇ ನಿನ್ನ ಪ್ರಾಣ ಸ್ನೇಹಿತ. ಹಾಗಾಗಿ ಒಬ್ಬನಿಗೆ ಒಬ್ಬನೇ ಮಿತ್ರ, ಒಬ್ಬಳೇ ಹೆಂಡತಿ ಎಂದು ಹೇಳುತ್ತಾಳೆ.

ಗೌ.ಕ.ಜ.ಕ. ೮೧. ಕ್ರೂರ ಅತ್ತಿಗೆಯಿಂದ ಹೊರಹಾಕಲ್ಪಟ್ಟ ತಂಗಿಗೆ ಪ್ರಾಣಿಗಳು ಸಹಾಯ ಮಾಡುವುದು.

ಏಳು ಜನ ಸಹೋದರರಿಗೆ ಒಬ್ಬಳೇ ತಂಗಿ. ತಂಗಿಗೊಂದು ಮುತ್ತು ತರಲು ಸಹೋದರರು ಹೊರಡುತ್ತಾರೆ. ತಂಗಿಯನ್ನು ಅರಮನೆಯಿಂದ ಹೊರ ಹೋಗಲು ಬಿಡಬಾರದು. ಕಷ್ಟದ ಕೆಲಸ ಮಾಡಿಸಬಾರದು ಎಂದು ಹೇಳಿರುತ್ತಾರೆ. ಒಂದು ದಿನ ತಂಗಿ ಅರಮನೆಯಿಂದ ಹೊರ ಬಂದು ತಂಗಳು ಗಂಜಿ ಕೇಳುತ್ತಾಳೆ. ಆಕೆಯೊಂದಿಗೆ ಹಗ್ಗವಿಲ್ಲದೆ ಸೊಪ್ಪಿನ ಕಟ್ಟು ತರಲು ಒಂದು ಮುಡಿ ರಾಗಿ ಮತ್ತು ಸಾಸಿವೆಯನ್ನು ಬೇರ್ಪಡಿಸಲು, ತೂತು ಹಂಡೆಗೆ ನೀರು ತುಂಬಿಸಲು ಹೇಳುತ್ತಾರೆ. ಕೇರೆ ಹಾವು ಸೊಪ್ಪು ಕಟ್ಟಕ್ಕೆ ಹಗ್ಗವಾಗಿ, ಇರುವೆಗಳು ಸಾಸಿವೆ–ರಾಗಿ ಬೇರ್ಪಡಿಸಲು. ಕಪ್ಪೆಯೊಂದು ತೂತು ಹಂಡೆಗೆ ನೀರು ತುಂಬಲು ಸಹಕರಿಸುತ್ತವೆ. ಆದರೂ ನಾದಿನಿಗೆ ತಂಗಳು ಗಂಜಿ ಕೊಡುವದಿಲ್ಲ. ಬೆಳ್ಳಿ ಕುದುರೆ, ಅರಸು ಕುಮಾರನೊಂದಿಗೆ ಬಂದರೆ ಮನೆಗೆ ಕರೆಸಿಕೊಳ್ಳುತ್ತೇವೆ ಎನ್ನುತ್ತಾರೆ. ಅವಳು ಬೆಳ್ಳಿಕುದುರೆಯ ಅರಸು ಕುಮಾರನನ್ನು ಹುಡುಕಿಕೊಂಡು ಹೋಗುತ್ತಾಳೆ. ಸ್ವಲ್ಪ ದೂರ ಹೋದಾಗ ಬೆಳ್ಳಿ ಕುದುರೆಯ ಅರಸುಕುಮಾರ ಸಿಗುತ್ತಾನೆ.

ಅರಮನೆಯಲ್ಲಿ ತಂಗಿ ಸತ್ತಳೆಂದು ಕಾಟ (ಹೆಣ ಸುಡುವುದಕ್ಕೆ ಮಾಡುವ ಸೌದೆ ರಾಶಿ) ಹೂಡುತ್ತಾರೆ. ಅಣ್ಣಂದಿರು ಬಂದು ತಲುಪಿದಾಗ ತಂಗಿಯೂ ಬೆಳ್ಳಿ ಕುದುರೆಯ ಅರಸುಕುಮಾರನೊಂದಿಗೆ ಬರುತ್ತಾಳೆ. ನಿಜ ಸಂಗತಿ ಏನು ನಡೆದಿದೆಯೆಂದು ತಿಳಿದು ಏಳು ಜನ ಅತ್ತಿಗೆಯರನ್ನೂ ಒಂದೇ ಕಾಟಕ್ಕೆ ಹಾಕಿ ಸುಡುತ್ತಾರೆ.

[ಕ.ಜ.ಕ. (ಸಂ)]

ಗೌ.ಕ.ಜ ಕ. ೮೨. ೧. ಒಬ್ಬರಿಗಿಂತ ಇಬ್ಬರು ಮೇಲು.

೨. ಊಟವಾದ ನಂತರ ಕೂತು ಮಲಗಬೇಕು.

೩. ಕೂತು ಉಣ್ಣುವುದಕ್ಕಿಂತ ಕೂಲಿ ಕೆಲಸ ಮೇಲು.

ಈ ಮೂರೂ ಒಗಟು ಕಥೆಯಲ್ಲಿ ಮೂರು ಅರ್ಥ ಹೊರಡುವುದು.

ಮೂವರು ಪ್ರಯಾಣ ಮಾಡುವಾಗ ದಾರಿ ಸಾಗಲು ಕಥೆ ಹೇಳುತ್ತಾರೆ. ಕಥೆ ಹೇಳುವಾತನಿಗೆ ಉಳಿದವರಿಬ್ಬರು ಒಂದು ಕಥೆಗೆ ನೂರು ರೂಪಾಯಿ ಕೊಡುತ್ತೇವೆಂದು ಹೇಳುತ್ತಾರೆ. ಆತ ಮೂರು ಕಥೆ ಹೇಳುತ್ತಾನೆ. ಮೂನ್ನೂರು ರೂಪಾಯಿ ಕೊಡುವ ಬಗ್ಗೆ ಚರ್ಚೆಯಾಗಿ ಅದು ಕಥೆಯಲ್ಲ ಎಂಬ ದೂರನ್ನು ಅರಸನಿಗೆ ಕೊಡುತ್ತಾರೆ. ಅರಸ ಕಥೆ ಹೇಳಿದಾತನಿಗೆ ಮುನ್ನೂರು ರೂಪಾಯಿ ಕೊಡುತ್ತಾನೆ.

ಮರುದಿನ ಮೂರೂ ಕಥೆಗಳಿಗೆ ಅರ್ಥ ಹುಡುಕಲು ಅರಸ ಅರಮನೆ ಬಿಟ್ಟು ಹೊರಡುತ್ತಾನೆ. ಮೊದಲ ಕಥೆ, 'ಒಬ್ಬರಿಗಿಂತ ಇಬ್ಬರು ಮೇಲು'. ದಾರಿಯಲ್ಲಿ ಹೋಗುತ್ತಿರುವಾಗ ಒಂದು ಏಡಿ ಸಿಗುತ್ತದೆ. ಒಬ್ಬರಿಗಿಂತ ಇಬ್ಬರು ಮೇಲು ಎಂಬುದನ್ನು ನೆನಪಿಸಿಕೊಂಡು ಆ ಏಡಿಯನ್ನು ಹಿಡಿದುಕೊಳ್ಳುತ್ತಾನೆ. ಒಂದು ಕಡೆ ಮಲವಿಸರ್ಜನೆಗೆ ಕುಳಿತಾಗ ಸರ್ಪವೊಂದು ಕಚ್ಚಲು ಬರುತ್ತದೆ. ಏಡಿ ಅದರ ಕುತ್ತಿಗೆಯನ್ನು ತುಂಡು ಮಾಡುತ್ತದೆ. ಮೊದಲ ಕಥೆಯಲ್ಲಿ ಅರಸನ ಪ್ರಾಣ ಉಳಿಯುತ್ತದೆ.

ಎರಡನೇ ಕಥೆ, 'ಊಟವಾದ ನಂತರ ಕೂತು ಮಲಗಬೇಕು'. ಸ್ವಲ್ಪ ಮುಂದೆ ಹೋದಾಗ ಸೂಳೆಯೊಬ್ಬಳ ಮನೆ ಸಿಗುತ್ತದೆ. ಆ ದಿನ ರಾತ್ರಿ ಸೂಳೆಯ ಮನೆಯಲ್ಲಿ ನಿಲ್ಲುತ್ತಾನೆ. ರಾತ್ರಿ ಮಲಗುವ ಮೊದಲು ಕುಳಿತುಕೊಂಡಾಗ, ಸೂಳೆ ಮೂಗಿನಿಂದ ಸರ್ಪವೊಂದು ಹೊರಬಂದು ದಿಂಬಿಗೆ ಕಚ್ಚುತ್ತದೆ. ಸರ್ಪವನ್ನು ಕೊಂದುಹಾಕುತ್ತಾನೆ. ಎರಡನೆ ದಿನವೂ ಆತನ ಪ್ರಾಣ ಉಳಿಯುತ್ತದೆ.

ಮೂರನೆಯ ಕಥೆ, 'ಕೂತು ಉಣ್ಣುವುದಕ್ಕಿಂತ ಕೂಲಿ ಕೆಲಸ ಮೇಲು'. ಒಂದೆರಡು ದಿನ ಸೂಳೆ ಮನೆಯಲ್ಲಿದ್ದು ಬೇಸರ ಆಗುತ್ತದೆ. ಎಲ್ಲಿಗಾದರೂ ಕೂಲಿ ಕೆಲಸಕ್ಕೆ ಹೋಗಬೇಕೆಂದು ಸಂಜೆ ಹೊತ್ತಿಗೆ ಯೋಚಿಸುವಾಗ, ಕೆಲವರು ತೋಟದ ಕೆಲಸ ಮುಗಿಸಿ ಬರುತ್ತಿದ್ದರು. ಅವರೊಂದಿಗೆ ನಾನೂ ನಿಮ್ಮೊಂದಿಗೆ ನಾಳೆ ಕೆಲಸಕ್ಕೆ ಬರುತ್ತೇನೆ. ಧನಿಯವರೊಂದಿಗೆ ಕೇಳಿ ಬನ್ನಿ ಎನ್ನುತ್ತಾನೆ. ಮರುದಿನ ಆತನೂ ಕೆಲಸಕ್ಕೆ ಹೋಗುತ್ತಾನೆ. ಧನಿಕ ಹೊಸಬ. ಕೆಲಸದವನ ಸುಖ ಸಮಾಚಾರವನ್ನು ವಿಚಾರಿಸುತ್ತಾನೆ. ಮಧ್ಯಾಹ್ನದ ಊಟಕ್ಕೆ ಏನು ವ್ಯವಸ್ಥೆ ಮಾಡಿರುವಿ ಎಂದು ಧನಿಕ ಪ್ರಶ್ನಿಸುತ್ತಾನೆ. ಸೂಳೆಯೊಂದಿಗೆ ತೋಟಕ್ಕೆ ಗಂಜಿ ತರಲು ಹೇಳಿರುವೆನು ಎನ್ನುತ್ತಾನೆ. ಧನಿಕ ಆತನೊಂದಿಗೆ ಸವಾಲು ಹಾಕುತ್ತಾನೆ. ಸೂಳೆ ಗಂಜಿ ತರಲಿಕ್ಕಿಲ್ಲ. ಒಂದು ವೇಳೆ ತಂದರೆ ನನ್ನ ಆಸ್ತಿ, ಜಮೀನನ್ನು ನಿನಗೆ ಕೊಡುತ್ತೇನೆ. ಇಲ್ಲವಾದರೆ ನೀನು ಸಾಯುವವರೆಗೆ ನಮ್ಮ ಮನೆಯ ಕೆಲಸದ ಆಳಾಗಿರಬೇಕು. ಮಾತಿಗೆ ಮಾತು ಬೆಳೆದು ಕರಾರು ಮಾಡಿಕೊಳ್ಳುತ್ತಾರೆ. ಮಧ್ಯಾಹ್ನಕ್ಕೆ ಸೂಳೆ ಬುತ್ತಿ ತರುತ್ತಾಳೆ. ಧನಿಕ ಕೆಲಸದಾತನಿಗೆ ತನ್ನ ಎಲ್ಲಾ ಸರ್ವಸ್ವವನ್ನೂ ಬಿಟ್ಟುಕೊಡು

ತ್ತಾನೆ. ಅಲ್ಲಿಗೆ ಅರಸನಿಗೆ ಮೂರನೆಯ ಕಥೆಗೂ ಅರ್ಥ ಸಿಗುತ್ತದೆ. ಧನಿಕನಿಗೆ ತಾನು ಯಾರೆಂದು ತಿಳಿಸಿ, ಯಾವುದೇ ಒಂದು ಮಾತಿಗೆ ಒಂದು ಅರ್ಥವಿದೆ ಎನ್ನುತ್ತಾನೆ. [ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೮೩. ಭವಿಷ್ಯ ಹೇಳುವುದು : ಬ್ರಾಹ್ಮಣನೊಂದಿಗೆ ಹೊಲತಿಯ ಮದುವೆ.

ಒಬ್ಬ ಬ್ರಾಹ್ಮಣ ಊರು ತಿರುಗುವಾಗ ಬ್ರಹ್ಮ ಗಂಟು ಹಾಕುವವ ಸಿಗುತ್ತಾನೆ. ಆತ ಬ್ರಾಹ್ಮಣನಿಗೆ ಹೊಲತಿಯೊಂದಿಗೆ ಮದುವೆಯಾಗುತ್ತದೆಂದು ಭವಿಷ್ಯ ಹೇಳುತ್ತಾನೆ. ಆ ಬ್ರಾಹ್ಮಣನ ಮನೆಯಲ್ಲಿ ಕೆಲಸಕ್ಕಿದ್ದ ಹೊಲತಿಗೆ ಹೆಣ್ಣು ಮಗು ಹುಟ್ಟುತ್ತದೆ. ಅದನ್ನು ಬಿದಿರಿನ ತೊಟ್ಟಿಲಲ್ಲಿ ಹಾಕಿ ನದಿಯಲ್ಲಿ ತೇಲಿ ಬಿಡುತ್ತಾನೆ. ಅದು ಒಬ್ಬ ಬ್ರಾಹ್ಮಣನಿಗೆ ಅರ್ಘ್ಯ ಕೊಡುವ ಸಮಯಕ್ಕೆ ಸಿಗುತ್ತದೆ. ಆ ಮಗುವನ್ನು ಆತ ದೇವರು ಕೊಟ್ಟದ್ದೆಂದು ಸಾಕುತ್ತಾನೆ. ಮಗು ಪ್ರಾಯಕ್ಕೆ ಬಂದಾಗ ಒಬ್ಬ ಬ್ರಾಹ್ಮಣ ಆಕೆಯನ್ನು ಮದುವೆಯಾಗಲು ಮುಂದೆ ಬರುತ್ತಾನೆ. ಆಕೆಯೊಂದಿಗೆ ಮದುವೆಯ ನಿಶ್ಚಿತಾರ್ಥ ಆಗುತ್ತದೆ. ಸ್ವಲ್ಪ ದಿನ ಕಳೆದಾಗ ಆಕೆ ಹೊಲತಿಯ ಮಗಳು ಎಂದು ತಿಳಿಯುತ್ತದೆ. ಆದರೂ ಹೊಲತಿಯನ್ನೇ ಮದುವೆಯಾಗುವಂತೆ ಆಗುತ್ತದೆ. ಭವಿಷ್ಯ ಸತ್ಯವಾಗುತ್ತದೆ. [ಕ.ಜ.ಕ. (ಸಂ)]

ಗೌ.ಕ.ಜ.ಕ. ೮೪. ದೋಷವನ್ನು ಗೆಲ್ಲುವುದು : ಪಂಡಿತ ಹೇಳಿದ ಭವಿಷ್ಯದಂತೆ ಒದಗಿರುವ ದೋಷವನ್ನು ಜಾಣತನದಿಂದ ನಿವಾರಿಸಿ ಕೊಳ್ಳುವುದು.

ಒಬ್ಬ ಅರಸನಿಗೆ ಮಕ್ಕಳಿರುವುದಿಲ್ಲ. ಪಂಡಿತನೊಬ್ಬನ ಮಂತ್ರಾಕ್ಷತೆಯ ಶಕ್ತಿಯಿಂದ ಗಂಡು ಮಗು ಹುಟ್ಟುತ್ತದೆ. ಆ ಮಗು ದೊಡ್ಡವನಾದಾಗ ಕಳ್ಳನಾಗುತ್ತಾನೆ ಎಂದು ಜಾತಕ ನೋಡಿ ಭವಿಷ್ಯ ಹೇಳುತ್ತಾನೆ. ಅರಸನ ಮಗನಿಗೆ ಪ್ರಾಯ ಬಂದು ಮದುವೆ ಮಾಡಲು ಹೆಣ್ಣು ಹುಡುಕಿದರೆ ಯಾವ ಕಡೆಯೂ ಲಗ್ನ ಕೂಡಿ ಬರುವುದಿಲ್ಲ. ಇನ್ನೊಂದು ಊರಿನ ಅರಸನಿಗೆ ಒಬ್ಬಳೇ ಮಗಳು. ಅವಳ ಗಂಡ ಕಳ್ಳ ಎಂದು ಜಾತಕದಲ್ಲಿರುತ್ತದೆ. ಪಂಡಿತರ ಮಾತಂತೆ ಇಬ್ಬರಿಗೂ ಮದುವೆ ಮಾಡುತ್ತಾರೆ. ಭವಿಷ್ಯಗಾರನ ಮಾತಿನಂತೆ ಕದಿಯುವ ದಿನ ಹತ್ತಿರ ಬರುತ್ತದೆ. ಗಂಡ ಹೆಂಡತಿ ಕಾಡಲ್ಲಿ ವಾಸವಾಗುತ್ತಾರೆ. ಹೆಂಡತಿ ಗಂಡನಿಗೆ ದಿನಕ್ಕೊಂದು ನೀತಿ ಕಥೆ ಹೇಳುತ್ತಾಳೆ. ಕದಿಯುವ ದಿನದಂದು ಕಥೆಯೆಲ್ಲಾ ಮುಗಿಯುತ್ತದೆ. ಹೆಂಡತಿ ನಿದ್ದೆ ಮಾಡುತ್ತಾಳೆ. ಗಂಡ ಅರಸನ ಮನೆಗೆ ಕದಿಯಲು ಹೋಗುತ್ತಾನೆ. ಭವಿಷ್ಯಗಾರನ ಮಾತಿನಂತೆ ಯಾವ ವಸ್ತುವನ್ನು ಕದ್ದರೂ ದೋಷವಿದೆ. ಆದರೆ ದಡ್ಡು (ಉಪಯೋಗಕ್ಕೆ ಬಾರದ ಭತ್ತ) ಭತ್ತವನ್ನು ಕದ್ದರೆ ದೋಷವಿಲ್ಲ ಎಂದು ಇದೆ. ಆತ

ಒಂದು ಮೂಟೆ 'ದಡ್ಡು' ಭತ್ತವನ್ನು ಬೆನ್ನಿಗೆ ಹಾಕಿಕೊಂಡು ಬರುತ್ತಾನೆ. ಮರುದಿನ ಅರಸ ಕಳ್ಳನನ್ನು ಬರಮಾಡಿ ಸನ್ಮಾನಿಸುತ್ತಾನೆ.

ಗೌ.ಕ.ಜ.ಕ. ೮೫. ಮನುಷ್ಯ ದೆವ್ವವನ್ನು ಜಾಣತನದಿಂದ ಹಿಡಿಯುವುದು.

ಒಂದು ಅಜ್ಜಿ ಮತ್ತು ದನಕಾಯುವ ಹುಡುಗ ಇರುತ್ತಾರೆ. ಹುಡುಗ ಪ್ರತಿನಿತ್ಯ ಬೆಟ್ಟದ ಕಲ್ಲಿನ ಮೇಲೆ ಕುಳಿತು ಕಡುಬು ತಿನ್ನುತ್ತಿರುತ್ತಾನೆ. ಒಂದು ದಿನ ಕಡುಬು ತಿನ್ನುವಾಗ ಮೂರನ್ನೂ ತಿನ್ನುತ್ತೇನೆ ಎಂದು ಹೇಳುತ್ತಾನೆ. ಆ ಕಲ್ಲಲ್ಲಿ ಮೂರು ದೆವ್ವಗಳಿರುತ್ತವೆ. ಅವುಗಳು ಹೆದರಿ ಹುಡುಗನಿಗೆ ಮೂರು ಮಾಂತ್ರಿಕ ವಸ್ತುಗಳನ್ನು ಕೊಡುತ್ತವೆ. ಹುಡುಗ ಅವುಗಳನ್ನು ಅಜ್ಜಿಗೆ ಕೊಡುತ್ತಾನೆ. (ಮಾಂತ್ರಿಕ ವಸ್ತುಗಳು ಒಂದು–ಇಕ್ಕಾಲು ಸಟ್ಟುಗ, ಎರಡು–ಮುತ್ತು ಗಾರು ಕುದುರೆ; ಮೂರು–ಕಟ್ಟೋಳಿ ಹಗ್ಗ ಕುಟ್ಟೋಳಿ ದೊಣ್ಣೆ. ಇಕ್ಕಾಲು ಸಟ್ಟುಗ ಎಂದರೆ ಅಕ್ಷಯ ಪಾತ್ರೆ, ಮುತ್ತು ಗಾರು ಕುದುರೆ ಬೇಕಷ್ಟು ಮುತ್ತು ಕಾರುವುದು. ಕಟ್ಟೋಳಿ ಹಗ್ಗ ಕುಟ್ಟೋಳಿ ದೊಣ್ಣೆ ಎಂದರೆ ಹಗ್ಗದಲ್ಲಿ ಕಟ್ಟಿ ಹಾಕಿ ದೊಣ್ಣೆಯಲ್ಲಿ ಹೊಡೆಯುವುದು.)

[ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೮೬. ವಿರುದ್ಧ ಮಾತನಾಡುವ ಹೆಂಡತಿ.

ಒಂದು ಊರಿನ ಅರಸನಿಗೆ ಒಬ್ಬಳು ಮಗಳು. ಪ್ರಧಾನಿಗೆ ಒಬ್ಬ ಮಗ. ಇಬ್ಬರೂ ಓದಿ ವಿದ್ಯಾವಂತರಾಗುತ್ತಾರೆ. ಅವರಿಗೆ ಮದುವೆಯಾಗುತ್ತದೆ. ಮದುವೆ ಕಳೆದು ಊರು ತಿರುಗಲೆಂದು ಹೋಗುತ್ತಾರೆ. ದಾರಿಯಲ್ಲಿ ಒಬ್ಬ ಹೆಂಡತಿಗೆ ಹೊಡೆಯುತ್ತಿದ್ದಾನೆ. ತಪ್ಪಿಲ್ಲದೆ ಹೊಡೆಯಲಿಕ್ಕಿಲ್ಲವೆಂದು ಅರಸು ಮಗಳು ಹೇಳುತ್ತಾಳೆ. ಈ ಕಾರಣದಿಂದಾಗಿ ಪ್ರಧಾನಿ ಮಗ ಮತ್ತು ಅರಸು ಮಗಳಿಗೆ ಚರ್ಚೆಯಾಗುತ್ತದೆ. ಪ್ರಧಾನಿ ಮಗ ಹೆಂಡತಿಯನ್ನು ಪರೀಕ್ಷೆ ಮಾಡಲು ಯೋಚಿಸುತ್ತಾನೆ. ಮನೆ, ಹೆಂಡತಿ ಎಲ್ಲಾ ಬಿಟ್ಟು ಗಂಡ ದೂರ ಹೋಗಿ ವ್ಯಾಪಾರಕ್ಕೆ ತೊಡಗುತ್ತಾನೆ. ಒಂದು ದಿನ ಅರಸನ ಮಗಳು ವೇಷ ಮರೆಸಿಕೊಂಡು ಊರು ತಿರುಗಲು ಹೋಗುತ್ತಾಳೆ. ತಿರುಗಾಡುತ್ತಾ ಗಂಡನ ಅಂಗಡಿಗೆ ಬಂದು ಸೇರುತ್ತಾಳೆ. ಪ್ರಧಾನಿ ಮಗನಿಗೆ ಆಕೆಯ ಮೇಲೆ ಮನಸ್ಸಾಗಿ ಆಕೆಯನ್ನು ಕೂಡುತ್ತಾನೆ. ತನ್ನ ಮುದ್ರೆಯ ಉಂಗುರವನ್ನು ಕೊಡುತ್ತಾನೆ. ಮರುದಿನ ಹೆಂಡತಿ (ಅರಸು ಮಗಳು) ಅರಮನೆಗೆ ಬರುತ್ತಾಳೆ. ಕೆಲವು ವರ್ಷ ಕಳೆದಾಗ ಗಂಡ ಅರಮನೆಗೆ ಬರುತ್ತಾನೆ. ಆತನಿಗೆ ಹೆಂಡತಿ ಆರತಿ ಮಾಡುತ್ತಾಳೆ. ಉಂಗುರ ಪಡೆದು ಗರ್ಭ ಧರಿಸಿದ್ದು, ಮಗುವನ್ನು ಪಡೆದದ್ದು ಎಲ್ಲಾ ಸರಿಯೆಂದು ಗುರುತಿಸಿದ ಪ್ರಧಾನಿ ಮಗ ಮತ್ತು ಅರಸನ ಮಗಳು ಸುಖವಾಗಿರುತ್ತಾರೆ.

ಗೌ.ಕ.ಜ.ಕ ೮೭. ವ್ಯಭಿಚಾರಿ ಹೆಂಡತಿ.

ಒಬ್ಬನ ಹೆಂಡತಿಗೆ ಇನ್ನೊಬ್ಬ ಮಿಂಡ ಇರುತ್ತಾನೆ. ಗಂಡ ಆಕೆಯ ಮಿಂಡ ನನ್ನು ಕೊಂದು ಕೊರಳಿಗೆ ಹಗ್ಗ ಹಾಕಿ ತೂಗುತ್ತಾನೆ. ಆ ಮರದ ಅಡಿಯಲ್ಲಿ ಗರುಕೆ ಹುಲ್ಲು ಹುಟ್ಟುತ್ತದೆ. ಆ ಹುಲ್ಲನ್ನು ತಿನ್ನಲು ಒಂದು ಮೊಲ ಬರುತ್ತದೆ. ಒಂದು ದಿನ ಆ ಹೆಣ ನೇಣಿನಿಂದ ತುಂಡಾಗಿ ಬೀಳುತ್ತದೆ. ಹುಲ್ಲು ತಿನ್ನಲು ಬಂದ ಮೊಲ ಹೆಣದ ಅಡಿಗೆ ಬಿದ್ದು ಸಾಯುತ್ತದೆ. ಆ ಮೊಲವನ್ನು ತಂದು ಆಕೆ ಪದಾರ್ಥ ಮಾಡುತ್ತಾಳೆ. ರಾತ್ರಿ ಊಟದ ಸಮಯ ಗಂಡನಿಗೆ ಒಂದು ಒಗಟು ಹೇಳುತ್ತಾಳೆ. ಒಗಟಿನ ಅರ್ಥ ಹೇಳದಿದ್ದರೆ ಗಂಡನ ತಲೆ ತುಂಡರಿಸಲಾಗುವುದೆಂದು ಹೇಳುತ್ತಾಳೆ. ಗಂಡನಿಗೆ ಒಗಟಿನ ಅರ್ಥ ತಿಳಿಯುವುದಿಲ್ಲ.

ಆಗಿನ ಕಾಲದಲ್ಲಿ ತೆಂಗಿನ ಎಣ್ಣೆ ದೀಪಗಳೆಲ್ಲಾ ರಾತ್ರಿ ಅರಳಿಕಟ್ಟೆಯಲ್ಲಿ ಕುಳಿತು ಪ್ರತೀ ಮನೆಯ ಸುಖ ಸಮಾಚಾರ ಮಾತನಾಡುತ್ತಿದ್ದವು. ಆ ದಿನ ಆತನ ಮನೆಯ ದೀಪ ಕಟ್ಟೆಗೆ ಬರುವಾಗ ತಡವಾಗಿತ್ತು. ಎಲ್ಲಾ ದೀಪಗಳು ಯಾಕೆ ಬರಲಿಲ್ಲವೆಂದು ವಿಚಾರಿಸಿದಾಗ ನಮ್ಮ ಮನೆಯ ಯಜಮಾನನಿಗೆ ಆತನ ಹೆಂಡತಿ ಒಂದು ಒಗಟು ಹೇಳಿರುತ್ತಾಳೆ. ಅದರ ಉತ್ತರಕ್ಕಾಗಿ ಕುಳಿತಿದ್ದೆವು. ಆ ಒಗಟಿನ ಅರ್ಥವೇನೆಂದರೆ ಮಿಂಡನ ಹೆಣದ ಅಡಿಗೆ ಬಿದ್ದ ಮೊಲವನ್ನು ಪದಾರ್ಥ ಮಾಡಿದ್ದಾಳೆ ಎಂದಾಗಿದೆ. ಇದನ್ನು ಆತನ ತಂಗಿ ಮನೆಯ ದೀಪ ಕೇಳಿಸಿಕೊಳ್ಳುತ್ತದೆ. ಒಗಟಿನ ಅರ್ಥ ತಿಳಿ ಯದ ಗಂಡ ತಂಗಿಯ ಮನೆಗೆ ಹೋದಾಗ ತಂಗಿಯ ದೀಪ ಅರ್ಥ ಹೇಳುತ್ತದೆ. ಗಂಡ ಮನೆಗೆ ಬಂದು ಹೆಂಡತಿಯ ತಲೆ ತೆಗೆಸುತ್ತಾನೆ.

[ಕ.ಜ.ಕ. (ಸಂ), (ವೀ), ತು.ಜ.ಕ. (ಎ)]

ಗೌ.ಕ.ಜ.ಕ. ೮೮. ಗುಟ್ಟನ್ನು ಕಾಪಾಡಿಕೊಳ್ಳಲಾರದ ಹೆಂಡತಿ.

ಒಂದು ಊರಲ್ಲಿ ಒಬ್ಬ ಬಡವನಿದ್ದ. ಆತನ ತಂದೆ ಸಾಯುವಾಗ 'ಹೆಂಗಸ ರೊಂದಿಗೆ ಗುಟ್ಟು ಹೇಳಬೇಡ. ಪೋಲಿಸರೊಂದಿಗೆ ಸ್ನೇಹ ಮಾಡಬೇಡ' ಎಂದು ಹೇಳುತ್ತಾನೆ. ತಂದೆಯ ಮಾತು ಸತ್ಯವೇ ಎಂದು ಪರೀಕ್ಷಿಸಲು ಮಗ ಒಂದು ಆಡನ್ನು ಕೊಲ್ಲುತ್ತಾನೆ. ಮನೆಗೆ ಬಂದು ಹೆಂಡತಿಯೊಂದಿಗೆ ನಾನು ಕೊಲೆ ಮಾಡಿ ಬಂದದ್ದು ಎನ್ನುತ್ತಾನೆ. ಕೆಲವು ದಿನಗಳು ಕಳೆದಾಗ ಗಂಡ ಕೊಲೆ ಮಾಡಿದ್ದು ಪ್ರಚಾರವಾಯಿತು. ಅದೇ ಸಮಯಕ್ಕೆ ಈತ ಒಬ್ಬ ಪೋಲಿಸನ ಸ್ನೇಹ ಮಾಡುತ್ತಾನೆ. ಕೊಲೆ ಮಾಡಿದ ವಿಚಾರದಲ್ಲಿ ಈತನನ್ನು ಪೋಲಿಸರು ಬಂಧಿಸಿ ಗುದ್ದು ಕೊಡುತ್ತಾರೆ. ನಿಜ ಸಂಗತಿಯೇ ಬೇರೆ ಎಂದು ಗೊತ್ತಾಗಿ ಬಂಧನದಿಂದ ಬಿಡುತ್ತಾರೆ. ತಂದೆಯ ಮಾತು ಸತ್ಯವೆಂದು ಮಗನಿಗೆ ಅರ್ಥವಾಯಿತು. [ಕ.ಜ.ಕ. (ಸಂ)]

ಗೌ.ಕ.ಜ.ಕ. ೮೯. ತೊದಲು ಮಾತನಾಡುವ ಕನ್ಯೆಯರು.

ಒಬ್ಬ ಬಡವನಿಗೆ ಮೂವರು ಹೆಣ್ಣು ಮಕ್ಕಳು. ಮೂವರಿಗೂ ಪೂರ್ಣವಾಗಿ ಉಚ್ಚರಿಸಿ ಮಾತನಾಡಲು ಆಗುವುದಿಲ್ಲ. ಮೂಗಿನಲ್ಲಿ ಮಾತನಾಡುವುದು. ಒಮ್ಮೆ ಅವರ ಮನೆಯಲ್ಲಿ ಹೆಣ್ಣು ನೋಡುವ ಕ್ರಮ ಇಟ್ಟುಕೊಳ್ಳುತ್ತಾರೆ. ಗಂಡ ಹೆಂಡತಿ ಮಕ್ಕಳನ್ನು ಮಾತನಾಡಬೇಡಿ ಬಂದವರಿಗೆ ರುಚಿಯಾದ ಊಟ ಬಡಿಸಿ ಎಂದು ಹೇಳಿ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಬಂದ ನೆಂಟರೊಂದಿಗೆ ತೊದಲು ಮಾತನಾಡುತ್ತಾರೆ. ನೆಂಟರಿಗೆ ನಿಜ ಸ್ಥಿತಿ ಅರ್ಥವಾಗುತ್ತದೆ. [ಕ.ಜ.ಕ. (ವೀ)]

ಗೌ.ಕ.ಜ.ಕ. ೯೦. ಅಪರಿಚಿತನನ್ನು ಮದುವೆಯಾಗುವುದು.

ಒಬ್ಬ ರಾಜನಿಗೆ ಒಬ್ಬಳೇ ಮಗಳು. ಒಬ್ಬ ಋಷಿ ಆಕೆಯನ್ನು ನನಗೆ ಮದುವೆ ಮಾಡಿ ಕೊಡಬೇಕೆಂದು ಕೇಳುತ್ತಾನೆ. ರಾಜನಿಗೆ ಮಗಳನ್ನು ಕೊಡಲು ಮನಸ್ಸಿರುವುದಿಲ್ಲ. ಅದಕ್ಕೆ ಮಗಳು ಅಪ್ಪನಿಗೆ ಎರಡು ಉಪ ಕಥೆ ಹೇಳುತ್ತಾಳೆ.

ಒಂದು ಊರಲ್ಲಿ ಒಬ್ಬ ಋಷಿ ಇದ್ದನಂತೆ. ಆತ ರಾಜನೊಬ್ಬನ ಮಗಳನ್ನು ಮದುವೆಯಾಗುತ್ತೇನೆಂದು ಬರುತ್ತಾನೆ. ರಾಜ ಆತನನ್ನು ನಿಂದಿಸುತ್ತಾನೆ. ಆದರೆ ಮಕ್ಕಳೊಂದಿಗೆ ವಿಚಾರಿಸಿದಾಗ ರಾಜನ ೫೦ ಜನ ಮಕ್ಕಳೂ ಋಷಿಯೊಡನೆ ಹೊರಡುತ್ತಾರಂತೆ.

ಇನ್ನೊಂದು ಊರಲ್ಲಿ ಇಬ್ಬರು ಸಹೋದರರು ವಾಸವಿದ್ದರು. ಅವರು ದಾರಿಯಲ್ಲಿ ಹೋಗುವ ನರಮನುಷ್ಯರನ್ನು ಹಿಡಿದು ತಿನ್ನುತ್ತಿದ್ದರು. ಒಮ್ಮೆ ಅಲ್ಲಿಗೆ ಋಷಿಯೊಬ್ಬ ಹೋಗುತ್ತಾನೆ. ಅಣ್ಣ ತಮ್ಮನನ್ನು ಕೊಂದು ಪದಾರ್ಥ ಮಾಡಿ ಋಷಿಗೆ ಬಡಿಸುತ್ತಾನೆ. ಋಷಿಯು ಊಟ ಮಾಡಿ ಹೊಟ್ಟೆ ತಿಕ್ಕಿದಾಗ, ತಮ್ಮ ಋಷಿಯ ಹೊಟ್ಟೆಯಲ್ಲಿ ಜೀರ್ಣನಾಗುತ್ತಾನೆ. ಋಷಿಯ ಕಥೆ ಕೇಳಿದ ರಾಜ ಮಗಳನ್ನು ಮದುವೆ ಮಾಡಿಕೊಡುತ್ತಾನೆ. ಅವಳು ನಾರು ಬಟ್ಟೆ ತೊಟ್ಟು ಋಷಿಯೊಂದಿಗೆ ಕಾಡಿಗೆ ಹೋಗುತ್ತಾಳೆ.

ಒಮ್ಮೆ ಋಷಿ ಪತ್ನಿಯನ್ನು ಪರೀಕ್ಷೆ ಮಾಡಲು ಹರಿಹರ ಬ್ರಹ್ಮ ಬರುತ್ತಾರೆ. ನಮಗೆ ಹುಟ್ಟುಡುಗೆಯಲ್ಲಿ ಗಂಜಿ ಕೊಡಬೇಕೆಂದು ಋಷಿ ಪತ್ನಿಗೆ ಹೇಳುತ್ತಾರೆ. ಆಕೆ ಮಂತ್ರಾಕ್ಷತೆಯಿಂದ ಬಂದ ಅತಿಥಿಗಳನ್ನು ಮಗುವಾಗಿ ಪರಿವರ್ತಿಸುತ್ತಾಳೆ. ಆಗ ಅವರ ಪತ್ನಿಯರು ತಮ್ಮ ಪತಿ ದೇವರನ್ನು ಹಿಂದಿನಂತೆ ಪರಿವರ್ತಿಸಬೇಕೆಂದು ಋಷಿ ಪತ್ನಿಯೊಂದಿಗೆ ಬೇಡಿಕೊಳ್ಳುತ್ತಾರೆ. ಮತ್ತೆ ಹಿಂದಿನಂತೆ ಪರಿವರ್ತನೆ ಹೊಂದಿದ ದೇವಾದಿಗಳು ನೀನೇ ಪತಿವ್ರತಾ ಮಹಾದೇವಿ ಎಂದು ಹಾರೈಸುತ್ತಾಗೆ.

ಗೌ.ಕ.ಜ.ಕ. ೯೧. ಗಂಡ ಹೆಂಡತಿ ಮತ್ತು ಅವರ ಎತ್ತುಗಳು.

ಒಂದು ಊರಲ್ಲಿ ಗಂಡ ಹೆಂಡತಿ ತಮ್ಮ ಹೆಸರನ್ನು ತುಪ್ಪ ಮತ್ತು ಪಾಯಸ ವೆಂದು ಕರೆಯುತ್ತಿದ್ದರು. ಅವರ ಎತ್ತುಗಳಿಗೆ ನೆಂಟ ಮತ್ತು ದೊಣ್ಣೆ ಎಂಬ ಹೆಸರಿಟ್ಟಿದ್ದರು. ಒಂದು ದಿನ ಗಂಡ ಗದ್ದೆ ಉಳುವಾಗ ಒಬ್ಬ ನೆಂಟ ಬರುತ್ತಾನೆ. ನೀನು ಮನೆಗೆ ಹೋಗು – ಮನೆಯಲ್ಲಿ ಪಾಯಸ ಇದ್ದಾಳೆ ಎಂದು ನೆಂಟನಿಗೆ ತುಪ್ಪ ಹೇಳುತ್ತಾನೆ. ನೆಂಟ ಮನೆಗೆ ಬರುತ್ತಾನೆ. ಪಾಯಸ ಹೇಳುತ್ತಾಳೆ – ತುಪ್ಪ ಬರಲಿ, ಆ ಮೇಲೆ ಊಟ ಮಾಡಬಹುದೆಂದು. ಸ್ವಲ್ಪ ಹೊತ್ತು ಕಳೆದಾಗ ತುಪ್ಪ ದೊಣ್ಣೆ ಮತ್ತು ನೆಂಟನನ್ನು ಹೊಡೆದುಕೊಂಡು ಬರುತ್ತಾನೆ. ದೊಣ್ಣೆ ಎತ್ತು ಕಟ್ಟಿಹಾಕಲು ಸಿಗುವುದಿಲ್ಲ. ಆಗ ಹೆಂಡತಿಯೊಂದಿಗೆ ಹೇಳುತ್ತಾನೆ. ನೆಂಟನನ್ನು ಕಟ್ಟಿದ್ದೇನೆ. ದೊಣ್ಣೆಯನ್ನು ತರುತ್ತೇನೆ. ಆ ಮೇಲೆ ಊಟ ಮಾಡೋಣವೆಂದು. ಆದರೆ ಮನೆಗೆ ಬಂದ ಅತಿಥಿ ನನ್ನನ್ನೇ ಕಟ್ಟಿ ಹಾಕಿ ಹೊಡೆಯಲು ದೊಣ್ಣೆ ತರುತ್ತಾ ರೆಂದು ತಿಳಿದು ಮನೆ ಬಿಟ್ಟು ಓಡುತ್ತಾನೆ. [ಕ.ಜ.ಕ. (ಪೀ). ತು.ಜ.ಕ (ಪಿ)]

ಗೌ.ಕ.ಜ.ಕ. ೯೨. ಜಾಣ ಮಡಿವಾಳ ಕುಂಬಾರನನ್ನು ಸೋಲಿಸಿದ ಕಥೆ.

ಒಂದು ಊರಲ್ಲಿ ಮಡಿವಾಳ ಮತ್ತು ಕುಂಬಾರ ಇರುತ್ತಾರೆ. ಮಡಿವಾಳ ಕುಂಬಾರನಿಗಿಂತ ಜಾಣ. ಕುಂಬಾರ ಮಡಿವಾಳನನ್ನು ಮೋಸದಿಂದ ಸೋಲಿಸಲು ಪ್ರಯತ್ನಿಸುತ್ತಾನೆ. ಒಂದು ದಿನ ಆ ಊರಿನ ರಾಜ ಆನೆಯ ಮೇಲೆ ಕುಳಿತು ತಿರುಗಾಟ ಮಾಡುತ್ತಿದ್ದ. ಕುಂಬಾರ ರಾಜನೊಂದಿಗೆ ಬಿಳಿ ಆನೆಯಿದೆ. ಯಾಕೆ ನೀವು ಕಪ್ಪು ಆನೆಯ ಮೇಲೆ ಕುಳಿತಿರುವಿರಿ. ನಮ್ಮೂರ ಮಡಿವಾಳ ಕಪ್ಪು ಆನೆಯನ್ನು ಬಿಳಿಮಾಡಿ ಕೊಡುತ್ತಾನೆ ಎಂದು ಹೇಳುತ್ತಾನೆ. ಮರುದಿನ ಮಡಿವಾಳನನ್ನು ಕರೆದು ಆನೆಯನ್ನು ಬಿಳಿಮಾಡಿಕೊಡಬೇಕು. ಇಲ್ಲವಾದರೆ ನಿನ್ನ ತಲೆ ಹಾರಿಸ ಲಾಗುತ್ತದೆ ಎಂದು ರಾಜ ಹೇಳುತ್ತಾನೆ. ಮಡಿವಾಳನಿಗೆ ಕುಂಬಾರನೇ ಈ ರೀತಿಯ ಮೋಸ ಮಾಡಿದ್ದೆಂದು ತಿಳಿಯುತ್ತದೆ. ಮಡಿವಾಳ ರಾಜನೊಂದಿಗೆ ಒಂದು ವಾರದ ಸಮಯ ಕೇಳುತ್ತಾನೆ. ಒಂದು ವಾರದ ಕೊನೆಯ ದಿನ ಮಡಿವಾಳ ರಾಜನೆದುರು ಹೇಳುತ್ತಾನೆ – ರಾಜರೇ ನಿಮ್ಮ ಆನೆಯನ್ನು ಬಿಳಿ ಮಾಡಿ ಆಗಿದೆ. ಆದರೆ ಆನೆ ಯನ್ನು ಒಂದೆರಡು ದಿನ ಪಾತ್ರೆಯಲ್ಲಿ ಹಾಕಿಡಬೇಕಾಗುತ್ತದೆ. ಹಾಗಾಗಿ ಅದಕ್ಕೊಂದು ಪಾತ್ರೆ ಬೇಕಾಗಿತ್ತು. ಪಾತ್ರೆಯನ್ನು ನಮ್ಮ ಕುಂಬಾರ ಮಾಡಿ ಕೊಡುತ್ತಾನೆ – ಎಂದು ಹೇಳುತ್ತಾನೆ. ಕುಂಬಾರನಿಗೆ ಕರೆ ಹೋಯಿತು. ಪಾತ್ರೆ ಮಾಡಿಕೊಡಲಿಲ್ಲವಾದರೆ ತಲೆ ತೆಗೆಸುವೆನಾಗಿ ರಾಜ ಎಚ್ಚರಿಕೆ ಕೊಡುತ್ತಾನೆ. ಕುಂಬಾರ ತನ್ನ ಮಾತು ತನಗೇ ಸಿಕ್ಕಿದೆ. ನಾವಿಬ್ಬರೂ ಇನ್ನು ಮುಂದೆ ಮಿತ್ರರೆಂದು ಹೇಳಿ ರಾಜನೊಂದಿಗೆ ತಪ್ಪೊಪ್ಪುತ್ತಾರೆ.

ಗೌ.ಕ.ಜ.ಕ. ೯೩. ಜಾಣ ಹುಡುಗ ಜಾಣತನದಿಂದ ಅರಸನ ಮಗಳನ್ನು ಮದುವೆ ಯಾಗುವುದು.

ಒಬ್ಬ ಆರಸನಿಗೆ ಐದು ಜನ ಗಂಡು ಮಕ್ಕಳು. ಕೊನೆಯವನು ಜಾಣ. ಉಳಿದ ನಾಲ್ವರೂ ಜೂಜಾಟ, ಕೋಳಿಕಟ್ಟ ಎಂದು ತಿರುಗುತ್ತಿದ್ದರು. ಒಮ್ಮೆ ಮನೆಯ ಆಸ್ತಿಯನ್ನು ಪಾಲು ಮಾಡುವ ಸಂದರ್ಭ ಬಂತು. ಕೊನೆಯವನಿಗೆ ಮಾಣಿಕ್ಯ, ವಜ್ರ, ವೈಡೂರ್ಯ ಮತ್ತು ಚೊಟ್ಟು ಕಾಲಿನ ಕುದುರೆಯನ್ನು ಕೊಡುತ್ತಾರೆ. ಆತ ಮನೆ ಬಿಟ್ಟು ದೇಶಾಂತರ ಹೋಗಿ ಒಬ್ಬಳು ಮುದುಕಿಯ ಗುಡಿಸಲಲ್ಲಿ ವಾಸವಾಗು ತ್ತಾನೆ. ಆ ರಾಜ್ಯದಲ್ಲಿ ಅರಸನ ಮಗಳಿಗೆ ವರ ಪರೀಕ್ಷೆ ಇಟ್ಟಿರುತ್ತಾರೆ. ಅಲ್ಲಿ ಸುಳ್ಳನ್ನು ಸತ್ಯವೆಂದು ಮತ್ತು ಸತ್ಯವನ್ನು ಸುಳ್ಳೆಂದು ಹೇಳಬೇಕು. ಈತ ಮೂರು ದಿನ ರಾತ್ರಿ ಅರಸನ ಮಗಳ ಬಚ್ಚಲು ಕೊಠಡಿಯಲ್ಲಿ ಅವಿತು ಕುಳಿತುಕೊಳ್ಳುತ್ತಾನೆ. ಮೊದಲ ದಿನ ಮಾಣಿಕ್ಯ ತೋರಿಸಲು ಅರಸು ಕುಮಾರಿಯು ರವಕೆ ಬಿಚ್ಚುತ್ತಾಳೆ. ಎರಡನೆ ದಿನ ವಜ್ರ ತೋರಿಸಲು ಲಂಗ ಬಿಚ್ಚುತ್ತಾಳೆ. ಮೂರನೆ ದಿನ ವೈಡೂರ್ಯ ತೋರಿಸಲು ಸಂಪೂರ್ಣ ಬೆತ್ತಲಾಗಿ ನಿಲ್ಲುತ್ತಾಳೆ. ಮರುದಿನ ಆತ ಹಿಂದಿನ ಮೂರು ದಿನಗಳು ನಡೆದ ಘಟನೆಯನ್ನು ಹೇಳುತ್ತಾನೆ. ಅದು ಅರಸು ಕುಮಾರಿಗೆ ಸತ್ಯವೆಂದು ಗೊತ್ತಿದ್ದರೂ, ಅರಸನಿಗೆ ಸುಳ್ಳು ಕಥೆ ಎಂದು ತೋರುತ್ತದೆ. ಅರಸನ ಮಗಳು ಆತನ ಕೊರಳಿಗೆ ಹೂವಿನ ಹಾರ ಹಾಕುತ್ತಾಳೆ.

ಗೌ.ಕ.ಜ.ಕ. ೯೪. ರಾತ್ರಿ ಮನೆಯಲ್ಲಿ ಉಳಿದ ಅತಿಥಿ.

ಒಂದು ಊರಲ್ಲಿ ಗಂಡ ಹೆಂಡತಿಗೆ ಮಕ್ಕಳಿರುವುದಿಲ್ಲ. ಒಂದು ದಿನ ಅವರು ಸಿಹಿ ತಿಂಡಿ ಮಾಡುತ್ತಾರೆ. ಅದೇ ದಿನ ಅವರ ಮನೆಗೆ ಒಬ್ಬ ಅತಿಥಿ ಬರುತ್ತಾನೆ. ಸಿಹಿ ತಿಂಡಿ ಕೊಡಲು ಆಗುತ್ತದೆಂದು ಆತನನ್ನು ಹೊರಡಿಸುತ್ತಾರೆ. ಆತ ಹೋಗುವುದೇ ಇಲ್ಲ. ಗಂಡ ಹೆಂಡತಿ ಕೆಲಸದ ನೆಪದಲ್ಲಿ ಮನೆಯಿಂದ ಹೊರಗೆ ಹೋಗುತ್ತಾರೆ. ಅತಿಥಿ ಅಟ್ಟಕ್ಕೆ ಹತ್ತಿ ಕುಳಿತುಕೊಳ್ಳುತ್ತಾನೆ. ಅತಿಥಿ ಹೋದನೆಂದು ಗಂಡ ಹೆಂಡತಿ ತಿಂಡಿ ತಿನ್ನಲು ಪ್ರಾರಂಭಿಸುತ್ತಾರೆ. ತಿನ್ನುವಾಗ ಕಣ್ಣಿಗೆ ಬಟ್ಟೆಕಟ್ಟಿ ಕೊಳ್ಳುತ್ತಾರೆ. ಅತಿಥಿ ಗಂಡ ಹೆಂಡತಿಯ ಮಧ್ಯದಲ್ಲಿ ಕುಳಿತುಕೊಳ್ಳುತ್ತಾನೆ. ಇಬ್ಬರೂ ಒಬ್ಬರಿಗೊಬ್ಬರು ಬಾಯಿಗೆ ಕೊಟ್ಟು ತಿನ್ನುತ್ತಾರೆ. ಇವರು ತಿಂಡಿಯನ್ನೆಲ್ಲಾ ಅತಿಥಿಯ ಬಾಯಿಗೆ ಕೊಡುತ್ತಾರೆ. ಎಲ್ಲಾ ತಿಂಡಿ ಮುಗಿಯುವಾಗ ಇಬ್ಬರೂ ತಲೆಗೆ–ತಲೆ ಗುದ್ದುತ್ತಾರೆ. ಕಣ್ಣಿನ ಬಟ್ಟೆ ಬಿಚ್ಚಿ ನೋಡುವಾಗ ಅತಿಥಿ ಗಂಡ ಹೆಂಡಿರ ಮಧ್ಯೆ ಕುಳಿತು ನಗುತ್ತಿರುತಾನೆ. ಅತಿಯಾಸೆ ಗತಿಕೇಡಾಯಿತು. [ಕ.ಜ.ಕ. (ಸಂ)]

ಗೌ.ಕ.ಜ.ಕ. ೯೫. ಪೆದ್ದ ಅಳಿಯ.

ಒಬ್ಬಳಿಗೆ ಪೆದ್ದ ಮಗನಿರುತ್ತಾನೆ. ಅದೇ ಊರಿನ ಅರಸನಿಗೆ ಒಬ್ಬಳೇ ಮಗಳಿರು ತ್ತಾಳೆ. ಒಂದು ದಿನ ಪೆದ್ದನನ್ನು ನೋಡಿ ಅರಸು ಮಗಳಿಗೆ ನಗುಬರುತ್ತದೆ. ಮಗಳನ್ನು

ನಗಿಸಿದ್ದಾಕ್ಕಾಗಿ ಪೆದ್ದನಿಗೆ ಆಕೆಯನ್ನು ಮದುವೆ ಮಾಡಿಕೊಡುತ್ತಾರೆ. ಪೆದ್ದ ಆಕೆಯನ್ನು ತನ್ನ ಗುಡಿಸಲಿಗೆ ಕರೆದುಕೊಂಡು ಬರುವಾಗ, ಆಕೆಯ ಬಕ್ಕತಲೆಯನ್ನು ಕಂಡು ಅವಳ ತಲೆ ಒಡೆದಿದೆ ಎನ್ನುತ್ತಾನೆ. ಕೆಲವು ದಿನ ಕಳೆದಾಗ ಮಗಳನ್ನು ತವರಿಗೆ ಕರೆದೊಯ್ಯುತ್ತಾರೆ. ಆ ದಿನ ಮಾವನ ಮನೆಯಲ್ಲಿ ಊಟಕ್ಕೆ ಪಾಯಸ ಮಾಡುತ್ತಾರೆ. ಪೆದ್ದ ಪಾಯಸವೆಂದರೆ ಅಂಬಲಿಯೆಂದು ತಿಳಿದಿದ್ದ. ಊಟ ಮಾಡುವಾಗ ಪಾಯಸ ಬೇಡ. ನಮ್ಮ ಮನೆಯಲ್ಲಿ ದಿನ ನಿತ್ಯ ಮಾಡುತ್ತಾರೆ ಎಂದು ಹೇಳಿದ. ಆದರೂ ಬಿದ್ದದ್ದನ್ನು ಸ್ವಲ್ಪ ನೆಕ್ಕುವಾಗ ಸಿಹಿಯಾಯಿತು. ಆ ದಿನ ರಾತ್ರಿ ಪೆದ್ದ ಪಾಯಸ ತಿನ್ನಲು ಅಡುಗೆ ಮನೆಗೆ ಹೋಗುತ್ತಾನೆ. ಕಳ್ಳ ಬೆಕ್ಕು ಬಂದಿತೆಂದು ಅತ್ತೆ ದೊಣ್ಣೆಯಲ್ಲಿ ಹೊಡೆಯುತ್ತಾಳೆ. ಪೆಟ್ಟು ತಿಂದ ಪೆದ್ದ ಹೆಂಡತಿಯೊಂದಿಗೆ ಮಲಗುತ್ತಾನೆ. ಪೆದ್ದನಿಗೆ ಹೆಂಡತಿಯೊಂದಿಗೆ ಹೇಗೆ ಮಲಗುವುದೆಂದು ಗೊತ್ತಿರುವುದಿಲ್ಲ. ಪೆದ್ದ ಪೆದ್ದನಾಗಿಯೇ ಉಳಿಯುತ್ತಾನೆ. [ಕ.ಜ.ಕ. (ಸಂ), (ವೀ), ತು.ಜ.ಕ. (ವಿ)]

ಗೌ.ಕ.ಜ.ಕ. ೯೬. ಮನೆಗೆ ಬೆಂಕಿಕೊಟ್ಟ ಪೆದ್ದ ಮೊಮ್ಮಗ ಮತ್ತು ಅವನಿಂದ ಸಿಕ್ಕಿ ಬೀಳುವ ಕಳ್ಳರು.

ಒಂದು ಊರಿನ ರಾಜ ರಾಣಿಗೆ ಒಬ್ಬನೇ ಮಗ. ಮಗನನ್ನು ನೋಡಿಕೊಳ್ಳಲು ಒಬ್ಬಳು ಮುದುಕಿ ಇದ್ದಳು. ಒಂದು ದಿನ ರಾಜ ರಾಣಿ ಸಾಯುತ್ತಾರೆ. ಆತ ಅಜ್ಜಿಯ ಸಾಕು ಮಗನಾಗುತ್ತಾನೆ. ಆತ ವಿದ್ಯಾಭ್ಯಾಸ ಬಿಟ್ಟು ವ್ಯಾಪಾರಕ್ಕೆ ತೊಡಗುತ್ತಾನೆ. ಒಮ್ಮೆ ಆತನಿಗೆ ನಿಧಿ ಸಿಗುತ್ತದೆ. ಮೊಮ್ಮಗನಿಗೆ ಮದುವೆ ಮಾಡೋಣವೆಂದು ಅಜ್ಜಿ ಹೆಣ್ಣು ಹುಡುಕಲು ಹೋಗುತ್ತಾಳೆ. ಆ ದಿನ ರಾತ್ರಿ ಮೊಮ್ಮಗನನ್ನು ಇಲಿಗಳು ನಿದ್ರೆ ಮಾಡಲು ಬಿಡುವುದಿಲ್ಲ. ಇಲಿಗಳನ್ನು ಕೊಲ್ಲುವುದಕ್ಕಾಗಿ ಮನೆಗೆ ಬೆಂಕಿ ಕೊಡುತ್ತಾನೆ. ಅಜ್ಜಿ ಬರುವುದರೊಳಗೆ ಹೊಸಮನೆ ಕಟ್ಟಿ, ನಿಧಿಯನ್ನು ಕೆಲಸಕ್ಕೆ ಬಂದ ಎಲ್ಲರಿಗೂ ಹಂಚಿರುತ್ತಾನೆ. ಹಂಚಿಹೋದ ನಿಧಿಯನ್ನು ಅಜ್ಜಿ ಒಟ್ಟು ಮಾಡುತ್ತಾಳೆ.

ಮೊಮ್ಮಗನಿಗೆ ಮದುವೆಯಾಗುತ್ತದೆ. ಹೆಂಡತಿಯ ಹಣೆಯಲ್ಲಿರುವ ಕುಂಕುಮವನ್ನು ನೋಡಿ, ಆಕೆಯ ತಲೆ ಒಡೆದಿದೆಯೆಂದು, ಅವಳನ್ನು ಅರ್ಧದಾರಿಯಲ್ಲೇ ಬಿಟ್ಟು ಬರುತ್ತಾನೆ. ಸ್ವಲ್ಪ ಮುಂದೆ ಬಂದಾಗ ಕಳ್ಳರ ಗುಂಪೊಂದು ಸಿಗುತ್ತದೆ. ಅವರೊಂದಿಗೆ ಪೆದ್ದ ಮೊಮ್ಮಗನೂ ಹೋಗುತ್ತಾನೆ. ಕದಿಯಲು ಹೋದವ ಮನೆಯಲ್ಲಿ ಮಾತನಾಡ ಬೇಡವೆಂದರೆ ಜೋರು ಮಾತನಾಡುತ್ತಾನೆ. ಕಳ್ಳರೆಲ್ಲಾ ಸಿಕ್ಕಿಬಿದ್ದಾಗ, ನಾನು ಕಳ್ಳನಲ್ಲ. ನನ್ನನ್ನು ಅವರೆಲ್ಲಾ ಕರೆದುಕೊಂಡು ಬಂದರು ಎನ್ನುತ್ತಾನೆ. ಕಳ್ಳರೆಲ್ಲಾ ಸಿಕ್ಕಿಬಿದ್ದಾಗ ಅವರ ಸಂಪತ್ತು ಪೆದ್ದ ಮೊಮ್ಮಗನಿಗೆ ಸಿಗುತ್ತದೆ.

[ಕ.ಜ.ಕ. (ಸಂ), (ವೀ)]

ಗೌ.ಕ.ಜ.ಕ. ೯೭. ಪುನರ್‌ಜನ್ಮವನ್ನು ಹಾಸ್ಯ ಮಾಡುವುದು.

ಒಬ್ಬ ಜ್ಯೋತಿಷ್ಯನಿಗೆ ಆತನ ಭವಿಷ್ಯದಲ್ಲಿ ಏನೇನು ಆಗುತ್ತದೆಂದು ಚೆನ್ನಾಗಿ ಗೊತ್ತಿತ್ತು. ಒಂದು ದಿನ ಮಗನನ್ನು ಕರೆದು, ಇನ್ನು ಕೆಲವೇ ದಿನದಲ್ಲಿ ನಾನು ಸಾಯುತ್ತೇನೆ. ಸತ್ತ ಕೆಲವೇ ದಿನದಲ್ಲಿ ಹಂದಿಯಾಗಿ ಜನ್ಮ ಪಡೆಯುತ್ತೇನೆ. ಆಗ ನೀನು ನನ್ನನ್ನು ಗುಂಡಿಟ್ಟು ಕೊಲ್ಲಬೇಕು ಎಂದು ಹೇಳುತ್ತಾನೆ.

ತಂದೆ ಸತ್ತು ಕೆಲವು ದಿನ ಕಳೆದು, ಹಂದಿಯಾಗಿ ಮನೆ ಕಡೆ ಬರುವಾಗ, ಮಗ ಹಂದಿಯನ್ನು ಕೊಲ್ಲಲು ಹೋಗುತ್ತಾನೆ. ಆಗ ಹಂದಿಯು ಕೊಲ್ಲಬೇಡ... ಇಂದಿಗೆ ಇದೇ ಸುಖ ಎನ್ನುತ್ತದೆ.

ಗೌ.ಕ.ಜ.ಕ. ೯೮. ಪರಸ್ಪರ ಕಚ್ಚುವ ಪ್ರಾಣಿಗಳು: ಅಡಗಿಸಿಟ್ಟ ವಸ್ತು ಹುಡುಕಲು ಮನುಷ್ಯನಿಗೆ ಸಹಾಯವಾಗುವುದು.

ಒಬ್ಬ ದಾರಿ ಹೋಕನಿಗೆ ಹತ್ತು ಪೈಸೆ ಬಿದ್ದು ಸಿಗುತ್ತದೆ. ಆ ಹತ್ತು ಪೈಸೆಯಲ್ಲಿ ಎರಡು ಬಾಳೆಹಣ್ಣು ಕೊಂಡುಕೊಳ್ಳುತ್ತಾನೆ. ಒಂದನ್ನು ತಿನ್ನುತ್ತಾನೆ. ಮತ್ತೊಂದನ್ನು ಗೊಬ್ಬರದ ರಾಶಿಯೊಳಗೆ ಅಡಗಿಸಿ ಇಡುತ್ತಾನೆ. ಕೆಲವು ದಿನ ಕಳೆದಾಗ ಆತನಿಗೆ ಹಣ್ಣನ್ನು ತೆಗೆಯಲು ಆಗುವುದಿಲ್ಲ. ಆಗ ಒಂದು ಜೇನುನೊಣ ನಾಯಿಗೆ ಕಡಿಯುತ್ತದೆ (ಕಚ್ಚುತ್ತದೆ). ನಾಯಿ ಒಂದು ದನಕ್ಕೆ ಕಚ್ಚುತ್ತದೆ. ದನ ಮನುಷ್ಯನಿಗೆ ಹಾಯುತ್ತದೆ. (ಕೊಂಬಿನಿಂದ ಕುತ್ತುತ್ತದ). ಆಗ ಆ ಮನುಷ್ಯನಿಗೆ ಅಡಗಿಸಿ ಇಟ್ಟ ಬಾಳೆ ಹಣ್ಣು ಸಿಗುತ್ತದೆ.

ಗೌ.ಕ.ಜ.ಕ. ೯೯. ನಿರಂತರ ಘಟನೆಗಳು : ಬರಿಂಕನಿಂದ ಮೊಮ್ಮಗನವರೆಗೆ ಘಟನೆಗಳು ಮುಂದುವರಿಯುವುದು.

ಒಂದು ಮನೆಯವರೆಲ್ಲರೂ ಬೇಟೆಗೆ ಹೋಗುತ್ತಾರೆ. ಆಗ ಒಂದು 'ಬರಿಂಕ' (ಬರ್ಕ) ಕಾಣಲು ಸಿಗುತ್ತದೆ. ಅದನ್ನು ಓಡಿಸಿಕೊಂಡು ನಾಯಿ ಹೋಗುತ್ತದೆ. 'ಬರಿಂಕ' ಗುಹೆಗೆ ನುಗ್ಗಿತೆಂದು ನಾಯಿ ನುಗ್ಗುತ್ತದೆ. ನಾಯಿ ನುಗ್ಗಿತೆಂದು ಅಜ್ಜ ನುಗ್ಗುತ್ತಾನೆ. ಅಜ್ಜ ನುಗ್ಗಿದನೆಂದು ಮಗ ನುಗ್ಗುತ್ತಾನೆ. ಮಗ ನುಗ್ಗಿದನೆಂದು ಮೊಮ್ಮಗ ನುಗ್ಗುತ್ತಾನೆ. ಬರಿಂಕ (ಕಾಡು ಕುರಿ) ಹೆದರಿ ನಾಯಿಯ ಬಾಯಿಗೆ, ನಾಯಿ ಹೆದರಿ ಅಜ್ಜನ ಬಾಯಿಗೆ, ಅಜ್ಜ ಹೆದರಿ ಮಗನ ಬಾಯಿಗೆ, ಮಗ ಹೆದರಿ ಮೊಮ್ಮಗನ ಬಾಯಿಗೆ, ಮೊಮ್ಮಗ ಹೆದರಿ ಕಥೆ ಕೇಳುವವರ ಬಾಯಿಗೆ ಮಲ ವಿಸರ್ಜನೆ ಮಾಡಿದ.

ಗೌ.ಕ.ಜ.ಕ. ೧೦೦. ಕೊನೆಯಿಲ್ಲದ ಕಥೆ.

ಒಬ್ಬ ಕಥೆ ಹೇಳಲು ಒತ್ತಾಯ ಮಾಡುತ್ತಾನೆ. ಆದರೆ ಆತನಿಗೆ ಕಥೆ ಹೇಳಲು ಮನಸ್ಸಿರುವುದಿಲ್ಲ. ಹಾಗಾಗಿ ಒಂದು ಕಥೆ ಹೇಳುತ್ತೇನೆಂದು ಒಪ್ಪಿಕೊಳ್ಳುತ್ತಾನೆ.

ಒಂದು ದೇಶದ ಎರಡು ರಾಜರಿಗೆ ಯುದ್ಧ ಆಗುತ್ತದೆ. ಆದರೆ ಎರಡೂ ರಾಜರಿಗೂ ಅವರ ಮಧ್ಯೆ ಒಂದು ನದಿ ಇದೆ. ಯಾವುದಾದರೊಂದು ಊರಿನವರು ನದಿ ದಾಟಿ ಬರಬೇಕಾಗುತ್ತದೆ. ನದಿ ದಾಟಲು ಒಂದೇ ದೋಣಿ ಇರುವುದು. ಒಮ್ಮ ದಾಟಿಸುವಾಗ ಒಬ್ಬನನ್ನೇ ದಾಟಿಸುವುದು, ದೋಣಿ ದಾಟಲು ಪ್ರಾರಂಭವಾಯಿತು. ಒಂದು ದೋಣಿ ದಾಟಿತು...... ಎರಡು ದೋಣಿ ದಾಟಿತು........ ಮೂರು ದೋಣಿ ದಾಟಿತು...... ಹೀಗೆ ಬೆಳಗಾಗುವವರೆಗೂ ದಾಟುತ್ತಾ ಇತ್ತು.

## ಅಧ್ಯಾಯ – ೪

**ಗೌಡ ಕನ್ನಡದ ಜನಪದ ಕಥೆಗಳ ವರ್ಗಸೂಚಿ :**

೪.೧ ೧ ರಿಂದ ೨೯೯ ಪ್ರಾಣಿ ಕಥೆಗಳು

೪.೨ ೩೦೦ ರಿಂದ ೧೧೯೯ ಸಾಮಾನ್ಯ ಜನಪದ ಕಥೆಗಳು

೪.೩ ೧೨೦೦ ರಿಂದ ೧೯೯೯ ಹಾಸ್ಯ ಮತ್ತು ಹನಿ ಕಥೆಗಳು

೪.೪ ೨೦೦೦ ರಿಂದ ೨೩೪೯ ಸೂತ್ರ ಕಥೆಗಳು

೪.೧ ೧ ರಿಂದ ೨೯೯ ಪ್ರಾಣಿ ಕಥೆಗಳು

೪.೧.೧ ೧ ರಿಂದ ೯೯ ಕಾಡು ಪ್ರಾಣಿಗಳು :

ವರ್ಗ ೩೧A ಮೂರ್ಖ ಮೊಸಳೆಯನ್ನು ಮೊಲ ಮೋಸಗೊಳಿಸುವುದು. (ಗೌಕಜಕ ೧)

ವರ್ಗ ೫೬. ಮೋಸ ಮಾಡಲು ಹೋದ ನರಿಯು ತನ್ನ ಬಲೆಯಲ್ಲಿ ತಾನೇ ಸಿಲುಕುವುದು. (ಗೌಕಜಕ ೨. ೩. ೪)

ವರ್ಗ ೬೮. ನರಿ ಮನುಷ್ಯರನ್ನು ಮೋಸಮಾಡುವುದು. (ಗೌಕಜಕ ೫, ೬)

ವರ್ಗ ೯೧. ಮಂಗ ಉಪಾಯದಿಂದ ಮೊಸಳೆಯನ್ನು ಮೋಸಮಾಡುವುದು. (ಗೌಕಜಕ ೭)

ವರ್ಗ ೯೨. ಹುಲಿ ಬಾವಿಗೆ ಬೀಳುವಂತೆ ಮಾಡಿದ ಜಾಣ ನರಿ. (ಗೌಕಜಕ ೮)

೪.೧.೨ ೧೦೦ ರಿಂದ ೧೪೯ ಕಾಡು ಪ್ರಾಣಿಗಳು ಮತ್ತು ಸಾಕು ಪ್ರಾಣಿಗಳು :

ವರ್ಗ ೧೨೩. ಹಕ್ಕಿಯ ಮೊಟ್ಟೆಗಳು : ಮೊಟ್ಟೆ ತಿಂದವರ ಹೊಟ್ಟೆಯಿಂದ ಅದನ್ನು ಮತ್ತೆ ಪಡೆಯುವುದು. (ಗೌಕಜಕ ೯)

ವರ್ಗ ೧೩೦. ಕಳ್ಳರ ಮನೆಯಲ್ಲಿ ಪ್ರಾಣಿಗಳು : ಕತ್ತೆ, ನಾಯಿ, ಕೋಳಿ, ಬೆಕ್ಕು ಇವುಗಳು ಕಳ್ಳರನ್ನು ಓಡಿಸುವುದು. (ಗೌಕಜಕ ೧೦)

ವರ್ಗ ೧೩೦C ಮನುಷ್ಯರೊಂದಿಗೆ ಪ್ರಾಣಿಗಳು ವಾಸವಿರುವುದು. (ಗೌಕಜಕ ೧೧, ೧೨)

೪.೧.೩ ೧೫೦ ರಿಂದ ೧೯೯ ಮಾನವ ಮತ್ತು ಕಾಡು ಪ್ರಾಣಿಗಳು :

ವರ್ಗ ೧೫೭. ತಂದೆಯನ್ನು ತಿಂದ ಹುಲಿಯನ್ನು ಮಗ ಗುಂಡಿಟ್ಟು ಕೊಲ್ಲುವುದು. (ಗೌಕಜಕ ೧೩)

ವರ್ಗ ೧೬೦. ಕೃತಜ್ಞ ಮೀನು ಮತ್ತು ಕೃತಜ್ಞ ಹಾವು. (ಗೌಕಜಕ ೧೪, ೧೫)

ವರ್ಗ ೧೭೦A ಜಾಣ ಅಳಿಲು – ಮುರಿದ ಬಾಲ : ಬಾಲದ ನೆಪವಲ್ಲಿ ಕತ್ತಿ, ಗಡಿಗೆ, ಸೌತೆಕಾಯಿ, ಗಾಣದೆತ್ತು, ಮತ್ತು ಡೋಲನ್ನು ಪಡೆಯುವುದು. (ಗೌಕಜಕ ೧೬)

ವರ್ಗ ೧೭೬. ಬೇಸಾಯಗಾರನಿಂದ ನರಿ ಮೋಸ ಹೋಗುವುದು. (ಗೌಕಜಕ ೧೭)

ವರ್ಗ ೧೮೧. ಹುಲಿ ಇಲಿಗೆ ಹೆದರುವುದು : ಈ ಗುಟ್ಟು ಗೊತ್ತಿದ್ದ ಮನುಷ್ಯ ಹುಲಿಯನ್ನು ಹೆದರಿಸುವುದು. (ಗೌಕಜಕ ೧೮)

**೪.೧.೪ ೨೦೦ ರಿಂದ ೨೧೯ ಸಾಕು ಪ್ರಾಣಿಗಳು :**

ವರ್ಗ ೨೧೦. ಸಹಾಯಕ ಪ್ರಾಣಿಗಳು (ಗೌಕಜಕ ೧೯, ೨೦)

**೪.೧.೫ ೨೨೦ ರಿಂದ ೨೪೯ ಹಕ್ಕಿಗಳು :**

ವರ್ಗ ೨೪೮A* ಜಾಣ ಹಕ್ಕಿ : ಗುಳಿಗ ಭೂತಕ್ಕೆ ಜಾಣ ಹಕ್ಕಿ ಸಹಾಯಕ ವಾಗುವುದು. (ಗೌಕಜಕ ೨೧)

**೪.೨ ೩೦೦ ರಿಂದ ೧೧೯೯ ಸಾಮಾನ್ಯ ಜನಪದ ಕಥೆಗಳು**

**೪.೨.೧ ೩೦೦ ರಿಂದ ೭೪೯ ಮಾಂತ್ರಿಕ ಕಥೆಗಳು :**

**೪.೨.೧.೧ ೩೦೦ ರಿಂದ ೩೯೯ ಅತಿ ಮಾನುಷ ಎದುರಾಳಿಗಳು :**

ವರ್ಗ ೩೦೦B ಕ್ರೂರ ಸರ್ಪ : ಮುದುಕಿಯ ಸಹಾಯದಿಂದ ನಾಯಕ ಹಾವನ್ನು ಕೊಲ್ಲುವುದು. (ಗೌಕಜಕ ೨೨)

ವರ್ಗ ೩೨೭. ರಾಕ್ಷಸಿಯನ್ನು ಕೊಂದು ಅಣ್ಣಂದಿರನ್ನು ಮಲತಾಯಿ ಮಗ ರಕ್ಷಿಸುವುದು. (ಗೌಕಜಕ ೨೩)

ವರ್ಗ ೩೩೩. ಹಂದಿಯ ಹೊಟ್ಟೆಯಿಂದ ಮನುಷ್ಯನನ್ನು ಹೊರತೆಗೆಯುವುದು. (ಗೌಕಜಕ ೨೪)

ವರ್ಗ ೩೩೪. ರಾಕ್ಷಸಿಯ ಮನೆಯಲ್ಲಿ ಹುಡುಗ ಜಾಣ್ಮೆಯಿಂದ ರಾಕ್ಷಸಿಯನ್ನು ಕೊಲ್ಲುವುದು. (ಗೌ.ಕ.ಜ.ಕ. ೨೫, ೨೬, ೨೭)

**೪.೨.೧.೨. ೪೦೦ ರಿಂದ ೪೫೯ ಅತಿಮಾನುಷ ದಂಪತಿಗಳು ಅಥವಾ ಇತರ ಸಂಬಂಧಿಗಳು, ಬಂಧುಗಳು :**

ವರ್ಗ ೪೦೩. ಕ್ರೂರ ಮಲತಾಯಿ : ಮಕ್ಕಳಿಗೆ ಕಷ್ಟಕೊಡುವುದು. (ಗೌಕಜಕ ೨೮, ೨೯, ೩೦)

ವರ್ಗ ೪೦೩B ದುಷ್ಟ ಅಕ್ಕಂದಿರು ಮತ್ತು ಒಳ್ಳೆಯ ತಂಗಿ : ಪ್ರಾಣಿಗಳ ಸಹಾಯ ದಿಂದ ಒಳ್ಳೆಯ ತಂಗಿ ತನ್ನ ಮಗುವನ್ನು ದುಷ್ಟ ಅಕ್ಕಂದಿರ ಕಾಟ ದಿಂದ ರಕ್ಷಿಸಿಕೊಳ್ಳುವುದು. (ಗೌಕಜಕ ೩೧)

ವರ್ಗ ೪೦೮. ನಿಂಬೆ ಹಣ್ಣೊಳಗಿನ ಹೆಣ್ಣು ಮತ್ತು ಕಪಟಿ ವಧು. (ಗೌಕಜಕ ೩೨, ೩೩)

ವರ್ಗ ೪೧೨. ಕೊರಳ ಹಾರದಲ್ಲಿ ಜೀವವಿರುವುದು. (ಗೌ.ಕ.ಜ.ಕ. ೩೪, ೩೫)

ವರ್ಗ ೪೧೩. ಅಪ್ಸರೆಯ ಬಟ್ಟೆ ಕದ್ದು ಮದುವೆಯಾಗುವುದು. (ಗೌಕಜಕ ೩೬)

ವರ್ಗ ೪೨೫N ಗಿಳಿಯು ಹೆಣ್ಣಾಗಿ ಮಾರ್ಪಟ್ಟು ಅನೇಕ ಸಾಹಸಗಳನ್ನು ಮಾಡುವುದು. (ಗೌಕಜಕ ೩೭)

ವರ್ಗ ೪೩೩E ಮೀನಿನ ಹೆಂಡತಿ-ತಂಗಿಯ ಮತ್ಸರ : ಹುಡುಗಿ ಮೀನನ್ನು ಮದುವೆಯಾಗುವುದು. ಅವಳ ತಂಗಿ ಮತ್ಸರದಿಂದ ಬಾವಿಗೆ ದೂಡುವುದು. (ಗೌಕಜಕ ೩೮)

ವರ್ಗ ೪೫೦. ಅಣ್ಣ ಮತ್ತು ತಂಗಿ ಕಥೆ : ಅಣ್ಣಂದಿರು ಇಲ್ಲದಿದ್ದಾಗ ಅತ್ತಿಗೆಯಂದಿರು ನಾದಿನಿಗೆ ತೊಂದರೆ ಕೊಡುವುದು. ಹೆಂಡತಿಯರನ್ನು ಅಣ್ಣಂದಿರು ಕೊಲ್ಲುವುದು. (ಗೌಕಜಕ ೩೯)

ವರ್ಗ ೪೫೦B ಅಣ್ಣನು ಮರವಾಗಿ ಪರಿವರ್ತನೆಯಾಗುವುದು : ತಂಗಿಯನ್ನು ಶಿಕ್ಷಿಸಿದ ಅಣ್ಣನನ್ನು ಅಪ್ಪಕೊಂಡಾಗ ಮರವಾಗಿ ಪರಿವರ್ತನೆಯಾಗುವುದು. (ಗೌಕಜಕ ೪೦)

## ೪.೨.೧.೩ ೪೬೦ ರಿಂದ ೪೯೯ ಅತಿಮಾನುಷ ಸವಾಲುಗಳು :

ವರ್ಗ ೪೬೧A ಉತ್ತರಕ್ಕಾಗಿ ದೇವರಲ್ಲಿಗೆ ಪ್ರಯಾಣ : ಉತ್ತರ ಪಡೆದ ನಾಯಕನಿಗೆ ಪ್ರತಿಫಲ ದೊರೆಯುತ್ತದೆ. (ಗೌಕಜಕ ೪೧)

ವರ್ಗ ೪೮೦. ಕ್ರೂರ ಅಕ್ಕಂದಿರು ಮತ್ತು ಒಳ್ಳೆಯ ತಂಗಿ : ಮುದುಕಿಯ ಸಹಾಯದಿಂದ ಒಳ್ಳೆಯ ತಂಗಿ ಗೆಲ್ಲುವುದು. (ಗೌಕಜಕ ೪೨)

## ೪.೨.೧.೪ ೫೦೦ ರಿಂದ ೫೫೯ ಅತಿಮಾನಷ ಸಹಾಯಕರು :

ವರ್ಗ ೫೦೬. ಅತಿಮಾನಷ ಸಹಾಯಕರು : ತಲೆಬುರುಡೆಯ ಸಹಾಯದಿಂದ ಚಿನ್ನದ ಮೈ ಮತ್ತು ನರಿಯ ಮೋಸ. (ಗೌಕಜಕ ೪೩)

ವರ್ಗ ೫೧೦. ಮಗಳನ್ನು ಮದುವೆಯಾಗಬಯಸುವ ತಂದೆ : ಮಗಳು ಕಾಲುದೀಪದ ರೂಪದಲ್ಲಿ ತಪ್ಪಿಸಿಕೊಳ್ಳುವುದು. (ಗೌಕಜಕ ೪೪)

ವರ್ಗ ೫೧೧A ಸಹಾಯಕ ಆಕಳು. (ಗೌಕಜಕ ೪೫, ೪೬)

ವರ್ಗ ೫೧೧B ಸಹಾಯಕ ಎತ್ತುಗಳು. (ಗೌಕಜಕ ೪೭)

ವರ್ಗ ೫೧೩. ಸೂರ್ಯ ಮತ್ತು ಚಂದ್ರರ ಸಹಾಯದಿಂದ ಹುಡುಗಿ ಪಾರಾಗುವುದು. (ಗೌಕಜಕ ೪೮)

ವರ್ಗ ೫೪೫. ಸಹಾಯಕ ಗಿಳಿಗಳು. (ಗೌಕಜಕ ೪೯)

ವರ್ಗ ೫೫೦B ಕೊಪ್ಪರಿಗೆಗೆ ಹುಡುಕಾಟ : ಸಹೋದರರಿಬ್ಬರು ಕೊಪ್ಪರಿಗೆಗಾಗಿ ಪರಸ್ಪರ ಹೊಡೆದಾಡಿ ಸಾಯುವುದು. (ಗೌಕಜಕ ೫೦)

ವರ್ಗ ೫೫೨. ಮಂಗ ಮನುಷ್ಯನಿಗೆ ಸಹಾಯವಾಗುವುದು. (ಗೌಕಜಕ ೫೧, ೫೨, ೫೩)

ವರ್ಗ ೫೫೪. ಕೃತಜ್ಞ ಪ್ರಾಣಿಗಳು. (ಗೌಕಜಕ ೫೪, ೫೫)

ವರ್ಗ ೫೫೬E ಕ್ರೂರ ಅಣ್ಣಂದಿರು ಮತ್ತು ಒಳ್ಳೆಯ ತಮ್ಮ : ಕಿರಿಯ ತಮ್ಮ ಪ್ರಾಣಿಗಳ ಸಹಾಯದಿಂದ ಮದುವೆಯಾಗಿ ಅಣ್ಣಂದಿರನ್ನು ಸೋಲಿಸುವುದು. (ಗೌಕಜಕ ೫೬)

**೪.೨.೧.೫ ೫೬೦ ರಿಂದ ೬೪೯ ಮಾಂತ್ರಿಕ ವಸ್ತುಗಳು :**

ವರ್ಗ ೫೬೦. ಕಳವಾದ ಮಾಂತ್ರಿಕ ವಸ್ತುಗಳು ಪ್ರಾಣಿಗಳ ಸಹಾಯದಿಂದ ಮತ್ತೆ ದೊರೆಯುವುದು. (ಗೌಕಜಕ ೫೭)

ವರ್ಗ ೫೬೬. ಮೂರು ಮಾಂತ್ರಿಕ ವಸ್ತುಗಳು. (ಗೌಕಜಕ ೫೮, ೫೯)

ವರ್ಗ ೫೬೬A ಮಾಂತ್ರಿಕ ಹಣ್ಣು ತಿಂದು ಮಕ್ಕಳಾಗುವುದು. (ಗೌಕಜಕ ೬೦)

ವರ್ಗ ೫೬೭A ಮಾಂತ್ರಿಕ ಪಕ್ಕಿ : ಹಕ್ಕಿಯ ತಲೆ ತಿಂದವನು ಮುತ್ತು ಕಾರುವುದು. ಶರೀರ ತಿಂದವನು ಅರಸನಾಗುವುದು. (ಗೌಕಜಕ ೬೧)

ವರ್ಗ ೫೭೧. ಪತ್ತುಂಡೆ ಬುಡಂಡೆ ಮಂತ್ರ ಕಲಿಸುವುದು. (ಗೌಕಜಕ ೬೨)

ವರ್ಗ ೫೭೬. ಮಾಂತ್ರಿಕ ಕೋಟಿನ ಸಹಾಯದಿಂದ ಹುಡುಗ ಬೇರೆ ಬೇರೆ ಸಾಧನೆಗಳನ್ನು ಮಾಡುವುದು. (ಗೌಕಜಕ ೬೩)

ವರ್ಗ ೫೭೭. ಜೀವ ಸೂಚಿಯಾಗಿ ತುಳಸಿ ಗಿಡ ಮತ್ತು ನೆಕ್ಕಿಗಿಡ. (ಗೌಕಜಕ ೬೪, ೬೫)

ವರ್ಗ ೫೯೦A ಮಾಂತ್ರಿಕ ವಸ್ತುಗಳಿಂದ ಹಲವು ಸಾಧನೆಗಳನ್ನು ಮಾಡುವುದು. (ಗೌಕಜಕ ೬೬)

**೪.೨.೧.೬. ೬೫೦ ರಿಂದ ೬೯೯ ಅತಿಮಾನುಷ ಶಕ್ತಿ ಅಥವಾ ಜ್ಞಾನ :**

ವರ್ಗ ೬೫೩A ರಾಜಕುಮಾರಿ ಯಾರಿಗೆ ? ಉಪಕಥೆಗಳ ಮೂಲಕ ರಾಜನ ಮಗಳಿಗೆ ಯೋಗ್ಯ ಗಂಡನ ನಿರ್ಧಾರ. (ಗೌಕಜಕ ೬೭)

ವರ್ಗ ೬೭೦. ಪ್ರಾಣಿಗಳ ಭಾಷೆ ಗೊತ್ತಿರುವವನ ಕಥೆ : ಪ್ರಾಣಿಗಳ ಭಾಷೆ ಗೊತ್ತಿದ್ದವನು ತನ್ನ ಹೆಂಡತಿಯನ್ನು ಪಳಗಿಸಿದ ಕಥೆ. (ಗೌಕಜಕ ೬೮)

ವರ್ಗ ೬೭೬. ಸೂಸಮ್ಮಾ ಸೂಸಮ್ಮಾ ಬಾಗಿಲು ತೆರೆ. (ಗೌಕಜಕ ೬೯)

**೪.೨.೧.೭ ೭೦೦ ರಿಂದ ೭೪೯ ಇತರ ಅತಿಮಾನುಷ ಕಥೆಗಳು :**

ವರ್ಗ ೭೦೩. ಬೊಂಬೆ ಮಗುವಾಗುವುದು : ಮಕ್ಕಳಿಲ್ಲದ ತಂದೆ ತಾಯಿಗಳಿಗೆ ಬೊಂಬೆಯೇ ಮಗುವಾಗಿ ಸೇರಿಕೊಳ್ಳುವುದು. (ಗೌಕಜಕ ೭೦)

ವರ್ಗ ೭೦೬. ಅದ್ಭುತ ಬಾಲಕ : ಸೌದೆ ಕೊಳ್ಳಿಯೊಳಗೆ ಅದ್ಭುತ ಬಾಲಕನಿರುವುದು. ಅವನು ಅನೇಕ ಸಾಧನೆಗಳನ್ನು ಮಾಡುವುದು.(ಗೌಕಜಕ ೭೧)

ವರ್ಗ ೭೨೨A ಅಣ್ಣನು ತಂಗಿಯನ್ನು ಮದುವೆಯಾಗಬಯಸಿದ ಕಥೆ : ನೀರಿಗೆ ಬಿದ್ದ ಇಬ್ಬರೂ ಮೀನಾಗಿ ಪರಿವರ್ತನೆ ಹೊಂದುವ ಕಥೆ. (ಗೌಕಜಕ ೭೨, ೭೩)

**೪.೨.೨ ೭೫೦ ರಿಂದ ೮೪೯ ಧಾರ್ಮಿಕ ಕಥೆಗಳು :**

ವರ್ಗ ೭೬೫C ಮನುಷ್ಯರನ್ನು ಬಲಿಕೊಡುವ ಕಥೆ. (ಗೌಕಜಕ ೭೪, ೭೫)

**೪.೨.೩ ೮೫೦ ರಿಂದ ೯೯೯ ರಮ್ಯ ಕಥೆಗಳು :**

ವರ್ಗ ೮೭೫. ಜಾಣ ಹೆಂಡತಿ : ತನ್ನ ಜಾಣತನದಿಂದ ಗಂಡನ ಹೊಡೆತದಿಂದ ತಪ್ಪಿಸಿಕೊಳ್ಳುವುದು. (ಗೌಕಜಕ ೭೬)

ವರ್ಗ ೮೭೫B ಜಾಣ ಮಗಳು ಮತ್ತು ಸೊಸೆ. (ಗೌಕಜಕ ೭೭, ೭೮)

ವರ್ಗ ೮೮೮. ನಂಬಿಗಸ್ಥ ಹೆಂಡತಿ ಗಂಡನನ್ನು ಉಳಿಸುವುದು. (ಗೌಕಜಕ ೭೯)

ವರ್ಗ ೮೯೩. ನಂಬಲನರ್ಹ ಸ್ನೇಹಿತರು. (ಗೌಕಜಕ ೮೦)

ವರ್ಗ ೮೯೭. ಕ್ರೂರ ಅತ್ತಿಗೆಯವರಿಂದ ಹೊರಹಾಕಲ್ಪಟ್ಟ ತಂಗಿಗೆ ಪ್ರಾಣಿಗಳು ಸಹಾಯ ಮಾಡುವುದು. (ಗೌಕಜಕ ೮೧)

ವರ್ಗ ೯೧೦H ಒಬ್ಬರಿಗಿಂತ ಇಬ್ಬರು ಮೇಲು.

ವರ್ಗ ೯೧೦K ಊಟವಾದ ನಂತರ ಕೂತು ಮಲಗಬೇಕು. ಕೂತು ಉಣ್ಣುವುದಕ್ಕಿಂತ ಕೂಲಿ ಕೆಲಸ ಮೇಲು. ಈ ಮೂರು ಒಗಟು ಕಥೆಯಲ್ಲಿ ಮೂರು ಅರ್ಥ ಹೊರಡುವುದು. (ಗೌಕಜಕ ೮೨)

ವರ್ಗ ೯೩೦A ಭವಿಷ್ಯ ಹೇಳುವುದು : ಬ್ರಾಹ್ಮಣನೊಂದಿಗೆ ಹೊಲತಿಯ ಮದುವೆ. (ಗೌಕಜಕ ೮೩)

ವರ್ಗ ೯೪೭C ದೋಷವನ್ನು ಗೆಲ್ಲುವುದು : ಪಂಡಿತ ಹೇಳಿದ ಭವಿಷ್ಯದಂತೆ ಒದಗಿ ಬರುವ ದೋಷವನ್ನು ಜಾಣತನದಿಂದ ನಿವಾರಿಸಿಕೊಳ್ಳುವುದು. (ಗೌಕಜಕ ೮೪)

**೪.೨.೪ ೧೦೦೦ ದಿಂದ ೧೧೯೯ ಮೂರ್ಖ ರಕ್ಕಸರ ಕಥೆಗಳು :**

ವರ್ಗ ೧೧೫೨. ಮನುಷ್ಯ ದೆವ್ವವನ್ನು ಜಾಣತನದಿಂದ ಹಿಡಿಯುವುದು. (ಗೌಕಜಕ ೮೫)

**೪.೩ ೧೨೦೦ ರಿಂದ ೧೯೯೯ ಹಾಸ್ಯ ಕಥೆಗಳು ಮತ್ತು ಹನಿ ಕಥೆಗಳು :**

**೪.೩.೧ ೧೨೦೦ ರಿಂದ ೧೩೪೯ ಪೆದ್ದರ ಕಥೆಗಳು :**

ವರ್ಗ ೧೨೮೨. ಇಲಿಗಾಗಿ ಮನೆಗೆ ಬೆಂಕಿ ಕೊಟ್ಟದ್ದು. (ಗೌಕಜಕ ೯೬)

**೪.೩.೨ ೧೩೫೦ ರಿಂದ ೧೪೪೯ ದಂಪತಿ ಕಥೆಗಳು :**

ವರ್ಗ ೧೩೬೫. ವಿರುದ್ಧ ಮಾತನಾಡುವ ಹೆಂಡತಿ. (ಗೌಕಜಕ ೮೬)
ವರ್ಗ ೧೩೮೦. ವ್ಯಭಿಚಾರಿ ಹೆಂಡತಿ. (ಗೌಕಜಕ ೮೭)
ವರ್ಗ ೧೩೮೧C ಗುಟ್ಟನ್ನು ಕಾಪಾಡಿಕೊಳ್ಳಲಾರದ ಹೆಂಡತಿ. (ಗೌಕಜಕ ೮೮)

**೪.೩.೩. ೧೪೪೦ ರಿಂದ ೧೫೨೪ ಮಹಿಳಾ ಸಂಬಂಧಿ ಕಥೆಗಳು :**

ವರ್ಗ ೧೪೫೭. ತೊದಲು ಮಾತನಾಡುವ ಕನ್ನೆಯರು : (ಗೌಕಜಕ ೮೯)
ವರ್ಗ ೧೪೬೮. ಅಪರಿಚಿತನನ್ನು ಮದುವೆಯಾಗುವುದು. (ಗೌಕಜಕ ೯೦)

**೪.೩.೪. ೧೫೨೫ ರಿಂದ ೧೬೩೯ ಜಾಣ ಮನುಷ್ಯ :**

ವರ್ಗ ೧೫೩೦A ಗಂಡ ಹೆಂಡತಿ ಮತ್ತು ಅವರ ಎತ್ತುಗಳು. (ಗೌಕಜಕ ೯೧)
ವರ್ಗ ೧೫೪೦. ಜಾಣ ಮಡಿವಾಳ ಕುಂಬಾರನನ್ನು ಸೋಲಿಸಿದ ಕಥೆ. (ಗೌಕಜಕ ೯೨)
ವರ್ಗ ೧೫೪೨* ಜಾಣ ಹುಡುಗ : ಜಾಣತನದಿಂದ ಅರಸನ ಮಗಳನ್ನು ಮದುವೆಯಾಗುವುದು. (ಗೌಕಜಕ ೯೩)
ವರ್ಗ ೧೫೪೪. ರಾತ್ರಿ ಮನೆಯಲ್ಲಿ ಉಳಿದ ಅತಿಥಿ. (ಗೌಕಜಕ ೯೪)

**೪.೩.೯ ೧೬೭೫ ರಿಂದ ೧೭೨೪ ಮೂರ್ಖ ಮನುಷ್ಯ :**

ವರ್ಗ ೧೬೮೫A ಪೆದ್ದ ಅಳಿಯ. (ಗೌಕಜಕ ೯೫)
ವರ್ಗ ೧೬೯೨. ಮನೆಗೆ ಬೆಂಕಿಕೊಟ್ಟ ಪೆದ್ದ ಮೊಮ್ಮಗ ಮತ್ತು ಅವನಿಂದ ಸಿಕ್ಕಿಬೀಳುವ ಕಳ್ಳರು. (ಗೌಕಜಕ ೯೬)

**೪.೩.೮ ೧೮೫೦ ರಿಂದ ೧೮೭೪ ಬೇರೆಯವರ ಬಗೆಗಿನ ಹನಿ ಕಥೆಗಳು :**

ವರ್ಗ ೧೮೭೦. ಪುನರ್‌ಜನ್ಮವನ್ನು ಹಾಸ್ಯ ಮಾಡುವುದು. (ಗೌಕಜಕ ೯೭)

**೪.೪ ೨೦೦೦ ದಿಂದ ೨೩೪೦ ಸೂತ್ರ ಕಥೆಗಳು :**

**೪.೪.೧ ೨೦೦೦ ದಿಂದ ೨೧೯೯ ಪರಿಚಿತ ಕಥೆಗಳು :**

ವರ್ಗ ೨೦೩೪D ಪರಸ್ಪರ ಕಚ್ಚುವ ಪ್ರಾಣಿಗಳು : ಅಡಗಿಸಿಟ್ಟ ವಸ್ತು ಹುಡುಕಲು ಮನುಷ್ಯನಿಗೆ ಸಹಾಯಕವಾಗುವುದು. (ಗೌಕಜಕ ೯೮)
ವರ್ಗ ೨೦೪೨ ನಿರಂತರ ಘಟನೆಗಳು : ಬರಿಂಕನಿಂದ ಮೊಮ್ಮಗನವರೆಗೆ ಘಟನೆಗಳು ಮುಂದುವರಿಯುವುದು. (ಗೌಕಜಕ ೯೯)

**೪.೪.೨. ೨೨೦೦ ರಿಂದ ೨೪೯೯ ಇತರ ಸೂತ್ರ ಕಥೆಗಳು :**

ವರ್ಗ ೨೩೦೦. ಕೊನೆಯಿಲ್ಲದ ಕಥೆ. (ಗೌಕಜಕ ೧೦೦)

೦

## ಅಧ್ಯಾಯ – ೫

### ಗೌಡ ಕನ್ನಡದ ಜನಪದ ಕಥೆಗಳ ಆಶಯ ಸೂಚಿ

೫.೧ A ಪೌರಾಣಿಕ ಆಶಯಗಳು
೫.೨ B ಪ್ರಾಣಿಗಳು
೫.೩ C ನಿಷಿದ್ಧತೆ
೫.೪ D ಮಾಟ–ಮಂತ್ರ
೫.೫ E ಸಾವು
೫.೬ F ಅದ್ಭುತಗಳು
೫.೭ G ರಾಕ್ಷಸರು
೫.೮ H ಪರೀಕ್ಷೆಗಳು
೫.೯ J ಬುದ್ಧಿವಂತರು ಮತ್ತು ಮೂರ್ಖರು
೫.೧೦ K ಮೋಸಗಳು
೫.೧೧ L ಅದೃಷ್ಟ ಬದಲಾವಣೆ
೫.೧೨ M ಭವಿಷ್ಯ ನಿರ್ಧಾರ
೫.೧೩ N ಆಕಸ್ಮಿಕ ಮತ್ತು ಅದೃಷ್ಟ
೫.೧೪ P ಸಮಾಜ
೫.೧೫ Q ಬಹುಮಾನಗಳು ಮತ್ತು ಶಿಕ್ಷೆಗಳು
೫.೧೬ R ಬಂಧಿಗಳು ಮತ್ತು ನಿರಾಶ್ರಿತರು
೫.೧೭ S ಅಸಹಜ ಕ್ರೌರ್ಯ
೫.೧೮ T ಕಾಮ
೫.೧೯ V ಧರ್ಮ
೫.೨೦ X ಹಾಸ್ಯ
೫.೨೧ Z ಇತರ ಆಶಯಗಳು

೫.೧ A ಪೌರಾಣಿಕ ಆಶಯುಗಳು :

೧೩೨.೯.೧ ಹಸು ದೇವತೆಯಾಗಿ (ವರ್ಗ ೫೧೧A)
೧೪೦ ಕಲ್ಲೆಂಟೆ ಮನುಷ್ಯನಿಗೆ ಸಹಾಯಕ (ವರ್ಗ ೫೫೪)
೧೭೧.೦.೩ ಹರಿ, ಹರ, ಬ್ರಹ್ಮಾದಿಗಳು ಮಕ್ಕಳಾಗಿ (ವರ್ಗ ೧೪೬೮)
೧೮೫.೧೨ ಶಿವಪಾರ್ವತಿಯರು ಮಾನವನಿಗೆ ಸಹಾಯಕ (ವರ್ಗ ೪೩೩E)
೨೦೦ ಶಿವನ ಸಹಾಯ ಪಡೆಯಲು ಹೋಗುವುದು (ವರ್ಗ ೪೬೧)
೨೨೦ ಮನುಷ್ಯನನ್ನು ಸೂರ್ಯ ಚಂದ್ರರು ಹಾಸ್ಯ ಮಾಡುವುದು (ವರ್ಗ ೫೧೩)
೨೨೬.೨ ಸೂರ್ಯ ದೇವರ ಮಗಳನ್ನು ಮನುಷ್ಯ ಮದುವೆಯಾಗುವುದು (ವರ್ಗ ೪೦೩)
೨೨೮ ಕಷ್ಟಕಾಲಕ್ಕೆ ಮನುಷ್ಯನಿಗೆ ಸೂರ್ಯ ದೇವರ ಸಹಾಯ (ವರ್ಗ ೫೭೬, ೫೧೩)
೪೯೯.೩ ಅಸಾಮಾನ್ಯ ಜೀವಿ ಕಲ್ಲೆಂಟೆ (ವರ್ಗ ೫೫೪)
೧೨೪೧.೬ ಬೊಂಬೆಗೆ ಜೀವ ಕೊಡುವುದು.
೧೨೬೨ ಬೆಲ್ಲದ ಪಾಕದ ಬೊಂಬೆಗೆ ಜೀವ ಕೊಡುವುದು (ವರ್ಗ ೭೦೩)
೨೬೧೧.೦.೧ ಗೋರಿಯಿಂದ ಮರ ಬೆಳೆಯುವುದು (ವರ್ಗ ೪೫೦B)
೨೭೨೨.೨ ಮಗನ ಮೇಲಿನ ಸಿಟ್ಟಲ್ಲಿ ಮರಕ್ಕೆ ಶಿಕ್ಷೆ (ವರ್ಗ ೪೫೦B)

೫.೨ B ಪ್ರಾಣಿಗಳು :

೧೬.೨.೨ ವಿನಾಶಕಾರಿ ಹುಲಿ (ವರ್ಗ ೫೬F, ೧೩೭)
೧೭.೩ ವಿನಾಶಕಾರಿ ಮಂಗ (ವರ್ಗ ೧೩೦C)
೧೦೦.೧ ಪ್ರಾಣಿಗಳ ಸಹಾಯದಿಂದ ಹುತ್ತದಲ್ಲಿ ನಿಧಿ ಸಿಗುವುದು (ವರ್ಗ ೧೬೯೨, ೧೨೮೨)
೧೦೯ ಏಡಿಗೆ ನೂರೊಂದು ಮಕ್ಕಳಿರುವುದು (ವರ್ಗ ೪೦೩B)
೧೨೧.೧ ಮಾಂತ್ರಿಕ ನಾಯಿ (ವರ್ಗ ೧೬೯೨, ೧೨೮೨)
೧೨೧.೭ ಮಾಂತ್ರಿಕ ಮೊಲ (ವರ್ಗ ೧೬೯೨, ೧೨೮೨)
೧೭೧ ಮಾಂತ್ರಿಕ ಕೋಳಿ (ವರ್ಗ ೪೩೩E)
೧೮೪.೨.೨.೨ ಮನುಷ್ಯನನ್ನು ಪಾತಾಳಕ್ಕೊಯ್ದ ಮಾಂತ್ರಿಕ ಹಸು (ವರ್ಗ ೫೧೧A)
೨೦೦ ಪ್ರಾಣಿಗಳಿಗೆ ಸ್ವಪ್ನ ಬೀಳುವುದು (ವರ್ಗ ೪೦೩)
೨೧೧ ಪ್ರಾಣಿಗಳು ಮಾತನಾಡಿಕೊಳ್ಳುವುದು (ವರ್ಗ ೬೭೦)

೨೦೧.೧.೩.೧ ಮಾತನಾಡುವ ಕತ್ತೆ (ವರ್ಗ ೬೭೬)
೨೦೧.೧.೫.೧ ಮಾತನಾಡುವ ಎತ್ತು (ವರ್ಗ ೬೭೦)
೨೦೧.೧.೭ ಮಾತನಾಡುವ ನಾಯಿ (ವರ್ಗ ೬೭೦)
೨೦೧.೩ ಅಪಶಕುನ ನುಡಿಯುವ ಕಾಗೆ (ವರ್ಗ ೯೩೪)
೨೦೧.೩.೨.೧ ಮಾತನಾಡುವ ಕೋಳಿ (ವರ್ಗ ೬೭೦)
೨೦೧.೩.೪ ಮಾತನಾಡುವ ಗಿಳಿಗಳು (ವರ್ಗ ೭೦೮)
೨೦೧.೩.೧೦ ಮಾತನಾಡುವ ಹಕ್ಕಿ (ವರ್ಗ ೧೨೩)
೨೦೧.೬ ಕೃತಘ್ನ ಮೊಸಳೆ (ವರ್ಗ ೬೫೩A)
೨೧೫ ಮನುಷ್ಯನಿಗೆ ಪ್ರಾಣಿಗಳ ಭಾಷೆ ತಿಳಿಯುವುದು (ವರ್ಗ ೬೭೦)
೨೪೦.೧೩ ಪ್ರತಿ ಸ್ಪರ್ಧಿಯೆಂದು ಬಾವಿಗೆ ಹಾರಿದ ಹುಲಿ (ವರ್ಗ ೯೨)
೨೬೨.೧ ಹುಲಿಯೊಂದಿಗೆ ಗೆಲ್ಲುವ ಶೂರ ಎತ್ತುಗಳು (ವರ್ಗ ೫೧೧B)
೨೯೨.೨.೧ ಬೇಸಾಯಗಾರನಿಗೆ ಮಂಗ ಸಹಾಯಕ (ವರ್ಗ ೫೫೨)
೨೯೬ ಪ್ರಾಣಿಗಳು ಜೊತೆಯಾಗಿ ಹೋಗುವುದು (ವರ್ಗ ೧೩೦)
೨೯೯.೮ ಜಾಣ ಮೊಲ (ವರ್ಗ ೩೧A)
೩೦೧.೬ ಸಹಾಯಕ ದನ (ವರ್ಗ ೪೦೩B)
೨೦೧.೯ ಸಹಾಯಕ ಹೆಗ್ಗಣ (ವರ್ಗ ೪೦೩B)
೩೦೧.೧೦ ಸಹಾಯಕ ಜೇನುನೊಣ (ವರ್ಗ ೪೦೩B)
೩೬೦ ಸಹಾಯಕ ಪ್ರಾಣಿಗಳು (ವರ್ಗ ೪೧೩)
೩೭೫.೪ ಅಳಿಲಿಗೆ ಸಹಾಯ ಮಾಡಿ ತನ್ನ ವಸ್ತುಗಳನ್ನು ಕಳೆದುಕೊಂಡ ಮನುಷ್ಯ (ವರ್ಗ ೧೭೦A)
೩೭೧.೧ ಹುಲಿ ಇಲಿಗೆ ಸೋಲುವುದು (ವರ್ಗ ೧೮೧)
೩೮೮ ಸಹಾಯಕ ಸರ್ಪ (ವರ್ಗ ೫೫೪)
೪೦೨ ಸಹಾಯಕ ಕತ್ತೆ (ವರ್ಗ ೧೩೦)
೪೦೭.೧ ಸಹಾಯಕ ಇಲಿ (ವರ್ಗ ೫೬೦)
೪೧೧ ಸಹಾಯಕ ಹಸು (ವರ್ಗ ೧೬೦)
೪೨೨ ಸಹಾಯಕ ಬೆಕ್ಕು (ವರ್ಗ ೫೬೦)
೪೩೫.೧ ಸಹಾಯಕ ನರಿ (ವರ್ಗ ೯೨)
೪೩೫.೬ ಸಹಾಯಕ ತೋಳ (ವರ್ಗ ೧೩೦C)
೪೩೭.೧.೧ ಸಹಾಯಕ ಹೆಗ್ಗಣ (ವರ್ಗ ೭೨೨A)
೪೪೧.೧ ಸಹಾಯಕ ಮಂಗ (ವರ್ಗ ೫೫೨)
೪೪೩.೩ ಸಹಾಯಕ ಆನೆ (ವರ್ಗ ೫೬೭A)

೪೪೯.೧ ಕೃತಜ್ಞ ಹಾವು (ವರ್ಗ ೧೬೦)

೪೫೦ ಸಹಾಯಕ ಗುಬ್ಬಿ ಹಕ್ಕಿಗಳು (ವರ್ಗ ೮೯೭)

೪೬೩.೩ ಸಹಾಯಕ ಕೊಕ್ಕರೆ (ವರ್ಗ ೧೩೦C)

೪೬೯.೯ ಸಹಾಯಕ ಗಿಳಿ (ವರ್ಗ ೫೬೦)

೪೬೯.೧೧ ಸಹಾಯಕ ಹಕ್ಕಿ (ವರ್ಗ ೧೨೩)

೪೭೦ ಸಹಾಯಕ ಮೀನು (ವರ್ಗ ೪೨೫N)

೪೭೮ ಸಹಾಯಕ ಏಡಿ (ವರ್ಗ ೯೧೦ H, ೯೧೦K)

೪೮೧.೧ ಸಹಾಯಕ ಇರುವೆಗಳು (ವರ್ಗ ೧೩೦C)

೪೮೧.೩ ಸಹಾಯಕ ಜೇನುನೊಣ (ವರ್ಗ ೨೦೩೪D)

೪೯೧.೧ ಸೌದೆ ಕಟ್ಟಲು ಬಳ್ಳಿಯಾಗಿ ಸಹಾಯಕವಾದ ಸರ್ಪ (ವರ್ಗ ೫೧೧A)

೪೯೩.೧ ಸಹಾಯಕ ಕಪ್ಪೆ (ವರ್ಗ ೪೦೩)

೫೪೮.೧ ಬಡವನಿಗೆ ಪ್ರಾಣಿಗಳಿಂದ ಸಹಾಯ (ವರ್ಗ ೨೧೦)

೫೫೭.೮ ಗರ್ಭಿಣಿ ಸರ್ಪದ ಪ್ರಾಣ ಉಳಿಸುವುದು (ವರ್ಗ ೪೩೩E)

೫೫೭.೧೦ ಮನುಷ್ಯ ಹುಲಿಗೆ ಸಹಾಯ ಮಾಡುವುದು (ವರ್ಗ ೧೮೧)

೫೭೪ ಹಂದಿ ಮತ್ತು ನರಿ ಕೆಲಸಗಾರರಾಗಿ (ವರ್ಗ ೫೬ F)

೫೭೪.೧ ಎತ್ತುಗಳು ದೇಶಾಂತರ ಹೋಗುವುದು (೫೧೧B)

೬೦೧.೯ ಹುಲಿಯೊಂದಿಗೆ ಮನುಷ್ಯನ ಮದುವೆ (ವರ್ಗ ೫೫೪)

೬೦೪.೧ ಸರ್ಪದೊಂದಿಗೆ ಮನುಷ್ಯನ ಮದುವೆ (ವರ್ಗ ೩೦೦B)

೬೪೭.೧.೨ ಮೀನಿಗೆ ವಿವಾಹ (ವರ್ಗ ೪೩೩E)

೭೬೫.೧೬ ಸರ್ಪ ಹಣ್ಣಿನ ಮರದಲ್ಲಿ ವಾಸವಾಗಿರುವುದು (ವರ್ಗ ೭೨೨A)

೮೧೧.೬ ನರಿ ಭೂತ ಕಟ್ಟುವುದು (ವರ್ಗ ೫೬F)

### ೫.೩ C ನಿಷಿದ್ಧತೆ :

೨೭ ಗಂಟೆ ಬಾರಿಸಬಾರದೆಂಬ ನಿಷಿದ್ಧ

೩೧.೧.೬ ದೇವತೆಗಳು ಸ್ನಾನ ಮಾಡುವುದನ್ನು ನೋಡುವುದು ನಿಷಿದ್ಧ

೩೧.೬ ಗಂಡ ಹೆಂಡತಿಯು ಹೆಸರನ್ನು ಕರೆಯಬಾರದೆಂದು ನಿಷಿದ್ಧ (ವರ್ಗ ೧೫೩೦A)

೪೩೧.೧ ರಹಸ್ಯವನ್ನು ತಿಳಿಸುವುದು ನಿಷಿದ್ಧ (ವರ್ಗ ೫೧೧A)

೬೧೫ ನಿರ್ದಿಷ್ಟ ಸ್ಥಳದಿಂದಾಚೆ ಸಮುದ್ರ ಪ್ರಯಾಣ ಮಾಡಬಾರದೆಂಬ ನಿಷಿದ್ಧ (ವರ್ಗ ೪೨೫N)

೬೪೪ ಕದಿಯಬಾರದೆಂದು ನಿಷಿದ್ಧ (ವರ್ಗ ೩೩೩)

೯೨೧ ನಿಷಿದ್ಧವನ್ನು ಮೀರಿದ ಕೂಡಲೇ ನಾಯಕ ಸಾವಿಗೀಡಾಗುವುದು (ವರ್ಗ ೫೧೧A)

೯೬೨ ಅಣ್ಣ ತಂಗಿ ಮದುವೆಯಾಗಬಾರದೆಂದು ನಿಷಿದ್ಧ (ವರ್ಗ ೭೨೨A)

## ೫.೪ D ಮಾಟ - ಮಂತ್ರ :

೯೯ ಕುಷ್ಠ ರೋಗಿ ಸುಂದರ ಯುವಕನಾಗಿ ಪರಿವರ್ತನೆ (ವರ್ಗ ೬೫೩A)

೧೧೮.೨ ಮನುಷ್ಯ ಮಂಗನಾಗಿ ರೂಪಾಂತರ (ವರ್ಗ ೫೬೬)

೧೫೭ ಮನುಷ್ಯ ಗಿಳಿಯಾಗಿ ರೂಪಾಂತರ (ವರ್ಗ ೫೬೬)

೧೭೦ ಮನುಷ್ಯ ಮೀನಾಗಿ ರೂಪಾಂತರ (ವರ್ಗ ೭೨೨A)

೧೭೯.೬ ಅಣ್ಣ ತಂಗಿ ಮೀನಾಗಿ ರೂಪಾಂತರ (ವರ್ಗ ೭೨೨A)

೨೧೨.೪ ಮನುಷ್ಯ ತಾವರೆ ಹೂವಾಗಿ ರೂಪಾಂತರ (ವರ್ಗ ೪೦೮)

೨೩೧ ಮನುಷ್ಯ ಕಲ್ಲಾಗಿ ರೂಪಾಂತರ (ವರ್ಗ ೪೧೩)

೨೩೫ ಮಾಂತ್ರಿಕ ಚಿನ್ನ (ವರ್ಗ ೪೨೫N)

೨೩೫.೧ ಮನುಷ್ಯನ ಮೈ ಚಿನ್ನದ ಮೈಯಾಗಿ ರೂಪಾಂತರ (ವರ್ಗ ೫೦೬)

೨೬೩ ಮಾಂತ್ರಿಕ ಮುತ್ತು (ವರ್ಗ ೪೨೫N)

೩೦೧.೪.೪ ಮಾಂತ್ರಿಕ ಕುದುರೆ (ವರ್ಗ ೫೫೬E)

೩೧೨.೨ ಹುಲಿ ಮನುಷ್ಯನಾಗಿ ರೂಪಾಂತರ (ವರ್ಗ ೫೫೭, ೫೫೪)

೩೧೨.೨.೧ ದನ ಮಾನವನಾಗಿ ರೂಪಾಂತರ (ವರ್ಗ ೫೭೭)

೩೧೮.೧ ಮಂಗ ಮನುಷ್ಯನಾಗಿ ರೂಪಾಂತರ (ವರ್ಗ ೫೬೬)

೩೫೭ ಗಿಳಿ ಮನುಷ್ಯನಾಗಿ ರೂಪಾಂತರ (ವರ್ಗ ೫೬೬)

೩೭೦ ಮೀನು ಮನುಷ್ಯನಾಗಿ ರೂಪಾಂತರ (ವರ್ಗ ೫೩೩E)

೪೩೧.೧.೩ ತಾವರೆ ಹೂವು ಸುಂದರ ಹೆಣ್ಣಾಗಿ ರೂಪಾಂತರ (ವರ್ಗ ೪೦೮)

೪೩೧.೪ ಹಣ್ಣು ಮನುಷ್ಯನಾಗಿ ರೂಪಾಂತರ (ವರ್ಗ ೪೦೮)

೪೩೧.೪.೧ ಮಾವಿನ ಹಣ್ಣು ಸುಂದರ ಹೆಣ್ಣಾಗಿ ರೂಪಾಂತರ (ವರ್ಗ ೪೦೮)

೪೩೫.೧. ಬೊಂಬೆ ಮನುಷ್ಯನಾಗಿ ರೂಪಾಂತರ (ವರ್ಗ ೫೩೪)

೪೩೯.೭ ಬೆರಳು ಸುಂದರ ಹುಡುಗಿಯಾಗಿ ರೂಪಾಂತರ (ವರ್ಗ ೪೫೦)

೪೫೧.೪.೧.೧ ತಾವರೆ ಹೂವು ಮಾವಿನ ಮರವಾಗಿ ರೂಪಾಂತರ (ವರ್ಗ ೪೦೮)

೫೬೫.೨.೧ ರಾಕ್ಷಸ ನೊಣವಾಗಿ ರೂಪಾಂತರ (ವರ್ಗ ೬೫೩A)

೬೪೨ ಮನುಷ್ಯ ಕಾಲ್ದೀಪವಾಗಿ ರೂಪಾಂತರ (೫೧೦)

೭೧೧.೨ ಮಗುವಿನ ಬಲಿ ಕೊಡುವುದನ್ನು ತಡೆಯುವ ಮಾಂತ್ರಿಕ ಶಕ್ತಿ (ವರ್ಗ ೭೬೫C)

೮೦೧.೨ ಋಷಿ ಸೇವೆ ಮಾಡುವ ಅರಸು ಕುಮಾರ (ವರ್ಗ ೪೧೩)
೯೧೫ ಮಾಂತ್ರಿಕ ಸರಿ (ವರ್ಗ ೭೬೫C)
೯೩೧ ಮಾಂತ್ರಿಕ ಕಲ್ಲು (ವರ್ಗ ೬೭೬)
೯೩೫.೨ ಮಾಂತ್ರಿಕ ಮಣ್ಣು (ವರ್ಗ ೫೯೦A)
೯೫೦ ಮಾಂತ್ರಿಕ ಮರ (ವರ್ಗ ೪೫೦B)
೯೫೦.೭ ಮಾಂತ್ರಿಕ ನಿಂಬೆ ಮರ (ವರ್ಗ ೪೦೮)
೯೫೦.೧೫.೧ ಮಾಂತ್ರಿಕ ಬಿದಿರು (ವರ್ಗ ೪೧೩)
೯೫೦.೧೬ ಮಾಂತ್ರಿಕ ತೆಂಗಿನ ಮರ (ವರ್ಗ ೧೩೦C)
೯೫೦.೨೦ ಅಪ್ಪದ ಹಿಟ್ಟು ಗಿಡವಾಗುವುದು (ವರ್ಗ ೩೩೪)
೯೫೬ ಮಾಂತ್ರಿಕ ದೊಣ್ಣೆ (ವರ್ಗ ೧೧೫೨)
೯೫೬.೧ ಮಾಂತ್ರಿಕ ಸೌದೆ (ವರ್ಗ ೭೦೮)
೯೬೫.೧೧ ಮಾಂತ್ರಿಕ ಬಾಳೆ ಗಿಡ (ವರ್ಗ ೧೩೦C)
೯೬೫.೧೨ ಮಾಂತ್ರಿಕ ದರ್ಬೆ (ವರ್ಗ ೫೭೭)
೯೬೫.೨೧ ಸಾಂಕೇತಿಕ ತುಳಸಿ ಗಿಡ (ವರ್ಗ ೮೮೮)
೯೭೧ ಗೊರಟು ನುಂಗಿ ನಾಯಿಗೆ ಗರ್ಭ ನಿಲ್ಲುವುದು (ವರ್ಗ ೫೬೬A)
೯೭೫.೧ ಮಾಂತ್ರಿಕ ತಾವರೆ ಹೂವು (ವರ್ಗ ೫೭೬)
೯೮೧ ಮಾಂತ್ರಿಕ ಮಾವಿನ ಹಣ್ಣು (ವರ್ಗ ೫೫೨)
೫೮೧.೧ ಮಾಂತ್ರಿಕ ತೆಂಗಿನಕಾಯಿ (ವರ್ಗ ೫೬೬)
೯೮೧.೧.೧ ಮಾಂತ್ರಿಕ ಹಲಸಿನ ಮರ (ವರ್ಗ ೧೩೦C)
೯೮೧.೧೧ ಮಾಂತ್ರಿಕ ಕುಂಬಳಕಾಯಿ (ವರ್ಗ ೮೭೫B)
೯೮೧.೧೩ ಮಾಂತ್ರಿಕ ಬಾಳೆ ಹಣ್ಣು (ವರ್ಗ ೨೦೩೪D)
೯೮೧.೧೪ ಮಾಂತ್ರಿಕ ನಿಂಬೆ ಹಣ್ಣು (ವರ್ಗ ೪೦೮, ೪೦೩)
೯೮೫ ಮಾಂತ್ರಿಕ ಬೀಜ (ವರ್ಗ ೫೯೦A)
೯೮೫.೬ ಮಾಂತ್ರಿಕ ಮಾವಿನ ಗೊರಟು (ವರ್ಗ ೪೦೩)
೯೯೧.೪ ಮಾಂತ್ರಿಕ ಕೂದಲು (ವರ್ಗ ೮೭೫, ೮೭೫B)
೯೯೬.೧ ಮಾಂತ್ರಿಕ ಬೆರಳು (ವರ್ಗ ೪೫೦)
೧೦೧೧.೪ ಮಾಂತ್ರಿಕ ಕುದುರೆ (ವರ್ಗ ೧೧೫೨)
೧೦೩೦.೧೨ ಮಾಂತ್ರಿಕ ಗಂಜಿ (ವರ್ಗ ೫೦೬)
೧೦೩೨.೫ ಹಾವನ್ನು ಪದಾರ್ಥ ಮಾಡಿ ತಿನ್ನುವುದು (ವರ್ಗ ೪೧೩)
೧೦೩೩.೧ ಮಂತ್ರಾಕ್ಷತೆಯಿಂದ ಪುತ್ರ ಸಂತತಿ (ವರ್ಗ ೩೩೩)
೧೦೩೯.೩ ರಾಕ್ಷಸಿಯನ್ನು ಕೊಂದು ಪದಾರ್ಥ ಮಾಡುವುದು (ವರ್ಗ ೩೩೪)

೧೦೬೧ ಮಾಂತ್ರಿಕ ಕಂಬಳಿ (ವರ್ಗ ೫೬೬)
೧೦೭೦.೧ ಮಾಂತ್ರಿಕ ಉಂಗುರ (ವರ್ಗ ೫೬೦)
೧೦೭೧ ಮಾಂತ್ರಿಕ ಆಭರಣಗಳು (ವರ್ಗ ೧೫೪೨)
೧೦೭೩ ಮಾಂತ್ರಿಕ ಹಾರ (ವರ್ಗ ४೧೨)
೧೦೬೧.೨ ಮಾಂತ್ರಿಕ ಕತ್ತಿ (ವರ್ಗ ೫೦೬)
೧೦೬೧ ಮಾಂತ್ರಿಕ ಬಿಲ್ಲು (ವರ್ಗ ೨೧೦)
೧೧೩.೨ ಮಾಂತ್ರಿಕ ಅರಮನೆ (ವರ್ಗ ४೧೨)
೧೧೬೨.೧ ಮಾಂತ್ರಿಕ ದೀಪ (ವರ್ಗ ೧೩೮೦)
೧೧೭४.೧ ಮಾಂತ್ರಿಕ ಪೆಟ್ಟಿಗೆ (ವರ್ಗ ೬೭೬)
೧೨೦೯.೯ ಮಾಂತ್ರಿಕ ಬೀಸಣಿಕೆ (ವರ್ಗ ೭೦೮)
೧೨४೦ ಏಳು ಸಮುದ್ರದಾಚೆಗಿನ ತೀರ (ವರ್ಗ ४೦೩B)
೧೨४೨ ಮಾಂತ್ರಿಕ ಹಾಲು (ವರ್ಗ ४೦೩B)
೧೨४೨.೧ ಮಾಂತ್ರಿಕ ನೀರು (ವರ್ಗ ೫೭೭)
೧೨೬೬.೩ ಕಥೆ ಹೇಳಲು ಸ್ಪರ್ಧೆ (ವರ್ಗ ೯೧೦H, ೯೧೦K)
೧೨೭೩ ಮಾಂತ್ರಿಕ ಸೂತ್ರದಿಂದ ತುಂಡಾದ ವಸ್ತುವನ್ನು ಜೋಡಿಸುವುದು (ವರ್ಗ ೫೭೧)
೧೨೭೫.೫ ಮಾಂತ್ರಿಕ ಗಾದೆಗಳು (ವರ್ಗ ೯೧೦H, ೯೧೦K)
೧೩೩೭.೧ ಜೀವಕೊಡುವ ಮಾಂತ್ರಿಕ ವಸ್ತು (ವರ್ಗ ೫೫೬ E)
೨೧೭೧.೧ ಮಾಂತ್ರಿಕವಾಗಿ ಅಂಟಿಕೊಳ್ಳುವುದು (ವರ್ಗ ೫೭೧)
೧४೧೧.೧ ಮಾಂತ್ರಿಕ ಹಣ್ಣು (ವರ್ಗ ೧೧೫೨)
೧४೭೨.೧.೩೧ ಮಾಂತ್ರಿಕ ಸಟ್ಟುಗ (ವರ್ಗ ೧೧೫೨)
೧೬೧೦.೫ ಮಾತನಾಡುವ ತಲೆಬುರುಡೆಗಳು ಸಹಾಯ ಮಾಡುವುದು (ವರ್ಗ ೫೦೬)
೧೬೧೦.೩೭ ಮಾತನಾಡುವ ಕರುಳು (ವರ್ಗ ४೦೩)
೧೬೫೧.೮ ಮಾಂತ್ರಿಕ ಬಾಗಿಲು (ವರ್ಗ ೭೬೫ C)

## ೫.೫ E ಸಾವು :

೫೬ ಹೂಸುವಿನಿಂದ ಸಾಯುವುದು (ವರ್ಗ ೫೫೨)
೧೫೫.४.೨ ಹಗಲು ಸತ್ತು, ರಾತ್ರಿ ಜೀವವಾಗುವ ಹೆಂಗಸು (ವರ್ಗ ४೧೨)
೨೯೩ ದೆವ್ವಗಳು ಮನುಷ್ಯನಿಗೆ ಹೆದರುವುದು (ವರ್ಗ ೧೧೫೨)
೩೨೩.೧.೨ ಸತ್ತ ನಂತರವೂ ಮಗಳಿಗೆ ಸಹಾಯಕಳಾದ ತಾಯಿ (ವರ್ಗ ೧೬೦)
೬೦೨ ಸತ್ತ ಮನುಷ್ಯ ಪುನರ್ಜನ್ಮ ಪಡೆಯುವುದು (ವರ್ಗ ೫೧೦)

೬೦೫ ಸಮಗಾರ ಶವವನ್ನು ಹೋಲಿಯುವುದು (ವರ್ಗ ೬೭೬)
೬೧೧.೭ ಮನುಷ್ಯ ಪುನರ್‌ಜನ್ಮದಲ್ಲಿ ಹಂದಿಯಾಗುವುದು (ವರ್ಗ ೧೮೭೦)
೬೩೧ ಮನುಷ್ಯ ಸಂಪಿಗೆ ಮರವಾಗಿ ಪುನರ್‌ಜನ್ಮ (ವರ್ಗ ೪೫೦B)
೬೩೧.೦.೩ ಕೊಳೆತ ಮಾಂಸದಲ್ಲಿ ಗರುಕೆ ಹುಲ್ಲು ಬೆಳೆಯುವುದು (ವರ್ಗ ೧೩೮೦)
೭೧೦ ಬಾಹ್ಯ ಆತ್ಮ (ವರ್ಗ ೯೧)
೭೧೧.೪ ಕೊರಳ ಹಾರದಲ್ಲಿ ಜೀವವಿರುವುದು (ವರ್ಗ ೪೧೨)
೭೧೫.೩ ಗಿಳಿಯ ಆತ್ಮದಲ್ಲಿ ರಾಕ್ಷಸಿಯ ಜೀವ (ವರ್ಗ ೪೨೫N)

೫.೬ F ಅದ್ಭುತಗಳು :

೨.೦.೧ ಕಾಲ್ದೀಪದ ಸಹಾಯದಿಂದ ಮತ್ತೊಂದು ಜಗತ್ತಿಗೆ ಪ್ರಯಾಣ (ವರ್ಗ ೫೧೦)
೯೩.೧ ನದಿಯ ಮೂಲಕ ಪಾತಾಳಲೋಕ ಪ್ರವೇಶ (ವರ್ಗ ೫೧೧A)
೫೫೬.೧ ಕಾಸಿದ ಕಬ್ಬಿಣ ನುಂಗಿ ಸ್ವರ ದಪ್ಪವಾಗುವುದು (ವರ್ಗ ೧೨೩)
೬೦೧ ವಿಶೇಷ ಸಹಾಯಕರು (ವರ್ಗ ೪೦೩)
೬೧೦ ಗಟ್ಟಿ ಮನುಷ್ಯ (ವರ್ಗ ೩೨೭)
೬೧೧.೨.೧ ಪ್ರಾಣಿಯ ಹೊಟ್ಟೆಯಿಂದ ಮನುಷ್ಯ ಹೊರಬರುವುದು (ವರ್ಗ ೩೩೩)
೬೧೮.೧ ಆನೆಗೆ ನೇಗಿಲು ಕಟ್ಟಿ ಬಂಡೆ ಕಲ್ಲು ಉಳುವ ಮನುಷ್ಯ (ವರ್ಗ ೮೭೫)
೬೩೨ ಕೈಯಲ್ಲಿ ಹುಡಿ ಮಾಡಿ ಕೊಬ್ಬರಿ ಎಣ್ಣೆ ತೆಗೆಯುವುದು (ವರ್ಗ ೮೭೫)
೭೧೧.೨.೧ ಕ್ಷೀರಸಾಗರ (ವರ್ಗ ೮೫೫A)
೭೧೧.೨.೫ ಕಣ್ಣೀರ ಕೆರೆ (ವರ್ಗ ೭೨೨A)
೭೧೧.೭ ಸಮುದ್ರದಲ್ಲಿ ಹೆದ್ದಾರಿ (ವರ್ಗ ೫೫೪)
೮೯೯ ನಿಧಿ ಸಿಗುವುದು (ವರ್ಗ ೧೨೩)
೯೧೧.೩.೦.೧ ಮನುಷ್ಯರನ್ನು ನುಂಗುವ ಹಂದಿ (ವರ್ಗ ೩೩೩)
೯೧೩ ಹೊಟ್ಟೆಯಿಂದ ಮೊಟ್ಟೆಗಳನ್ನು ಹಿಂದೆ ಪಡೆಯುವುದು (ವರ್ಗ ೧೨೩)
೯೨೯.೩ ಕದ್ದು ತಿಂದ ವಸ್ತುವನ್ನು ಹೊಟ್ಟೆ ಸೀಳಿ ಪಡೆಯುವುದು (ವರ್ಗ ೧೨೩)
೯೩೧ ಅಸಾಧಾರಣ ಘಟನೆಗಳು (ವರ್ಗ ೧೨೩)

೫.೭ G ರಾಕ್ಷಸರು :

೧೧.೬ ಮನುಷ್ಯರನ್ನು ತಿನ್ನುವ ರಾಕ್ಷಸಿ (ವರ್ಗ ೩೩೪)
೬೧.೨ ಮಗಳನ್ನು ತಿನ್ನುವ ರಾಕ್ಷಸಿ (ವರ್ಗ ೩೩೪)
೩೦೩.೪.೧೫ ಮನುಷ್ಯರ ಮನೆಬಾಗಿಲಿಗೆ ರಾಕ್ಷಸಿ ವಿಷದ ಹಲ್ಲಿಡುವುದು (ವರ್ಗ ೫೪೫)
೩೬೯.೧.೮ ರಾಕ್ಷಸಿ ಸಮುದ್ರದಾಚೆಗೆ ವಾಸವಾಗಿರುವುದು (ವರ್ಗ ೪೨೫N)

೪೪೧ ಮನುಷ್ಯನನ್ನು ಗೋಣಿ ಚೀಲದಲ್ಲಿ ಕಟ್ಟಿ ಮನೆಗೆ ಹೊರುವುದು (ವರ್ಗ ೩೩೪)
೪೭೫.೧ ರಾಕ್ಷಸಿ ಹುಡುಗನ ಮೇಲೆ ಆಕ್ರಮಣ ಮಾಡುವುದು (ವರ್ಗ ೩೩೪)
೫೦೧ ತನ್ನ ಮನೆಯಿಂದಲೇ ಭಯಪಟ್ಟು ಓಡುವ ರಾಕ್ಷಸ (ವರ್ಗ ೨೧೦)
೫೧೨.೨ ರಾಕ್ಷಸ ಬಂಡೆ ಕಲ್ಲಿನ ಮೇಲಿಂದ ಉರುಳಿ ಬಿದ್ದು ಸಾಯುವುದು (ವರ್ಗ ೫೭೬)
೫೧೨.೧.೩ ಗುಂಗುರು ಕೂದಲಿಗೆ ರಾಕ್ಷಸಿ ಮನಸೋಲುವುದು (ವರ್ಗ ೩೩೪)
೫೧೨.೮ ರಾಗಿ ಕಲ್ಲಿನಿಂದ ಗುದ್ದಿ ಸಾಯಿಸುವುದು (ವರ್ಗ ೩೩೪)
೫೧೨.೯.೩ ಮಂಗ ರಾಕ್ಷಸನನ್ನು ಕೊಲ್ಲುವುದು (ವರ್ಗ ೫೫೨)
೫೨೩.೧ ರಾಕ್ಷಸ ಬೆಂಕಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುವುದು (ವರ್ಗ ೫೫೨)
೫೩.೨ ರಾಕ್ಷಸಿ ಮಗಳು ಮನುಷ್ಯನಿಗೆ ಸಹಾಯಕ (ವರ್ಗ ೨೧೦)

೫.೮ H ಪರೀಕ್ಷೆಗಳು :

೧೧೧ ಹೂ ಮುಡಿವುದರಿಂದ ವಧುವಿನ ಆಯ್ಕೆ (ವರ್ಗ ೭೨೨A)
೧೭೧.೧ ಆನೆ ಹೂ ಮಾಲೆ ಹಾಕಿ ರಾಜಕುಮಾರನ ಆಯ್ಕೆ (ವರ್ಗ ೫೫೬E)
೨೨೧.೧ ಬೆಂಕಿಗೆ ಹಾರುವುದರಿಂದ ಸತ್ಯ ಪರೀಕ್ಷೆ (ವರ್ಗ ೧೨೩)
೩೧೦ ವರ ಪರೀಕ್ಷೆ (ವರ್ಗ ೫೭೧)
೩೮೧ ವಧು ಪರೀಕ್ಷೆ (ವರ್ಗ ೧೫೪೨)
೫೦೦ ಮಿಂಡನ ಕೊಲೆಯಿಂದಾಗಿ ಗಂಡನಿಗೆ ಒಗಟಿನ ಪರೀಕ್ಷೆ (ವರ್ಗ ೧೩೩೦)
೫೦೯.೬ ಮಡಿಕೆಯೊಳಗೆ ಕುಂಬಳಕಾಯಿ (ವರ್ಗ ೮೭೫B)
೫೪೦.೨ ಒಗಟು ಹೇಳಿ ಶಿಕ್ಷೆಯಿಂದ ಪಾರಾಗುವುದು (ವರ್ಗ ೮೭೫)
೫೬೧.೪ ಒಗಟಿನ ಉತ್ತರದಿಂದ ವರನ ಆಯ್ಕೆ (ವರ್ಗ ೧೫೪೨)
೧೪೭೧ ರಾಕ್ಷಸಿಯನ್ನು ಕೊಲ್ಲುವುದನ್ನು ನೋಡುವುದು (ವರ್ಗ ೩೨೭)
೧೫೫೮ ಒಳ್ಳೆಯ ಸ್ನೇಹಿತನಿಗಾಗಿ ಪರೀಕ್ಷೆ (ವರ್ಗ ೮೯೩)

೫.೯ J ಬುದ್ಧಿವಂತರು ಮತ್ತು ಮೂರ್ಖರು :

೧೭ ನರಿ ಮನುಷ್ಯನಿಗೆ ಹೆದರುವುದು (ವರ್ಗ ೧೭೬)
೨೧.೨.೨ ಹೆಂಡತಿಗೆ ಗುಟ್ಟು ಹೇಳಿ ಸಾವನ್ನಪ್ಪುವುದು (ವರ್ಗ ೫೧೧A)
೮೧೫ ಅಪ್ರಿಯವಾದ ಸತ್ಯ (ವರ್ಗ ೬೮)
೧೭೧೩ ತಾವೇ ಮೂರ್ಖರಾದ ದಂಪತಿಗಳು (ವರ್ಗ ೧೫೪೪)
೧೭೯೧.೫ ಪ್ರತಿಬಿಂಬ ನೋಡಿ ಬಾವಿಗೆ ಹಾರುವುದು (ವರ್ಗ ೯೨)

೫.೧೦ K ಮೋಸಗಳು :

೩೧೧.೩ ಕಳ್ಳರ ಸ್ವರ ಬದಲಾವಣೆ (ವರ್ಗ ೧೨೩)
೩೧೫.೦.೧ ನರಿ ಮನೆ ನುಗ್ಗಿ ಗಂಜಿ ಉಣ್ಣುವುದು (ವರ್ಗ ೬೮)
೩೩೫.೧.೪ ಪ್ರಾಣಿಗಳು ಒಂದರ ಬೆನ್ನ ಮೇಲೆ ಇನ್ನೊಂದು ಏರುವುದು (ವರ್ಗ ೧೩೦)
೩೬೬ ಜಾಣತನದಿಂದ ಹಣದ ಗಂಟನ್ನು ಕದಿಯುವುದು (ವರ್ಗ ೫೫೨)
೫೪೩.೨ ಕರುಳು ಕೊಂಬೆಯಲ್ಲಿದೆಯೆಂದು ಮೊಸಳೆಯನ್ನು ಮೋಸ ಮಾಡಿದ ಮಂಗ (ವರ್ಗ ೯೧)
೮೩೨.೧.೧ ಹಂದಿ ಬಾವಿಗೆ ಬಿದ್ದು ಸಾಯುವುದು (ವರ್ಗ ೫೬F)
೯೬೧.೧ ಮಂಗನ ಹೃದಯದಿಂದ ಕಾಯಿಲೆ ಗುಣವಾಗುವುದು (ವರ್ಗ ೯೧)
೧೨೪೦ ಒಬ್ಬರನ್ನೊಬ್ಬರು ಮೋಸ ಮಾಡಲು ತೊಡಗಿ ತಾನೇ ಮೋಸ ಹೋಗುವುದು (ವರ್ಗ ೧೫೪೦)
೧೦೮೫.೧ ಗಂಡ ಹೆಂಡಿರ ನಡುವೆ ಜಗಳ ತಂದ ಅತಿಥಿ (ವರ್ಗ ೧೫೩೪)
೧೧೬೧ ಪ್ರಾಣಿಗಳು ಕಳ್ಳರನ್ನು ಓಡಿಸುವುದು (ವರ್ಗ ೧೩೦)
೧೨೧೮.೧ ಮೋಸಕ್ಕೊಳಗಾದ ವಧೂವರರು.
೧೬೦೧ ಮನುಷ್ಯನನ್ನು ಮೋಸಗೊಳಿಸ ಹೊರಟ ನರಿ ಮೋಸ ಹೋಗುವುದು (ವರ್ಗ ೬೮)
೧೭೧೫.೧ ದುರ್ಬಲ ಪ್ರಾಣಿ ಶಕ್ತಿವಂತ ಪ್ರಾಣಿಯನ್ನು ಸೋಲಿಸುವುದು (ವರ್ಗ ೯೨)
೧೭೧೫.೫ ಮನುಷ್ಯ ಹುಲಿಯನ್ನು ಹೆದರಿಸುವುದು (ವರ್ಗ ೫೬F)
೧೮೩೨ ಸ್ವರ ಬದಲಾವಣೆ (ವರ್ಗ ೧೨೩)
೨೨೪೯.೪ ಅತಿಥಿಯಿಂದ ಮೋಸ ಹೋದ ದಂಪತಿಗಳು (ವರ್ಗ ೧೫೫೪)

೫.೧೧ L ಅದೃಷ್ಟ ಬದಲಾವಣೆ :

೧೧೪.೩ ವಿಶೇಷ ನಾಯಕ (ವರ್ಗ ೩೩೩)

೫.೧೨ M ಭವಿಷ್ಯ ನಿರ್ಧಾರ :

೩೬೯.೨.೧ ಬ್ರಾಹ್ಮಣ ಹೊಲತಿಯನ್ನು ಮದುವೆಯಾಗುವನೆಂದು ಭವಿಷ್ಯ ನುಡಿಯುವುದು (ವರ್ಗ ೯೩೦A)
೩೬೯.೧೧ ಪುನರ್ಜನ್ಮದಲ್ಲಿ ಹಂದಿಯಾಗಿ ಹುಟ್ಟುವನೆಂದು ಭವಿಷ್ಯ ನಿರ್ಧಾರ (ವರ್ಗ ೧೮೭೦)
೩೭೧ ಮಗುವನ್ನು ನದಿಯಲ್ಲಿ ತೇಲಿ ಬಿಡುವುದು (ವರ್ಗ ೯೩೦A)

೩೭೧.೪ ಮಗು ಕಳ್ಳನೆಂದು ಭವಿಷ್ಯ ನಿರ್ಧಾರವಾಗುವುದು (ವರ್ಗ ೩೩೩)
೪೬೯,೯ ಗಿಳಿಗಳು ಮಾನವನನ್ನು ಪುನರ್ಜೀವಗೊಳಿಸುವುದು (ವರ್ಗ ೫೪೫)

**೫.೧೩ N ಆಕಸ್ಮಿಕ ಮತ್ತು ಅದೃಷ್ಟ :**

೧.೩ ಆಸ್ತಿ ಅರಮನೆಯನ್ನು ಪಣಕಟ್ಟುವುದು (ವರ್ಗ ೫೯೦A)
೨.೬ ಪಂಥದಲ್ಲಿ ಗಂಡ ಸೋಲವುದು (ವರ್ಗ ೫೯೦A)
೨೧೧.೧ ಮೀನಿನ ಹೊಟ್ಟೆಯಲ್ಲಿ ಉಂಗುರ ಪತ್ತೆಯಾವುದು (ವರ್ಗ ೫೬೦)
೨೬೧ ಮನುಷ್ಯ ಪ್ರಾಣ ಸಹಿತ ಎಲ್ಲವನ್ನು ಕಳೆದುಕೊಳ್ಳುವುದು (ವರ್ಗ ೨೪೮A)
೪೫೪.೨ ಅಶ್ವತ್ಥ ಕಟ್ಟೆಯಲ್ಲಿ ಎಣ್ಣೆ ದೀಪಗಳು ಮಾತನಾಡುವುದು (ವರ್ಗ ೧೩೮೦)
೭೪೭ ಹಾವಿನ ನೋವನ್ನು ಗುಣಪಡಿಸುವುದು
೯೯೧ ಅದ್ಭುತ ವಸ್ತುಗಳಿಂದ ರಾಕ್ಷಸನನ್ನು ಹೆದರಿಸುವುದು (ವರ್ಗ ೨೧೦)
೮೨೫.೨ ಮದುಮಗನ ಮಾನ ಉಳಿಸಿದ ಮುದುಕ (ವರ್ಗ ೧೫೫೦)
೮೨೫.೩.೧ ಮದುವಣಿಗಳನ್ನು ಹುಡುಕುವಲ್ಲಿ ರಾಕ್ಷಸಿಯ ಸಹಾಯ (ವರ್ಗ ೭೨೨A)

**೫.೧೪ P ಸಮಾಜ :**

೧೨.೧೪ ರಾಜನ ಸೌಜನ್ಯ (ವರ್ಗ ೫೨೫N)
೧೬.೪.೧ ಗಂಡ ಹೆಂಡತಿ ಪ್ರಾಣತ್ಯಾಗ ಮಾಡುವುದು (ವರ್ಗ ೭೬೫C)
೨೩೦ ದನಕಾಯುವ ತಬ್ಬಲಿ ಹುಡುಗಿ (೧೬೦)
೨೩೦.೧ ಸಾವಿನಿಂದ ಪಾರು ಮಾಡಿದ ಮಲತಾಯಿ ಮಗ (ವರ್ಗ ೩೨೭)
೨೩೩.೬ ಕಳೆದುಹೋದ ತಂದೆಯ ಹುಡುಕಾಟ (ವರ್ಗ ೫೯೦A)
೨೫೧.೬.೧ ಮೂವರು ಸಹೋದರರು ದೇಶಾಂತರ ಹೋಗುವುದು (ವರ್ಗ ೫೬೬)
೨೫೧.೬.೨ ಕುರುಡ, ಕುಂಟ, ಮೂಕನಿಗೆ ಒಬ್ಬ ಸುಂದರ ತಮ್ಮನಿರುವುದು (ವರ್ಗ ೩೨೭)
೨೫೧.೬.೩ ಏಳು ಜನ ಸಹೋದರರಿಗೆ ಒಬ್ಬಳೇ ತಂಗಿ (ವರ್ಗ ೪೫೦)
೨೬೫.೨ ಪೆದ್ದ ಅಳಿಯ ಕಳ್ಳನಾಗಿ (ವರ್ಗ ೧೨೮೨)
೪೧೧.೪ ಪ್ರಜೆಗಳ ಸುಖ ದುಃಖ ತಿಳಿಯಲು ಊರು ತಿರುಗುವುದು (ವರ್ಗ ೧೩೬೫)

**೫.೧೫ Q ಬಹುಮಾನಗಳು ಮತ್ತು ಮತ್ತು ಶಿಕ್ಷೆಗಳು :**

೨೨೧.೧ ದೇವಕನ್ನೆಯ ಸೀರೆ ಕದ್ದು ಬೂದಿಯಾಗುವುದು (ವರ್ಗ ೫೭೭)

೨೪೧.೧ ಮಿಂಡನನ್ನು ಗಂಡ ಕೊಲ್ಲುವುದು (ವರ್ಗ ೧೩೮೦)
೪೧೧ ಪ್ರಾಣಿಗಳನ್ನು ಬಂಧಿಸಿ ಕೊಲ್ಲುವುದು (ವರ್ಗ ೧೩೦C)
೪೧೧.೪ ತಲೆ ಕಡಿಯುವಂತೆ ಶಿಕ್ಷೆ (ವರ್ಗ ೮೭೫B)
೪೧೧.೧೩ ಕಳ್ಳರನ್ನು ಕುದಿಯುವ ಎಣ್ಣೆಗೆ ಹಾಕುವುದು (ವರ್ಗ ೬೭೬)
೪೧೪.೦.೪ ತಾನೇ ಮೋಸಗೊಂಡ ನರಿ (ವರ್ಗ ೧೭೬)
೪೧೪.೧ ಗೇರುಬೀಜದ ಎಣ್ಣೆಯನ್ನು ತಲೆಗೆ ಹಾಕುವುದು (ವರ್ಗ ೫೧೧)
೪೨೯.೩ ಒಣಕೆಯಲ್ಲಿ ಕುಟ್ಟಿ ಕೊಲ್ಲುವುದು
೪೩೧.೧೮ ಇತರರ ಜೊತೆ ವ್ಯವಹರಿಸಿದ್ದಕ್ಕೆ ಮನೆಯಿಂದ ಹೊರಗೆ ಹಾಕುವುದು (ವರ್ಗ ೫೫೨)
೪೫೧.೯.೨ ಮೊಲೆಯನ್ನು ಸುಟ್ಟುಕೊಂಡ ಹೆಂಗಸು (ವರ್ಗ ೫೧೦)
೫೫೧.೨.೧ ನರಿಯು ಕುಂಡೆ ಬಂಡೆ ಕಲ್ಲಿಗೆ ಅಂಟಿಕೊಳ್ಳುವುದು (ವರ್ಗ ೫೭೧)
೫೫೧.೫.೧ ಮಗಳು ಕುಷ್ಠರೋಗಿಯನ್ನು ಮದುವೆಯಾಗುವಂತೆ ಶಿಕ್ಷೆ (ವರ್ಗ ೫೭೬)

೫.೧೬ R ಬಂಧಿಗಳು ಮತ್ತು ನಿರಾಶ್ರಿತರು :

೧೩೫ ತಬ್ಬಲಿ ಮಕ್ಕಳನ್ನು ಚಿನ್ನದ ಆಚಾರಿ ಸಾಕುವುದು (ವರ್ಗ ೪೦೩)
೨೧೩ ಸುರಂಗ ಮಾರ್ಗವಾಗಿ ಮನೆಯಿಂದ ಪಲಾಯನ (ವರ್ಗ ೭೨೨A)
೨೨೪ ಅಣ್ಣನ ಕಾಟದಿಂದ ಪಾರಾಗುವುದಕ್ಕೆ ತಂಗಿ ಮನೆಬಿಟ್ಟು ಓಡುವುದು (ವರ್ಗ ೭೨೨A)
೨೨೭ ಹೊಲತಿಯ ವೃತ್ತಾಂತ ತಿಳಿದು ಪಲಾಯನ ಗೈದ ಬ್ರಾಹ್ಮಣ (ವರ್ಗ ೯೩೦A)

೫.೧೬ S ಅಸಹಜ ಕ್ರೌರ್ಯ :

೧೧.೩.೩ ಕ್ರೂರ ತಂದೆ (ವರ್ಗ ೪೫೦B)
೨೧ ಕ್ರೂರ ಮಗ (ವರ್ಗ ೪೫೦B)
೩೧ ಮಲತಾಯಿ ಕಾಟ (ವರ್ಗ ೧೬೦)
೩೨ ಕ್ರೂರ ತಾಯಿ ಮಕ್ಕಳನ್ನು ಗೊಬ್ಬರದ ರಾಶಿಯಲ್ಲಿ ಹೂತಿಡುವುದು (ವರ್ಗ ೪೦೩)
೩೪ ಕ್ರೂರ ಅಕ್ಕಂದಿರು (ವರ್ಗ ೪೮೦)
೫೧.೧ ಕ್ರೂರ ಅತ್ತೆ (ವರ್ಗ ೭೬೫C)
೫೫ ಕ್ರೂರ ಅತ್ತಿಗೆಯಂದಿರು (ವರ್ಗ ೪೫೦)
೫೫.೧ ಮೈದುನನನ್ನು ಪರೀಕ್ಷೆಗೊಡ್ಡುವ ಅತ್ತಿಗೆಯಂದಿರು (ವರ್ಗ ೪೦೮)

೬೨ ವ್ಯಭಿಚಾರಿ ಹೆಂಡತಿಗೆ ಶಿಕ್ಷೆ (ವರ್ಗ ೧೩೬೫)
೬೨.೫ ಕ್ರೂರ ಪತ್ನಿಯಂದಿರು (ವರ್ಗ ೪೦೩B)
೬೨.೬ ಹೆಂಡತಿಯನ್ನೇ ಗಂಡ ತಲೆ ಕಡಿಯುವುದು (ವರ್ಗ ೫೧೧A)
೭೩.೧.೩ ದುಷ್ಟ ಸಹೋದರರು (ವರ್ಗ ೫೫೦B)
೧೩೯.೯ ಅಗ್ನಿರಾಶಿಯಲ್ಲಿ ಏಳು ಜನರನ್ನು ಸುಡುವುದು (ವರ್ಗ ೮೯೭)
೧೪೩ ಕ್ರೂರ ತಾಯಿ (ವರ್ಗ ೪೦೩)
೨೬೩.೩ ಸೊಸೆಯನ್ನು ಕೆರೆಗೆ ಬಲಿಕೊಡುವುದು (ವರ್ಗ ೭೬೫C)

೫.೧೮ T ಕಾಮ :

೨೯.೨ ಜಾಣ ಹುಡುಗಿಗೆ ಮೋಹಗೊಳ್ಳುವುದು (ವರ್ಗ ೪೧೨)
೧೧೦ ಋತುವಾಗದ ಹೆಣ್ಣನ್ನು ಮದುವೆಯಾಗುವುದು (ವರ್ಗ ೮೮೮)
೧೧೧ ದೇವತೆಯನ್ನು ಮನುಷ್ಯ ಮದುವೆಯಾಗುವುದು (ವರ್ಗ ೪೧೩)
೧೧೧.೭ ರಾಜಕುಮಾರಿ ಋಷಿಯನ್ನು ಮದುವೆಯಾಗುವುದು (ವರ್ಗ ೧೪೬೮)
೧೨೧ ಪಂಥಕಟ್ಟಿ ಪರಜಾತಿ ಹುಡುಗಿಯನ್ನು ಮದುವೆಯಾಗುವುದು (ವರ್ಗ ೪೧೨)
೧೨೧.೮ ಬಡವನಿಗೆ ಶ್ರೀಮಂತನ ಮಗಳೊಂದಿಗೆ ಮದುವೆ (ವರ್ಗ ೫೫೨)
೪೧೧.೧.೧ ಮಗಳನ್ನು ತಾನೇ ಮದುವೆಯಾಗುವಂತೆ ಡಂಗುರ ಸಾರುವುದು (ವರ್ಗ ೫೧೦)
೫೧೧.೧ ಎಂಜಲು ಹಣ್ಣು ತಿಂದು ಗರ್ಭದಾರಣೆ (ವರ್ಗ ೫೫೨)
೫೧೧.೧.೩ ಗರ್ಭಿಣಿಗೆ ಮಾವಿನ ಹಣ್ಣು ತಿನ್ನಲು ಆಸೆಯಾಗುವುದು (ವರ್ಗ ೫೧೩, ೫೫೨)
೫೪೯ ಕಣ್ಣಿಗೆ ಬಟ್ಟೆಕಟ್ಟಿ ಹೆರುವುದು (ವರ್ಗ ೪೮೦)
೫೪೯.೩ ಮೀನಿನ ರೂಪದ ಮಗು ಹುಟ್ಟುವುದು (ವರ್ಗ ೪೩೩E)
೫೫೪ ಮನುಷ್ಯ ನಾಯಿ ಮರಿಗಳನ್ನು ಹೆರುವುದು (ವರ್ಗ ೫೬೬A)
೫೫೪.೧ ಹೆಣ್ಣು ಹುಲಿಗೆ ಜನ್ಮ ಕೊಡುವುದು (ವರ್ಗ ೫೫೪)
೫೫೪.೪ ಮನುಷ್ಯನಿಗೆ ಮಂಗ ಹುಟ್ಟುವುದು (ವರ್ಗ ೫೫೨)
೫೫೪.೭ ಹೆಣ್ಣು ಹಾವನ್ನು ಹೆರುವುದು (ವರ್ಗ ೫೫೪)
೫೮೧.೧೦ ಅವಳಿ ಮಕ್ಕಳ ಜನನ (ವರ್ಗ ೪೦೩)
೬೪೬ ಹುಲಿಯ ಬೇಟೆಯಿಂದ ಸತ್ತವನ ಮಗನೆಂದು ಜೊತೆಗಾರರು ಚುಚ್ಚಿ ನುಡಿಯುವುದು (ವರ್ಗ ೧೫೭)

**೫.೧೯ V ಧರ್ಮ :**

೨೨೯.೨೬ ಏಕಾಂಗಿ ಬ್ರಾಹ್ಮಣ ಕಾಶಿಗೆ ಹೋಗುವುದು (ವರ್ಗ ೬೫೩A )

**೫.೨೦ X ಹಾಸ್ಯ :**

೧೪೩ ಬಂಡೆಕಲ್ಲಿಗೆ ಅಂಟಿಕೊಂಡ ನರಿಯು ಕುಂಡೆ ಬಿಸಿಲು ಮಳೆಗೆ ಬಿಟ್ಟು ಕೊಳ್ಳುವುದು (ವರ್ಗ ೬೮)

**೫.೨೧ Z ಇತರ ಆಶಯಗಳು :**

೩೯.೯ ವಸ್ತುಗಳನ್ನು ನಿರಂತರವಾಗಿ ಪಡೆಯುವುದು (ವರ್ಗ ೧೭೦A)
೪೧.೬ ಹಕ್ಕಿ ಭತ್ತ ಕುಟ್ಟುವುದು (ವರ್ಗ ೧೨೩)
೭೧.೫ ಏಳು ಸಾಂಕೇತಿಕ ಸಂಖ್ಯೆ (ವರ್ಗ ೫೫೪)
೭೧.೫.೧ ಏಳು ಸಹೋದರರರು ಮತ್ತು ಒಬ್ಬಳು ಸೋದರಿ (ವರ್ಗ ೭೨೨A)
೭೧.೫.೮ ಏಳು ಜನ ಅಣ್ಣಂಧಿರು ಮತ್ತು ಅವರ ಹೆಂಡತಿಯರು (ವರ್ಗ ೫೫೪)
೭೧.೮ ಒಂಭತ್ತು ಸಾಂಕೇತಿಕ ಸಂಖ್ಯೆ (ವರ್ಗ ೫೫೪)
೯೨.೧ ಏಳು ಸಮುದ್ರದಾಚೆ ಮರ
೧೧೧.೨ ಸಾವಿನ ಸಂಕೇತವಾಗಿ ತುಳಸಿಗಿಡ (ವರ್ಗ ೫೭೭)
೧೭೫.೨ ಗಂಡ ಹೆಂಡತಿ ಕಣ್ಣಿಗೆ ಬಟ್ಟೆ ಕಟ್ಟಿ ಸಿಹಿ ತಿನ್ನುವುದು (ವರ್ಗ ೧೫೪೪)

ಪ್ರಸ್ತುತ ಅಧ್ಯಯನದಲ್ಲಿ ಸುಳ್ಯ ಪರಿಸರದಲ್ಲಿ ಜನಪ್ರಿಯವಾಗಿರುವ ಗೌಡ ಕನ್ನಡದಲ್ಲಿ ಉಪಲಬ್ಧವಿರುವ ನೂರು ಕಥೆಗಳನ್ನು ಸಂಗ್ರಹಿಸಿ ಆರ್ನೆ ಥಾಮ್ಸನ್ನರ ಮಾದರಿಯಲ್ಲಿ ಅವುಗಳ ವರ್ಗ ಮತ್ತು ಆಶಯಸೂಚಿಗಳನ್ನು ಸಿದ್ಧಪಡಿಸಲಾಗಿದೆ. ಈ ವರ್ಗ ಮತ್ತು ಆಶಯ ಸೂಚಿಗೆ ಹಿನ್ನೆಲೆಯಾಗಿ ಜನಪದ ಕಥೆಗಳಲ್ಲಿ ವರ್ಗ ಮತ್ತು ಆಶಯಗಳು ಕ್ರಿಯಾಶೀಲವಾಗುವ ಬಗೆಯನ್ನು ಪರಿಚಯಿಸಲಾಗಿದೆ. ಕನ್ನಡ ಮತ್ತು ತುಳುವಿನಲ್ಲಿ ಇದುವರೆಗೆ ಈ ಕ್ಷೇತ್ರದಲ್ಲಿ ನಡೆದ ಅಧ್ಯಯನವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಲಾಗಿದೆ. ಕಥೆಗಳಿಗೆ ಹಿನ್ನೆಲೆಯಾಗಿ ಗೌಡ ಜನಾಂಗದ ಭೌಗೋಳಿಕ ಪರಿಸರ, ಗೌಡ ಶಬ್ದದ ಪ್ರಾಚೀನತೆ ಮತ್ತು ಅರ್ಥ, ಗೌಡರ ಪೂರ್ವ ಪರಿಚಯ, ಗೌಡರ ಕುಟುಂಬ ಪದ್ಧತಿ ಇವುಗಳನ್ನು ಪರಿಚಯಿಸಲಾಗಿದೆ. ಗೌಡ ಕನ್ನಡ ಭಾಷೆಯ ಸಾಮಾನ್ಯ ಪರಿಚಯವನ್ನು ನೀಡಲಾಗಿದೆ.

ಜನಪದ ಕಥೆಗಳನ್ನು ಗಮನದಲ್ಲಿರಿಸಿಕೊಂಡು ಬಗೆ ಬಗೆಯ ಅಧ್ಯಯನಗಳನ್ನು ನಡೆಸಬಹುದು. ಆದರೆ ಇಲ್ಲಿ ಒಂದು ಸೀಮಿತ ಅವಧಿಯಲ್ಲಿ ಕೆಲಸ ಮಾಡಬೇಕಾದುದರಿಂದ ವರ್ಗ ಮತ್ತು ಆಶಯಗಳನ್ನು ಮಾತ್ರ

ಗುರುತಿಸುವ ಕೆಲಸವನ್ನು ಮಾಡಲಾಗಿದೆ. ಹೀಗೆ ಮಾಡುವಾಗ ಗೌಡ ಕನ್ನಡದಲ್ಲಿ ಲಭ್ಯವಿರುವ ಎಲ್ಲ ಜನಪದ ಕಥೆಗಳನ್ನೂ ಸಂಗ್ರಹಿಸಿಕೊಳ್ಳಲಾಗಿಲ್ಲ. ಬದಲು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ನೂರು ಕಥೆಗಳನ್ನು ಮಾತ್ರ ಆಧರಿಸಿಕೊಳ್ಳಲಾಗಿದೆ. ಇಲ್ಲಿ ಕಥೆಗಳ ಸಂಗ್ರಹ ಕಾರ್ಯವೇ ಸಾಕಷ್ಟು ಸಮಯವನ್ನು ತೆಗೆದುಕೊಂಡಿತು.

ಸಂಗ್ರಹಿಸಿದ ಕಥೆಗಳನ್ನು ಲಿಖಿತರೂಪಕ್ಕೆ ಇಳಿಸಲು ಇನ್ನಷ್ಟು ಸಮಯ ಬೇಕಾಯಿತು. ಅನಂತರ ಕಥೆಗಳ ವರ್ಗಸೂಚಿಯನ್ನು ಸಿದ್ಧಪಡಿಸಲಾಯಿತು. ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನ ೭ ಹೊಸ ಉಪ ವರ್ಗಗಳನ್ನು ಗುರುತಿಸಲಾಗಿದೆ.

**ಹೊಸ ಉಪವರ್ಗಗಳು :**

೧. ೫೬F ಮೋಸ ಮಾಡಲು ಹೋದ ನರಿಯು ತನ್ನ ಬಲೆಯಲ್ಲಿ ತಾನೇ ಸಿಲುಕುವುದು. (ಗೌಕಜಕ ೨.೩.೪)

೨. ೪೩೩E ಮೀನಿನ ಹೆಂಡತಿ–ತಂಗಿಯ ಮತ್ಸರ. ಹುಡುಗಿ ಮೀನನ್ನು ಮದುವೆಯಾಗುವುದು. ಅವಳ ತಂಗಿ ಮತ್ಸರದಿಂದ ಬಾವಿಗೆ ದೂಡುವುದು (ಗೌಕಜಕ ೩೮)

೩. ೪೫೦B ಅಣ್ಣನು ಮರವಾಗಿ ಪರಿವರ್ತನೆಯಾಗುವುದು. ತಂಗಿಯನ್ನು ಶಿಕ್ಷಿಸಿದ ಅಣ್ಣನನ್ನು ಅಪ್ಪ ಕೊಂದಾಗ ಮರವಾಗಿ ಪರಿವರ್ತನೆಯಾಗುವುದು. (ಗೌಕಜಕ ೪೮)

೪. ೫೧೧B ಸಹಾಯಕ ಎತ್ತುಗಳು (ಗೌಕಜಕ ೪೭)

೫. ೫೫೦B ಕೊಪ್ಪರಿಗೆಗೆ ಹುಡುಕಾಟ. ಸಹೋದರರಿಬ್ಬರು ಕೊಪ್ಪರಿಗೆಗಾಗಿ ಪರಸ್ಪರ ಹೊಡೆದಾಡಿ ಸಾಯುವುದು. (ಗೌಕಜಕ ೫೦)

೬. ೫೬೬A ಮಾಂತ್ರಿಕ ಹಣ್ಣು ತಿಂದು ಮಕ್ಕಳಾಗುವುದು (ಗೌಕಜಕ ೬೦)

೭. ೭೬೫C ಮಾವ ಸೊಸೆಯನ್ನು ಕೆರೆಗೆ ಬಲಿ ಕೊಡುವುದು. ಮಗನನ್ನು ಬಲಿ ಕೊಡಬಯಸಿದ ತಾಯಿ (ಗೌಕಜಕ ೭೪, ೭೫)

ಅನಂತರ ೩೨೦ ಆಶಯಗಳನ್ನು ಪಟ್ಟಿಮಾಡಿ ಅವುಗಳ ಸೂಚಿಯನ್ನು ಸಿದ್ಧಪಡಿಸಲಾಯಿತು. ಸಂಗ್ರಹಿಸಲಾದ ೧೦೦ ಕಥೆಗಳಲ್ಲಿ ಇನ್ನೂ ಹಲವು ಆಶಯಗಳಿವೆ ಎಂಬುದು ಸ್ಪಷ್ಟ. ಪ್ರಸ್ತುತ ಅಧ್ಯಯನದಲ್ಲಿ ಅವೆಲ್ಲವನ್ನೂ ಸುದೀರ್ಘವಾಗಿ ಪಟ್ಟಿ ಮಾಡದೆ ಮುಖ್ಯವಾದ ಕೆಲವು ಆಶಯಗಳನ್ನು ಮಾತ್ರ ಗಮನಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವರ್ಗಸೂಚಿ ಮತ್ತು ಆಶಯಸೂಚಿಯನ್ನು ಸಿದ್ಧಪಡಿಸುವಾಗ ಸಂಶೋಧಕನು ಇದಿರಿಸಬೇಕಾಗುವ ಸಮಸ್ಯೆಗಳನ್ನು ಪ್ರಾಯೋಗಿಕವಾಗಿ ಪರಿಶೀಲಿಸಿಕೊಳ್ಳಲಾಗಿದೆ. ಈ ನಿಟ್ಟಿನಲ್ಲಿ ಇದು ಸಮಗ್ರ ಅಧ್ಯಯನವಲ್ಲ. ಬದಲು ಪ್ರಾಯೋಗಿಕ ಮಹತ್ವದ ಆಂಶಿಕ ಪ್ರಯತ್ನ.

○

# ಅನುಬಂಧ

೧. ಗೌಡ ಕನ್ನಡದ ಕೆಲವು ಜನಪದ ಕಥೆಗಳು

೨. ನಿರೂಪಕರ ವಿವರ

೩. ಪರಾಮರ್ಶನ ಗ್ರಂಥಗಳು

೪. ಪದಸೂಚಿ

ಅನುಬಂಧ : ೧

## ಗೌಡ ಕನ್ನಡದ ಕೆಲವು ಜನಪದ ಕಥೆಗಳು

### ೧.೧ ಹಂದಿಯ ಹೊಟ್ಟೆಯಿಂದ ಮನುಷ್ಯನನ್ನು ಹೊರತೆಗೆಯುವುದು.

[(ಗೌಕಜಕ–೨೪) (ವರ್ಗ–೩೩೩)]

ಒಂದ್ ಊರ್‍ಲಿ ಒಂದ್ ಅಜ್ಜಿ ಇತ್ತ್, ಅಜ್ಜಿಗೆ ಮೂರ್ ಮಕ್ಕ ಇದ್ದೊ. ಮಕ್ಕಳಿಗೆ ಯಾಗೊಳ್ ಬೇಟೆ ಕೆಲ್ಸ. ಬೇಟೆ ಕೆಲ್ಸಂತ ಹೇಳಿಕನ ಕತ್ತಲೆಗೆ ಯಾಗೋಳ್ ಗೈಪ್‌ಗೆ ಏಂತಂತ ಒಬ್ಬಂದ ಒಬ್ಬ ಕೇಳಿಕೊಂಬೊದ್. ಆಗ ಅಯ್ಯೆ ಹೇಳ್ದು ನೀ ತಂದ ಕಡವೆ. ಮತ್ತೊಬ್ಬ ಹೇಳಿಕೆ ಆತ್ ನೀ ತಂದ ಕೆಂಪ. ಮತ್ತೊಬ್ಬ ಹೇಳಿಕೆ ಆತ್ ನೀ ತಂದ ಸಾರಂಗ. ಹೀಂಗೇ ಚರ್ಚೆ ಮಾಡ್ತಾ ಇದ್ದೊ. ಈ ಅವ್ವ ಯಾಗೋಳ್, ಇದರ ಹುಳಿ ರಗಳೆ ಇದ್‌ಂತ ಹೇಳಿ ಒಂದಿನ ಕಾಡಿಗೆ ಹೋದೊ. ಕಾಡಿಗೆ ಹೋಗಿ ಹೋಗಿ ಹೋಗಿ ಎಲ್ಲಿ ಹೋದರೂ ಇವ್‌ಕ್ಕೆ ಏನೂ ಕಾಂಬಕ್ಕೆ ಸಿಕ್ಕುದ್ಲೆ. ಒಂದ್ ದೊಡ್ಡಾ ಬೆಟ್ಟದಡಿಗೆ ಹೋದೊ. ಹೋಕನ ದೊಡ್ಡಾ ದೊಂದ್ ಹಂದಿ ಕಾಂಬಕೆ ಸಿಕ್ಕಿತ್. ಹಂದಿನ ಬೇಟೆ ಆಡ್ದೊ. ಆಡಿ ಆಡಿ ಆಕನ ಲಾಸ್ಟಿಗೆ ಇವರ ಹಂದಿ ನುಂಗಿತ್. ಒಬ್ಬನ ನುಂಗಿತ್, ಇಬ್ಬರ ನುಂಗಿತ್, ಮೂರನೆಯವನನೂ ನುಂಗಿತ್. ಲಾಯಿಕಾತ್. ಇವ್‌ಕೆ ಯಾರಿಗಾದರೂ ಗೊತ್ತ್‌ಟ್ಟ. ಮನೇಲಿದ್ದವ್‌ಕ್ಕೆ. ಅದರ್‍ಲಿ ದೊಡ್ಡಂವನ ಹೆಣ್ಣ್ ಬೊಸ್‌ರಿ ಹೆಂಗ್ಸ್. ಅದ್ ತಿಂಗ ಬರ್‍ತಿಯಾಗಿ ಹೆತ್ತತ್. ಹೆತ್ತ್ ಆಕನ ಗಂಡ್ ಕೂಸ್. ಸುಮಾರ್ ಸಮಯ ಒಂದ್ ವರ್ಷ, ಎರಡ್ ವರ್ಷ ಕಳ್ದಕೂಡ್ಲೆ ಕೂಸ್‌ನ ಶಾಲೆಗೆ ಕಳ್ಸಿದೊ. ಶಾಲೆಗೆ ಕಳ್ಸಿ ಈ ಶಾಲೆಲಿ ಎಲ್ಲಾ ಮಕ್ಕಳಿಂದ ಉಷಾರ್ ಇಂವ. ಎಲ್ಲವೂ ಇಂವಂಗೆ ಜೋರ್ ಮಾಡ್ದ್. ನೀ ಎಷ್ಟ್ ಉಷಾರಿದ್ದರೆ ಏನಿಯ. ನಿನ್ನ ಅಪ್ಪಂದರ ಮೂರ್ ಜನನ ಹಂದಿ ನುಂಗಿಟ್ಟ್. ಹೀಂಗೇ ತಮಾಷೆ ಮಾಡ್ದ್. ಹೌದ ಅಂತ ಯಾಗೋಳ್ ಇಂವ ನೆಂಪು ಮಾಡಿಕೊಂಡ್ ಮನೆಗೆ ಹೋದು. ಮನೆಗೆ ಹೋಕನ ಇಂವಂಗೆ ನೆಂಪೇ ಬಾರಟ ಇಲ್ಲೆ. ಒಂದ್ ದಿನ ಈ ಮಕ್ಕ ಹೇಳ್ಕನ ಬ್ಲೇಡ್ ತಕಂಡ್ ಬೆರ್‍ಲ್ ಕೊಯ್ಕಂಡತ್. ಕೊಯ್ದ್ ಕತ್ತಲೆಗೆ ಮಿಂದ್ ಊಟ ಮಾಡಿಕನ ಗೈಪ್‌ಗೆ ಕೈಹಾಕಿಕನ ಕೈ ಉರ್‍ತ್. ಅಷ್ಟಾಕನ ಅವ್ವನ ಕರ್‍ತ್. ಇಂವ. ಅವ್ವವ್ವ ಹೀಂಗೆ ಶಾಲೆಲಿ ಯಾಗೋಳ್ ಮಕ್ಕ ನನ್ನ ತಮಾಷೆ ಮಾಡ್ವೆ. ಎಂತದ್ ಹೌದೊ.

ಅದರ ಈಗ ಹೇಳೊಕ್. ಹಾಂಗೆ ಕಡೆಗೆ ಅಪ್ಪ ಅತ್ತ್‌ಕಂಡ್ ಮರ್ವ್‌ಕಂಡ್ ಹೇಳ್ತ್. ಏನ್ ಮಾಡ್ದು ಮಂಜ. ನಮ್ಮ ಹಣೇಬರ. ಯಾರೂ ನೋಡುವವು ಇಲ್ಲೆ. ಹುಡ್ಕಪವ್ ಇಲ್ಲೆ. ಕಾಡ್‌ವದಿಲ್ಲೆ. ಆಕೇರಿಗೆ ಇಂವ ವಿದ್ಯಾಭ್ಯಾಸ ಎಲ್ಲ ಕಲ್ತ್ ದೊಡ್ಡಾ ಬುದ್ಧಿವಂತ ಆತ್. ಅಕೇರಿಗೆ ಹಂಗೆ ಚಿಟ್ಟೆಕ್ಕಿ ಬಿಲ್ಲ್ ಮಾಡಿ ಕೊಡೊ ಕವ್ವಾಂತ ಅಪ್ಪನೊಟ್ಟಿಗೆ ಒತ್ತಾಯ ಮಾಡ್ತ್. ಮಕ್ಕಳ ಒಂದೊಂದು ಅಭ್ಯಾಸ ಉಟ್ಟಲ್ಲ. ಹಂಗೆ ಒಂದಿನ ಚಿಟ್ಟೆಕ್ಕಿ ಬಿಲ್ಲ್ ಎಲ್ಲ ಮಾಡಿ ಕೊಟ್ವೊ ಇಂವಂಗೆ. ಇಂವ ಒಂದಿನ ಎರಡ್ ನಾಯಿಗಳ ಕರ್‍ಕೊಂಡ್ ಹೋತ್. ಹೋಗಿ ಹೋಗಿ ಹೋಗಿ ಸುಮಾರ್ ದೂರ ಹೋತ್. ಹೋಗಿ ಹೋಗಿ ಆಕನ ಇಂವಂಗೆ ಕುಡಿಯಕ್ಕೆ ಆಗಿದ್ ಏನೂ ಬೊತ್ತ್. ನಾಯಿಗಳೊಟ್ಟಿಗೆ ಜೋರ್ ಮಾಡ್ತ್. ಹೋಗಿ ನಾಯಿಗಳೇ. ಎಲ್ಲಿಯಾದರ್ ನೀರಿದ್ದರೆ ಹುಡ್ಕಿಕಂಡ್ ಬನ್ನಿ. ಹಾಂಗೆ ನಾಯಿಗ ಹೋಗಿ ಹುಡ್ಕಿದೊ. ಹುಡ್ಕಿ ಆಕನ ಒಂದ್ ಹೆಂಗ್ಸ್‌ನ ಮನೆ ಹಕ್ಕಳೆ ಹೋದೊ. ಇಂವನ ಕರ್ಕಂಡ್. ಹೋಗಿ ಆ ಮನೆ ಹಕ್ಕಳೆ ಹೊಂಡ ಉಟ್ಟ್. ಈ ಹೊಂಡಲಿ ಏಂತರ ಕುಡೀದಪ್ಪ. ಅವರ ಮನೆಗೆ ಹೋಗಿ ಕುಡೀವಪ್ಪ ಅಂತ ಹೇಳಿ ಮನೆಗೆ ಹೋಗಿ ಕುಡೀವಪ್ಪ ಅಂತ ಹೇಳಿ ಮನೆಗೆ ಹೋಗಿ ಇಂವ ಹತ್ತಿಕಂಡ್ ಹೋತ್. ಹೋಗಿ ಯಾರ್ ಮನೆಯವು, ಯಾರ್ ಮನೆಯವು ಅಂತ ಕರ್‍ದೊ. ಹಂಗೆ ಒಂದು ಗ್ಲಾಸ್ ಕುಡಿಯಕ್ ಬೇಕ್‌ಂತ ಹೇಳ್ದೊ. ಕುಡಿಯಕ್ಕೆಲ್ಲ ತಂದ್ ಕೊಟ್ಟೊ. ಕುಡ್ದೊ. ಕುಡ್ದ್ ತಿರ್ಗಿ ಬಂದೊ. ಕುಡ್ದು ಬಂದ್ ಅರ್ಧ ಮೈಲ್ ಒಂದ್ ಮೈಲ್ ಸುತ್ತಿದೊ. ಸುತ್ತಿ ಯಾಕನ ಹಂದಿ ಕಾಂಬಕೆ ಸಿಕ್ಕಿತ್. ಹಂದಿ ಜೋರ್ ಮಾಡಿಕಂಡ್ ಹೋತ್ ನಾಯಿ ಎದ್‌ರ್. ಆಗ ಇಂವ ಒಂದ್ ಬಿಲ್ಲ್‌ಕಲ್ ಎಲ್ದ್ ಬುಟ್ಟತ್. ಹಂದಿನ ಹಣೇನ ನಡೂವಿಗೆ. ಹಂದಿ ಬೀತ್. ಹಂದಿ ಬಿದ್ದ ಕೂಡ್ಲೆ ಹಂದಿನ ಹೊಟ್ಟೆ ಬಾರೊಕಲ್ಲ. ಈಗ ಏನ್ ಮಾಡ್ದುಂತ ಹೇಳಿ ಒಂದ್ ಅಂದಾಜ್ ಮಾಡಿ ಹೊಟ್ಟೆ ಬಾರ್ತ್. ಹೊಟ್ಟೆ ಬಾರಿ ಸುಮಾರ್ ಹೊತ್ತಾಕನ ಅಪ್ಪನವ್ ಸಿಕ್ಕಿದೊ. ಇಂವಂಗೆ. ನೋಡ್ಕನ ಜೀವಲಿ ಒಳೊ. ಇವ್‌ಕ್ಕೆ ಒಂದ್ ದೇವರ ಶಾಪ ಉಟ್ಟ್. ದೇವರ ಶಾಪಕ್ಕೋಸ್ಕರ ಮೂರ್ ಕಲ್ಲಿತ್ತ್. ಆ ಕಲ್ಲ್‌ನ ಮೂರ್ ಕಲ್ಲಿತ್ತ್. ತೆಗ್ದ್‌ತಲೆ ಕಪ್ಪ ಹೆರ್ಕಿ ಇಟ್ಟತ್. ಆಗ ಇವ್ ಅಯ್ಯಪ್ಪಂತ ಮೂರ್ ಜನ ಎದ್ದ್ ಕುದ್ದೊ. ಹಾಂಗೇ ಮನೆಗೆ ಹಂದಿನ ಹೊತ್ತ್‌ಕೊಂಡ್ ಇವ್ ಅಯ್ಯೆ ಮಕ್ಕೇಂತ ಹೇಳಿ ಬಂದೊ. ಬಂದ್ ಕತ್ತಲೆಗೆ ಹೀಂಗೆ ಈ ಕಥೆನ ಹೇಳಿ ಅವು ಸುಖ ಸಂತೋಷಲಿ ಒಳೊ.

– ಹೋಗಿ ನೀವು ನೋಡಿ ಕಂಡ್ ಬರಕಡ.

## ೧.೨ ನರಿ ಮನುಷ್ಯನನ್ನು ಮೋಸಮಾಡುವುದು.

[(ಗೌಕಜಕ–೫)(ವರ್ಗ–೬೮)]

ಒಂದ್ ಊರ್ಲಿ ಒಂದ್ ಅಯ್ಯೆ ಅಪ್ಪಂಗೆ ಮೂರ್ ಗಂಡ್ ಮಕ್ಳೊ ಇದ್ದೊ. ಇವ್ ಗದ್ದೆ ಹೂಡಿ, ಸೋಂತೆಸಾಲ್ ತೆಗ್ದ್ ಸೋಂತೆ ಹಾಕಿದೊ. ಈ ಸೋಂತೆನ ತಿಂಬಕ್ಕೆ ಕುದ್ಕಂಗ ಬಂದವೆ ಜೋರಾಗಿ. ಹೀಂಗೆ ಒಂದ್ ದಿನ ಆಲೋಚನೆ ಮಾಡ್ಡೊ. ಏನ್ ಮಾಡ್ದು ಇದಕ್ಕೆ. ಅಪ್ಪಾಕನ ಒಬ್ಬನ ಆಲೋಚನೆ ಆತ್. ದಿನಾ ಹೋಗಿ ಒಬ್ಬೊಬ್ಬ ಪಾರಕುದ್ದರೆ ಆದುಂತ. ಇಂತ ಬಂದರೆ ಏನ್ ಕತೆ. ಏನ್ ತಿಂಬೊದು. ಹಾಂಗೆ ಮಾಡಕೋಲ್ ಎಲ್ಲ ಕಟ್ಟಿದೊ. ಆದಿನ ಕತ್ತಲೆಗೆ ಸ್ವಲ್ಪ ಸೌದೆ ಎಲ್ಲ ಕೂಡಿ ಇಸಿದೊ. ಅಲ್ಲಿ ಮಾಡಕೋಲ್ ಅಡಿಲಿ. ಆಗ ಕತ್ತಲೆಗೆ ಊಟ ಮಾಡಿ ಒಬ್ಬಹೋತ್. ಹೊತ್ ಒಂದ್ ಅಂಡಟ್ಟೆ ಅಲ್ಲ ತಯಾರಿಸಿದೊ. ಹಾಂಗೆ ಇಂವ ಸುಮಾರ್ ಹೊತ್ತ್ ಅಂಡಟ್ಟೆ ಎಲ್ಲ ಹೊಡ್ತ್. ಅಂಡಟ್ಟೆ ಹೊಡ್ದ್ ಸುಮಾರ್ ಹೊತ್ತಾಕನ ನಿದ್ದೆ ಬಾತ್. ಇಂವ ಮಲಗಿತ್. ಬೆಳಿಗ್ಗೆ ಎದ್ದ್ ನೋಡ್ರೆ ಯಾಗೋಳ್‌ನಾಂಗೆ ತಿಂದ್‌ಕೊಂಡ್ ಹೋದು ಇದ್. ಮೂರನೆ ದಿನ ತಮ್ಮ ಬಾತ್. ನೀ ಏಂತದ್. ನೀ ಹೋಗಿ ಸೋಂತೆಕಾಯಿ ಪೂರಾ ಇದ್ದದರ ಹೊತ್ತ್ ಕಂಡ್ ಹೋಗೊಳೊ. ಬೆಳ್ದದ್ ಒಂದೂ ಇಲ್ಲೆ. ಅಣ್ಣಂಗೆ ಜೋರ್ ಮಾಡ್ತ್ ತಮ್ಮ. ಅಂದರೆ ನೀ ಹೋಗ್‌ಂತ ಅಣ್ಣ ಹೇಳ್ತ್. ಹಾಂಗೆ ಮೂರನೆ ದಿನ ತಮ್ಮ ಹೋತ್.

ಇವನ್‌ನೂ ಹೋತ್. ಹಾಂಗೆ ಕುದ್ದತ್ ಸುಮಾರ ಹೊತ್ತ್. ಕುದ್ದ್‌ದ್ ಪಾರಕಾತ್. ಪಾರಕಾದಾಕನ ಚಳಿ ಹಿಡ್ತ್. ಹನೀಸ್ ಕಿಚ್ಚಿ ಹಾಕಮಾಂತಾತ್. ಕಿಚ್ಚಿಹಾಕಿತ್. ಸುಮಾರ್ ಹೊತ್ತ್ ಕುದ್ದತ್. ಕುದ್ದ್ ಕುದ್ದ್ ಇವಂಗೆ ಸಾಕಾತ್. ಇದ್ ಯಾವಾಗ ಬಾದುಂತ ಹೇಳಿ ಪಾರ ಕಾಯ್ದ್. ಅಪ್ಪಾಕನ ನಿದ್ದೆ ಬಾತ್. ಇಂವ ಮಲಗಿತ್. ಮಲಗಿ ಘೋರವಾದ ನಿದ್ದೆ ಆತ್. ಬೆಳಿಗ್ಗೆ ಎದ್ದ್ ನೋಡ್ರೆ. ಕತೆ ಅವಂದ್‌ನೂ ಅಣ್ಣನಹಂಗೇ ಆತ್. ಬೆಳಿಗ್ಗೆ ಮತ್ತೊಬ್ಬ ತಮ್ಮ ಬಂದ್ ಅಣ್ಣಂಗೆ ಜೋರ್ ಮಾಡ್ತ್. ನೀನ್‌ನೂ ಹೀಂಗೆ ಮಾಡ್ದ ಮಾರಾಯ. ಇದ್ದ ಸೋಂತೆನ ಎಲ್ಲಾ ಅಣ್ಣ ತೀಂಸಿತ್. ಅದರ್ಲಿದ್ದ ಎಲೆ ಮಿಡಿನ ಪೂರಾ ತಮ್ಮ ತೀಂಸಿತ್. ಲಾಯಕ್ ಆತ್. ಇನ್ನ್ ನಾನೆ ಹೊನೆ ನೋಡೊಂಬ. ಇಂವ ಒಂದ್ ಬರೆಂಗೋಲ್ ತೆಕನ್ತ್. ಒಂದ್ ಕೊಳಲೂ ಮಾಡ್ತ್. ಕತ್ತಲೆಗೆ ಊಟ ಮಾಡಿ ಹೋತ್. ಹೋಗಿ ಮಾಡಕೋಲ್ ಅಡಿಲಿ ಅಗುಟೆಗೆ ಕಿಚ್ಚಿ ಹಾಕಿತ್. ಈ ಬರೆಂಕೋಲ್ ತೆಗ್ದ್ ಕಿಚ್ಚಿಗೆ ಇಸಿತ್. ಇಸಿದ್ ಇಂವ ಕೊಳಲ್ ಊದಿಕೊಂಡ್ ಕುದ್ದತ್. ಕುದ್ದ್ ಸುಮಾರ್ ಹೊತ್ತಾಕನ ಕುದ್ಕ ಬಾತ್. ಬಂದ್ ಇಂವನ ಕೊಳಲ್ ಉರ್ಗುದರ ನೋಡಿ ಬಾರಿ ಖುಷಿಯಾತ್. ಬಾತ್. ಬಂದ್ ಅಣ್ಣ ಅಣ್ಣನ ನಿನ್ನ ಕೊಳಲೊಮ್ಮೆ ನಂಗೆ ಉರ್ಗೊಕಾಕಿತ್ತ್. ಕೊಟ್ಟಿಯ ನಂಗೆ. ನೀ ಕೂಡ್. ನಾ ಉರ್ಗುದರ ಕೇಳ್.

ಹಂಞ ಲಾಯಕ್‌ಲಿ. ತಿರ್‍ಗಿ ಜೋರ್ ಮಾಡ್ತ್. ಹಂಗೇ ಇಂವ ಉರ್‍ಗುದು. ಇದ್ ಕೇಳ್ದು. ಇಂವಂಗೆ ಹಂಞ ಬಚ್ಚಿದಂಗೆ ಆತ್. ಅಪ್ಪಾಕನ ನೀ ಹಂಞ ತಿರ್‍ಗಿ ತಿರ್‍ಗಿ ಕುದ್ದ್‌ರ್. ಎಂತರ ಉರ್‍ಗಿದರನ್ನೇ ಉರ್‍ಗುದು. ಕೇಳಿದರನ್ನೇ ಕೇಳುದ್ದುಂತ ಕುದ್ಕ ನೊಟ್ಟಿಗೆ ಹೇಳ್ತ್. ಇಂವ ಮೆಲ್ಲ ಬರೆಂಗೋಲ್ ತೆಗ್ತ್. ಅದ್ ಅತ್ತ ತಿರ್‍ಗುದುನು ಇಂವ ಮೆಲ್ಲ ಪುಕ್‌ಳಿ ಒಟ್ಟೆಗೆ ಚಿರ್ತ್. ಚಿರಿಯುಕನ ಇದ್ ಹರಿಬಿದ್ದ್ ಓಡ್ರೆ ಉಟ್ಟಲ್ಲೆ. ಓಡಿಕೆ ಆಕನ ಅತ್ತುಂದ ಒಂದ್ ಬೊಸ್‌ರ್ ಕುದ್ಕ ಇಲ್ಕೊಂಡ್ ಬಂದದೆ. ಎಂತದಣ್ಣ, ಎಂತದಣ್ಣ. ಎಂತದಣ್ಣ ಇದ್. ಎಂತದಣ್ಣ, ಎಂತದಣ್ಣಂತ ಕೇಳಿಕೆ ಗೊತ್ತ್‌ಟ್ಟ ಇವಕ್ಕೆ. ಈ ಉರಿಸ ಹೊತ್ತ್‌ಕಂಡ್ ಓಡುವೇ ಒಂದ್ ಕೆಲಸ. ಈ ಬೊಸ್‌ರ್ ಕುದ್ಕ ಅಲ್ಲಿಂದತ್ತ ಮೆಲ್ಲಾಂಗೆ ಓಡ್ತ್. ಮತ್ತೆಂತ ಅದಕ್ಕೆ ಓಡಿಕೆ ಆದೆನ. ಹೋಕನ ಒಂದ್ ಹಾಲ್ ಬಳ್ಳಿನ ಸಿಡಿ ಚಿಗಿದ್ ಹಾಕಿಕಂಡ್ ಹೋತ್. ಅದಕ್ಕೆ ಒಂದ್ ಆನೆ ಬಂದ್ ಅಲ್ಲದವರ ಹಾಂಗೆ ಕಾಲ್ ಹೆಟ್ಟಿ ಮಲಗಿತ್.

ಮಾರನೆ ದಿನ ಕುದ್ಕ ಬಂದ್ ಎದ್ದ್ ನೋಡ್ಕನ ಆನೆ ಬಿದ್ದ್‌ಕೊಂಡಟ್ಟಲ್ಲ. ಇದ್ ಇದರ ಜಾತಿಯುವ್‌ಕ್ಕೆ ಎಲ್ಲಾ ಹೇಳ್ತ್. ನಾ ಒಂದ್ ದಾರ್‍ಲಿ ಸಿಡಿಹಾಕಿ ಇಸಿದ್ದೆ. ಒಂದ್ ಆನೆ ಬಂದ್ ಬಿದ್ದುಟ್ಟ್‌ಂತ. ಹಂಗೆ ಒಂದ್ ಏಳೆಂಟ್ ಹತ್ತ್ ಕುದ್ಕಂಗ ಬಂದೊ. ಒಂದ್ ನಾಲ್ಕೈದ್ ಆಚೆ ಮೈಗೆ ಕುದ್ದೊ. ಒಂದ್ ನಾಲ್ಕೈದ್ ಈಚೆ ಮೈಗೆ ಕುದ್ದೊ. ತಿಂಬಕೆ ಸುರ್‌ಮಾಡ್ದೊ. ಆಚೆ ಮೈಂದ ಅಗಿಯುಕೆ ಸುರ್‌ಮಾಡ್ದೊ. ಈಚೆ ಮೈಂದ ಅಗಿಯುಕೆ ಸುರ್‌ಮಾಡ್ದೊ. ಇದ್ ಮೆಲ್ಲ ಮಗ್ದ್ ಆಚೆ ಮೈಗೆ ಬೀತ್. ಅಣ್ಣಣ್ಣಣ್ಣಾ ನೂಕ್ಬೆಡಿ ನೂಕ್ಬೆಡಿ. ನೂಕ್ಬೆಡಿ ನೂಕ್ಬೆಡಿಂತ ಹೇಳ್ಕನ ಈಚೆ ಮೈಲಿದ್ದವ್ ಪೂರ ಚಟ್ನಿ. ಅಪ್ಪಾಕನ ಮೆಲ್ಲ ಈಚೆ ಮೈಂದ ಮಗ್ದ್ ಆಚೆ ಮೈಗೆ ಬೀತ್. ಅಣ್ಣಣ್ಣಣ್ಣಾ ಏಂತ ನಿಮ್ಮ ಸಂಗತಿ ಇದ್. ನೂಕ್ಬೆಡಿಂತ ಹೇಳ್ದ್ರೆ ಕೇಳ್ದ್‌ಲೆ. ಅದರ್‍ಲಿ ಒಂದ್ ಕುದ್ಕ ಅತ್ತತ್ತ ರೆಟ್ಟಿ ಒಳ್ದೋತ್. ಇದ್ ಬುಟ್ಟತ್ ಓಡ್ತ್. ಓಡ್ಯಾಕನ ದೊಡ್ಡೋ ಒಂದ್ ಆಡ್ಕಲಿ ಒಂದು ಆನೆ ಬಿದ್ದ್ ಸತ್ತ್ ಹೋಗುಟ್ಟ್. ಹೊಕ್ಕ್‌ಳಿ ಅರಳಿ ದೊಡ್ಡ ಇದರಂಗೆ ಆಗುಟ್ಟ್. ಹೊರಗೆ ತಿಂದರೆ ಆಕಿಲ್ಲೆಂತ ಹೇಳ್ತ್. ಹೊಕ್ಕ್‌ಳಿ ದೊಡ್ಡದ್ ಕಂಡದೆ ಅಲ್ಲಂತ ಒಳಗೆ ಹುಕ್ಕತ್. ಒಳಗೆ ಕುದ್ದ್ ತಿಂದ್ ತಿಂದ್ ಆಕನ ಈ ಹೊಕ್ಕ್‌ಳಿ ಒಟ್ಟೆ ಅಡ್ದ್ ಹೋಗಲಿ. ಈ ದನ ಮಕ ದನ ಮೇಯಿಸಿಕೊಂಡ್ ಹೋಕನ ಇದ್ ಕರೀದು. ಮಕ್ಕಳೇ ಮಕ್ಕಳೇ ಇಲ್ಲಿ ಬನ್ನಿ. ಇಲ್ಲಿ ಬನ್ನಿಂತ ಕರೀದು. ಇದ್ಕೆ ಒಟ್ಟರೆ ಬಾಗಿಲ್ ತೆಗ್ದ್ ಹೊರಗೆ ಬರೊಕ್. ಇದೆಂತಪ್ಪ ಕರೀದ ಹೀಂಗೆಂತ ಮಕ್ಕಹೋದೊ. ನೀವ್ ಮನೆಲಿ ಹೋಗಿ ಹೇಳೊಕ್. ಕತ್ತಿ ಬೆಡಿ ನಾಯಿ ದೊಣ್ಣೆ ಎಣ್ಣೆ ತುಪ್ಪ ಎಲ್ಲ ತೆಕಂಡ್ ಬರೊಕ್. ನಾಳೆ ಬೆಳಿಗ್ಗೆ ಆನೆ ದೇವರ್ ಹೊರಟವೆ. ಹಾಂಗೆ ಹೇಳೊಕ್‌ಂತ. ಆತಪ್ಪ. ನಾವು ಹೇಳ್ವೆಂತ ಆತ್. ಹಾಂಗೆ ಈ ಮಕ್ಕ ಎಲ್ಲ ಹೋಗಿ ಹೋಳ್ದೊ. ಮನೆಗೆಲ್ಲ. ಹೀಂಗಿಂಗೆ ನಾಳೆ ಆನೆ ದೇವರ್

ಹೊರಟಿವೆ. ಕತ್ತಿ ಬೆಡಿ ಎಣ್ಣೆ ತುಪ್ಪ ಹೊತ್ತುಕಂಡ್ ಹೋಕ್‌ಂತ ಆತ್. ನಾಯಿಗಳ ಸಮೇತ ಕರ್ಕೊಂಡ್ ಹೋಕ್‌ಂತ. ಎಲ್ಲ ತೆಕೊಂಡ್ ಹೋಗಿ ನಿಂತೊ. ಒಳಗಿಂದ ಇದ್ ಹೇಳ್ತ್ ಎಣ್ಣೆ ತುಪ್ಪ ಬೆಣ್ಣೆನೆಲ್ಲ ಆ ಆನೆ ದೇವರ ಪುಕ್‌ಳಿಗೆ ಹೊಯ್ಯಿನಿ. ಹಂಗೆ ಎಲ್ಲ ಹೊಯ್ದೊ. ಮತ್ತೆ ಕತ್ತಿ ಬೆಡಿ ಏನಾರ್ ತಂದೊಳರಿಯೊ. ಅದರ ಎಲ್ಲ ದೂರ ಇಸಿನಿ. ನಾಯಿ ಉಟ್ಟ. ಕೆಬಿನ ಕುಡೆಂಗೆ (ಈಗ ಅರ್ಗೀಲಿನ ಕುಡಂಗೆ) ನಾಯಿಗಳೆಲ್ಲ ಕಟ್ಟಿಕೊನಿಂತ. ಆತ್. ಇಂವ ಪಾಡ್ತನ ಸುರ್ ಮಾಡ್ತ್. ಆನೆ ದೇವ್ರ್ ಹೊರಟವೆಂತ ಮೂರ್ ಮೂರ್ ಸಲ ಹೇಳಿಕಂಡತ್. ಹೇಳಿ ಆಕನ ಇದ್ ಅರಳಿಕೋಂಡ್ ಬಾತ್. ಎಣ್ಣೆ ತುಪ್ಪ ಹ್ಯೊದದಲ್ಲ. ಆನೆ ದೇವರ ಹೊಕ್ಕ್‌ಳಿ ಅರಳಿಕೋಂಡ್ ಬಾತ್. ಇದ್ ಹೊರಡ್‌ವ ಅಂದಾಜಿಗೆ ಆಕನ ಹರಿಬಿದ್ದ್ ಓಡ್ತ್. ಓಡಿ ಆಕನ ಈ ನಾಯಿಗಳ ಕೊಡಂಗೆಗೆ ಕಟ್ಟಿದಲ್ಲ. ನಾಯಿಗ ಹೊನ್ಕಿ ಹಾರಿ ಬಿದ್ದ್ ಓಡ್ರೆ ಇವ್‌ರ ಕೆಬಿ ಎಲ್ಲ ಹರ್ದೇ ಹೋತ್. ಇವ್ ಕತ್ತಿ ಬೆಡಿನ ಹೆಗ್‌ಲಿಗೆ ಹಾಕಿದೊ. ಕೆಬಿಗೆ ಕೈ ಹಿಡ್ಕೊಂಡೊ. ಮನೆಗೆ ಹೋದೊ.

– ಇವರ ಹೋಗಿ ನೀವ್ ನೋಡಿಕಂಡ್ ಬರಕಡ.

೧.೩. ಹುಲಿ ಇಲಿಗೆ ಹೆದರುವುದು : ಈ ಗುಟ್ಟು ಗೊತ್ತಿದ್ದ ಮನುಷ್ಯ ಹುಲಿಯನ್ನು ಹೆದರಿಸುವುದು.
[(ಗೌಕಜಕ–೧೮)(ವರ್ಗ–೧೮೧)]

ಒಂದ್ ಊರ್‍ಲಿ ಒಂದ್ ನಾಲ್ಕ್ ದನ ಮಕ್ಕಾ ಇದ್ದೊ. ಈ ದನ ಮಕ್ಕ ದನ ಮೇಸಿಕೊಂಡ್ ಇರಿಕನ ಒಂದ್ ಎಲಿ ಓಡ್ತ್‌ಂತ ಹೇಳಿ ಎಲಿನ ಒಂದ್ ಹುಲಿ ಓಡ್ಸಕಂಡ್ ಹೋತ್. ಬೆರ್ಸಿಕಂಡ್ ಹೋಗಿ ಎಲಿ ಓಡಿ ಹೋಗಿ ಮಾಟೆಗೆ ಹುಕ್ಕತ್. ಮಾಟೆಗೆ ಹುಕ್ಕ್‌ದಾಕನ ಈ ಹುಲಿ ಸುತ್ತ್ ಮುತ್ತ್ ಬಾದ್. ಏನ್ ಮಾಡಿಕೆ ಕಾಂಬೊದ್ಲೆ. ಅದಕ್ಕೆ ಹುಕ್ಕಿಕೆ ಅದೆನ. ಪರಡಿತ್. ಹಿಡ್ತ್. ಏನ್ ಮಾಡ್ರೂ ಆತ್ಲೆ. ಅಜ್ಜಿಗೆ ದೂಂಗಿತ್‌ಂತ ಹೇಳ್ತ್. ಹುಲಿ ಮೆಲ್ಲ ಬಾಲನ ಹುಕ್ಸಿತ್. ಮಾಟೆಯೊಳಗೆ. ಬಾಲನ ಹಿಟ್ಟಿಕನ ಎಲಿ ಏನ್ ಮಾಡ್ತ್ ಗೊತ್ತ್‌ಟ. ಮಾಟೆಯೊಳಗೆ ಬೇರ್ ಸಿಕ್ಕಿತ್. ಬೇರ್‌ಗೆ ಇದರ ಬಾಲನ ಸಿಕ್‌ಸಿತ್. ಹಿಡ್ದ್ ಕಟ್ಟಿ ಹಾಕಿತ್. ಕಟ್ಟಿ ಹಾಕಿದ್ ಇದ್ ಬಾಲ ಹೆಟ್ಟಿಕೆ ಹೆಟ್ಟಿತ್. ತೆಗಿಯಕ್ಕೆ ಆದ್ಲೆ. ಎದ್ರ್‌ದ್ ಕುದ್ರ್‌ದ್. ಈ ಸನಿ ಹಿಡ್ದೊ ಮಕ್ಕೊ ದನ ಮೇಯಿಸಿಕೆಂತ ಅಲ್ಲಿ ಹೋದೊ. ಈ ದಿನ ಮಕ್ಕಳ ಹುಲಿ ಕರೀದು.

ಈ ಹುಲಿ ಕರ್ದರೆ ಮಕ್ಕ ಹೋಕೆ ರಡೀ ಒಳೊನ. ಅಕೇರಿಗೆ ಇದ್ ದಮ್ಮಯ್ಯ ದಕ್ಕಯ್ಯ ಹಾಕಿ ಆಣೆ, ಭಾಷೆ, ಕೊಟ್ಟ್‌ದ್, ಇಪ್ಪತ್ತೈದ್ ದೇವರ ಹೆಸರ್ ಹೇಳ್ಸಿದ್, ಹೇಂಗೆಲ್ಲಾ ಮಾಡಿ ಒಬ್ಬ ಹೈದಂಗೆ ಸುಟ್ಟೋಗಲಿ ನೋಡಂತ ಮನಸ್ಸಾತ್.

ಪೊಯಿ ನೋಡೊಂಬ. ಇವ್ ಹೋದೊ. ಹೋಗಿ ಸಂಗತಿ ಎಂತದ್. ಹೀಂಗೆಂತ ಹೇಳ್ತ್. ಇದ್ಕೆನ ಇಷ್ಟೆನ. ಇದರ ಹೆಂಗಾರ್ ಬುಡೋಕಲ್ಲ. ಅದರಲ್ಲಿನೂ ಕೇಳಿಕೊಂಡೊ ಮಕ್ಕ. ನಿನ್ನ ಇಂದ್ ಬುಟ್ರೆ ನಾಳೆ ನಾವ್‌ಗೆ ಏನಾರ್ ಉಪದ್ರ ಮಾಡ್‌ವನಾಂತ್. ಅದೇನ್ ಮಾಡಿಕಿಲ್ಲೆ. ಮಕ್ಕ ಎಳ್ಳಿದೊ. ಎಳ್ಳಿ ನೋಡಿಕನ ಬಾಲನ ಕಟ್ಟಿ ಇಸಿಉಟ್ಟ್ ಮಾಟೆಯೊಳಗೆ. ಕಟ್ಟಿ ಇಸಿದರ ಬಿಚ್ಚಿ ಬುಟ್ ಆಕನ ಹುಲಿ ಹೇಳ್ತ್. ನೀವ್ ಮನೆಲಿ ಹೋಗಿ ಮನಿ ಹೇಳ್ಬೇಡಿ. ಹೀಂಗಿಂಗೆ ಸಂಗತಿ ನಡ್ದ್‌ಟ್ಟ್‌ಂತ ಹೇಳ್ಬೇಡಿ. ಆತ್ ಆತ್ ನಾವ್ ಹೇಳಿಕ್ಕಲ್ಲೆ. ಒಬ್ಬಂದೊಬ್ಬ ಮಕ್ಕೊ ಹೇಳಿದೊ. ಅದು ತೊಪ್ಪಿ ಹೋತ್. ಆದಿನ ಈ ಮಕ್ಕಳ ಮನೆಲಿ ಅಪ್ಪದಿಟ್ಟ್ ಮಾಡ್ಯೊಳೊ. ಈ ಅಪ್ಪದಿಟ್ಟ್‌ನ ಮಕ್ಕ ಬೇಕಾದಷ್ಟ್ ತಿಂದೊ. ತಿಂದ್ ತಿಂದ್ ಕೆಲವ್ ಜನ ಬಿದ್ದ್ ಮಲಗಿದೊ. ಒಬ್ಬಂಗೆ ಹೆಚ್ಚಾತ್. ಅಂವ ಶರ್ಟ್ ಹಾಕಿತ್. ಶರ್ಟ್‌ನ ಜೋಬಿಗೆ ಒಂದೆರಡರ ಚಾರ್ರ್ಕೊನ್ತ್. ಹೀಂಗೇ ಬೇಂಚಿ ಇತ್ತ್. ಬೇಂಚಿಲಿ ಮಲಗಿ ನಿಲ್ಗಿತ್. ಅಷ್ಟಾಕನ ಇಂವಂಗೆ ಮಲ್ಗಿದಲ್ಲಿಂದ ಎಚ್ಚರಿಕೆ ಆತ್. ಇವ್ ಯಾರ್ ಮಲ್ಗಿತ್ಲೆ, ಮಕ್ಕಳಿಗೆ ಆಗ ನಿದ್ದೆ ಬಾತಲ್ಲ. ಇಂದ್ ಒಂದ್ ಸಂಗತಿ ಆದದ್ದ್ ಗೊತ್ತುಟ್ಟಾಂತ ಜೋರ್ ಕರ್ದ್ ಹೇಳ್ತ್. ಎಂತ ಎಂತ. ಎಂತದ್ ಮನೆಯವ್ ಕೇಳಿಕೆ ಸುರ್ ಮಾಡೊ. ಎಂತರಂತೇಳ್ದು. ಎಲಿ ಹೋತ್‌ಂತ ಹೇಳಿ ಹುಲಿ ಹೋಗಿ ಮಾಟೆಗೆ ಬಾಲ ಹೆಟ್ಟಿದ್ ಕುದ್ದ್ ಕನ್ತ್. ಆಗ ಎಲಿ ಬಾಲನ ಕಟ್ಟಿ ಇಸಿತ್. ಹುಲಿಗೆ ಎದ್ರಿಕೆ ಬೊತ್ತ್ ಓಡಿಕೆ ಬೊತ್ತ್. ಇಷ್ಟೇನೊಂತ ಇವ್ ಸುಮ್ಮನೆ ಆಕಂಡೊ. ಈ ಹುಲಿ ಬಾತ್. ಈ ಮಲಿ ಕತ್ತಲೆ ಆಕನ ಬಂದುಟ್ಟ್. ಬಂದ್ ಬಾಳೆ ತೋಟಲಿ ಈ ಮಕ್ಕೊ ಹೇಳ್ವೆಂತ ಗೊತ್ತಾಗುಟ್ಟ್. ಹೇಳಿ ಬುಟ್ಟರೆ ಹೋತಲ್ಲ ಇದ್. ಬಂದ್ ಕುದ್ದ್‌ಟ್ಟ್ ಸುಮಾರ್ ಹೋತ್ತಾತನ ಹೇಳ್ದ್ ಕೇಳ್ತಲ್ಲ ಇದಕ್ಕೆ. ಇಂವ (ಹುಲಿ) ಮಧ್ಯರಾತ್ರಿಗೆ ಬಾತ್. ಬಂದ್ ಹೈದನಿಲ್ಲಿಪ ಬೆಂಚಡಿಗೆ ಹುಕ್ಕತ್. ಹುಕ್ಕತ್ ಬೆನ್ನ ಮೇಲೆ ಹಾಕಿತ್ ಒಂದೇ ಬರ. ಬೆಂಚಿ ಮೇಲೆ ಇಂವ ಉಟ್ಟ್. ಆದಿನ ತಿಂಗಳ್ ಉಟ್ಟ್. ಸ್ವಲ್ಪ ಸುಮಾರ್ ಇಲ್ಲಿಂದ ತೋಡಿ ಕಾನ ಅಷ್ಟ್ ದೂರ ಎತ್ತಿಕನ ಇಂವಂಗೆ ಎಚ್ಚರಿಕೆ ಆತ್. ಮೂರ್ ನಾಲ್ಕ್ ಮೈಲ್‌ನಷ್ಟ್ ಅಂದಾಜಿಗೆ. ನೋಡ್‌ಕನ ಹೋದ್ ಕಂಡದೆ. ಕಾಡ್ಲಿ ಹೋಕನ, ಬಸ್ಸ್‌ಲಿ ಹೋಕನ ಹೋಂವ ರೀತಿಲಿ ಹೋದ್ ಕಂಡದೆ. ಇಂವನ ಅಂದಾಜಿಗೆ ಆಕನ ಮರ ಸಿಕ್ಕಿತ್.

ಒಂದ್ ಗೆಲ್ಲ್ ಕೋಸಿ ಕನ್ತ್. ಇಂವನ ಕೈ ಅಂದಾಜಿಗೆ ಸಿಕ್ಕಿತ್. ಸಿಕ್ಕಿಕನ ಮೆಲ್ಲ ಮರಕ್ಕೆ ಹತ್ತಿತ್. ಮರಕ್ಕೆ ಹತ್ತಿ ಮರದ ಕೊಡೀಲಿ ಕುದ್ದತ್. ಹುಲಿ ಹೋಗ್ತಾ ಉಟ್ಟ್. ಇದಕ್ಕೆ ಸಂಗತಿಯೇ ಗೊತ್ತ್‌ಲೆ. ಇಂವ ಉಟ್ಟುಂತೇ ಗೊತ್ತ್. ಇದ್ ಹೋಂವ ಬರಲಿ. ಇದ್‌ಕೆ ಹೋಂವ ತುರ್ತಲ್ಲ. ಸೀದ ಹೋತ್. ಸಾಧಾರಣ

ಚೆಂಬೂರ್‌ಗೆ ಎತ್ತಿಕಾಕನ. ಇನ್ನ್ ಇಸಿನೆ ಇಲ್ಲಿಂತ ಇಸಿತ್. ಎಂತಉಟ್ಟ್ ಇದರ್ಲ್ಲಿ. ಏನೂ ಇಲ್ಲೆ. ಬೆಂಚಿ ಖಾಲಿ. ತಿರ್‍ಗಿ ಓಡಿ ಬಾತ್. ಓಡಿ ಬಾಕನ ಇಂವ ಮರದ ಕೊಡೀಲಿ ಕಂಡದೆ. ತಿಂಗೊಳ್ ಬೊಳ್ಪಲ್ಲ. ಅಲ್ಲಿಂದ ಪಸ್ಟಿಗೆ ಇದಕ್ಕೆ ದೃಷ್ಟಿ ಹಾಕಿತ್. ಇಂವನ ಜೋಬ್ ದಪ್ಪ ಕಂಡದೆ. ಅಣ್ಣ ಅಣ್ಣ ಆ ಜೋಬ್‌ಲಿ ಎಂತದ್‌ಂತ. ಅಷ್ಟೋತ್ತಿಗೆ ಇಂವಂಗೂ ನೆಂಪಾತ್. ಅದ್ ಎಂತದ್, ಅದ್ ಎಲಿಮರಿ. ಅಯ್ಯೋ ದಮ್ಮಯಣ್ಣ ಎಲ್ಲಾರ್ ಬುಡ್‌ಬೇಡಾಂತ, ದಮ್ಮಯಣ್ಣ ಎಲ್ಲಾರ್ ಎಲಿ ಮರಿನ ಬುಡ್‌ಬೇಡಾಂತ.ಎಲಿನ ನಾ ಈಗ ಬುಡ್ದುಬುಡ್ದೇಂತ ಇಂವಂದ್ ಜೋರಾತ್. ನಾ ಈಗ ಬುಟ್ಟನೇಂತ. ಇಂವಂಗೆ ಹೆದ್ರ್‍ಕೆ ಉಟ್ಟಲ್ಲೆ. ಹಾಂಗೆ ಹುಲಿ ಓಡ್ದ ಬರಲಿ ಓಡ್ದೇ ಓಡ್ದ್. ಇಂವನ ಅಪ್ಪದ ಹಿಟ್ಟ್ ಇಂವನ ಜೋಬ್ಲಿ ಇದ್ದ್‌ದರಿಂದ ಇಂವ ಬದ್‌ಕಿತ್. ಇಲ್ಲದಿದ್ದರೆ ಇಂವನ ಹುಲಿ ತಿನ್ನಿತ್ತ್. ಸಂಗತಿ ಇಷ್ಟೆ.

## ೧.೪ ಪೆದ್ದ ಅಳಿಯ

[(ಗೌಕಜಕ–೯೫) (ವರ್ಗ–೧೬೮೫A)]

ಒಂದ್ ಅಯ್ಯೆನ್ ಮಂಜನ್ ಗಡ. ಅಯ್ಯೆನ್ ಮಂಜನ್ ಬಾಳ ಕಷ್ಟಲಿ ಇದ್ದೊ ಗಡ. ಅಂವ ಒಬ್ಬೆನೆ ಮಂಜ. ಅಯ್ಯ ಹೇಳ್ತ್ ಗಡ. ಮಂಜ ನೀ ಮೊದ್‌ವೆ ಆಕ್‌ಂತ. ಹಾಂಗೆ ಮೊದ್‌ವೆ ಆಕ್‌ಂತ ಹೇಳ್ಕನ ಎಲ್ಲಿಯುವ್ವ, ಯಾರವ್ವ ನಂಗೆ ಹೆಣ್ಣ್ ಕೊಡ್‌ವಾಂತ ಹೇಳ್ತ್‌ಗಡ. ಹೆಣ್ಣ್‌ಗೇನ್ ಬರನ. ಈಗ ಊರ್‍ಲಿ ಎಷ್ಟ್ ಬೇಕರೂ ಗೂಡೆಗ ಒಳೊ. ನಮ್ಮ ಊರ್‍ಲಿ ಮಡಿಕೇರಿ ಅತ್ತಾಕೆ ಮೊದ್‌ವೆ ಆಕ್ಕೇನ್. ಬೊದಿ ಏನೂ ಬೇಡ ಒಳ್ಳೊ ಗೂಡೆ ಸಿಕ್ಕರೆ ಮೊದ್‌ವೆ ಆಗ್‌ಂತ ಹೇಳ್ತ್. ಹಾಂಗೆ ಅಂವ ಹೆಣ್ಣ್ ಹುಡ್‌ಕ್ತಾ ಹೋಕನ ಅಜ್ಜ ಸಿಕ್ಕಿತ್‌ಗಡ. ಅಜ್ಜ ಹೇಳ್ತ್‌ಗಡ. ನಾ ನಿಂಗೆ ಒಂದ್ ಪಿಳ್ಳಿನ ತೋರ್‍ಸಿ ಕೊಟ್ಟನೆ. ನಂಗೆ ಪಿಳ್ಳಿ. ನಿಂಗೆ ಹೆಣ್ಣ್. ಆದು. ನೀ ಬಾ ಪೋಯಿಂತ. ಹೋಗಿ ಅಲ್ಲಿ ಏಳ್ ಜನ ಅಣ್ಣ ತಮ್ಮಂದಿರಿದ್ದೊಗಡ. ಅದಿರ್‍ಲಿ ಒಂದೇ ತಂಗೆ ಇದ್ದದೆ. ಅವ್ರ್ ಒಂದೇ ತಂಗೆಂತ ಹೇಳಿ ಬಾಳ ಪ್ರೀತಿಲಿ ಸಾಂಕಿಕೊಂಡಿದ್ದೊ. ಅದರ ಉಪ್ಪರಿಗೆಲಿ ಕುದ್ರ್‍ಸುದ್. ಇಂವನ ನೋಡಿ ಯಾಕನ ಬಾಳ ಸುಂದರ. ಹುಡ್‌ಗ ಹೆಡ್ಡ ಆದರೇನ್ ಹಾಂಗೆ ಹೆಣ್ಣ್ ಕೊಟ್ನೆಂತ ಹೇಳಿ ನಿಘಂಟಾತ್. ನಿಘಂಟಾಗಿ ಮೊದ್‌ವೆ ಎಲ್ಲ ಕಳ್ತ್‌ಗಡ.

ಒಳ್ಳೊ ಚಪ್ಪರ ಎಲ್ಲ ಹಾಕಿದೊ. ಧಾರೆ ಮಾಡಿ ಅಲ್ಲಿ ಅಂವಂಗೆ ಧರ್ಮಧಾರೆ ಮಾಡಿಕೊಟ್ಟೊ. ಕೊಟ್ಟ್‌ದ್ ಉಡಿಗರೆ ಎಲ್ಲ ಅಜ್ಜಂಗೆ ಕೊಟ್ಟತ್ ಇಂವ. ಕೊಟ್ಟನೆಂತ ಎಲ್ಲ ಇಂವನ ಮನೆಗೆ ಹೋಗಿ ಕ್ರಮದಂತೆ ಮೊದ್‌ವೆ ಎಲ್ಲ ಕಳ್ತ್. ಕಳ್ದ್‌ದ್ ಈ ಏಳ್ ಜನ ಅಣ್ಣ ತಮ್ಮಂದ್‌ರ್‌ಗೆ ಮನೆಲಿ ಯಾರ್ ಗಂಜಿ ಮಾಡಿಕೆ ಜನ ಇಲ್ಲೆಂತ ಹೇಳಿ ಅವ್‌ಕ್ಕೆನ್ ಹೆಣ್ಣ್ ಹುಡ್‌ಕಿಕೆ ಸುರ್‌ಮಾಡ್ಕೊ.

ಹಾಂಗೆ ತಂಗೆನ ಮೊದ್‌ವೆ ಮುಂದೆ ಕಳ್ತ್. ಅಣ್ಣಂದರ ಮೊದ್‌ವೆ ಮತ್ತೆ ಆತ್. ಆಟಿಕುದ್ರ್‌ಕೆ ಹೋದ್‌ಂತ ಉಟ್ಟಲ್ಲ. ಹಾಂಗೆ ಆಕನ ಹೆಣ್ಣ್‌ನ ಮನೆಗೆ ಹೋಗಿ ಸಮ್ಮಾನೆ ಕರ್ರೊಕಂಡ್ ಬಂದೊ. ಇಂವನ. ಇಂವ ಕರ್ರೊಕಂಡ್ ಬಾತ್ ಅವರ. ಇಂವ ಕರ್ರೊಕಂಡ್ ಬಂದ್ ಇಂವನ ಅಯ್ಯೆ ಬಾರಿ ಉಸಾರ್‌ದ್ ಗಡ. ಈ ಏಳ್ ಜನ ಗಂಡಿಗೆನೂ ಏಳ್ ಜನ ಹೆಣ್ಮಕ್ಕಳಿಗೆನೂ ಬೇಕಾದ ಎಲ್ಲ ಮಾಡಿ ಸಮ್ಮಾನ ಮಾಡಿ ತಲೆ ಎಲ್ಲ ಬಾಚಿಸಿ, ಹೂವೆಲ್ಲ ಮುಡಿಸಿ ಅವರ ಶೃಂಗಾರಲಿ ಕಳ್ಸಿತ್ ಗಡ. ಇನ್ನ್ ವಾಪಾಸ್ ಇಂವನ ಸಮ್ಮಾನಕ್ಕೆ ಕರೀಬೇಕ್‌ಂತ ಹೇಳಿ ಅವ್ ಸಮ್ಮಾನಕ್ಕೆ ಇಂಥ ದಿನ ಬರೋಕ್‌ಂತ ಹೇಳ್ರೊ ಗಡ. ಹೋಕನ ಅಯ್ಯೆ ತಲೆಬಾಚಿ ಇಂವನ ಕಳ್ಸಿತ್. ಕಳ್ಸಿ ಆಕನ ಇಂವ ತಿರ್ಗಿ ನೋಡ್ತ್ ಹೆಣ್ಣ್‌ನ. ತಿರ್ಗಿ ನೋಡಿಕನ ಅದ್ ನಿನ್ನ ತಲೆಲಿ ಬಗಾಳ್ ಕಂಡದೆ. ನಿನ್ನ ತಲೆ ಬಟ್ಟ್‌ಟ್ಟ್‌ಂತ ಹೇಳ್ತ್‌ಗಡ. ಅಲ್ಲಿ, ಅತ್ತೆ ತಲೆ ಬಾಚಿ ಬುಟ್ಟದ್. ಹಾಂಗೆ ತಿರ್ಗಿ ತಿರ್ಗಿ ನೋಡ್ತಾ ಹೋತ್. ಹೆಣ್ಮಕ್ಕ ಗಂಡಂದ್‌ರ ಹತ್ತ್ ಮಾರ್ ಮುಂದೆ ಹೋಕನ ಹಿಂದೆಂದ ಹೋದ್ ಗಡ. ಹೋಗ್ತಾ ಮುಂದೆ ಹೋಗಿ ಹೋಗಿ ಅವರ ಮನೆಯ ಹಕ್ಕಲೆ ಏತ್ತಿದೊ. ಅಂದ್ ರಾತ್ರೆ ಸಮ್ಮಾನ ಊಟ ಎಲ್ಲ ಆತ್. ಊಟ ಆಕನ ಇಂವನ ಮನೆಲಿ ಯಾಗೋಳ್ ಅಂಬೆಲಿ ಗಡ. ಇಂವ ಇಕ್ಕಿ ಕಂಡ್ ಬಾಕನ ಹೇಳ್ತ್ ಗಡ. ಇದ್ ನಮ್ಮ ಮನೆಲಿ ಉಟ್ಟ್ ನಾವ್ ನಿತ್ಯ ಮಾಡ್‌ವೇಂತ. ಆಗ ಬಾವಂದರ್, ನನ್ಕಂದರ್ ಹೇಳ್ರೊ ಗಡ. ಇದ್ ನಮ್ಮ ಮನೆಲಿ ನೆಂಟ್ರಿಗೆ ವರ್ಷಕೊಮ್ಮೆ ಮಾಡಿ ಕೊಡ್‌ವಂತದ್. ಅಲ್ಲ – ಇದ್ ನಮ್ಮ ಮನೆಲಿ ಯಾಗೋಳ್ ಕೆಲ್ಸದವುಕ್ಕೆಲ್ಲ ಮಾಡಿ ಕೊಟ್ಟವೆ. ನೀವೀಗ ಮಾಡಿ ತಿಂದ್ರುಂತ ಹೇಳಿ ನಾವ್‌ಗೆ ವರ್ಷಕ್ಕೊಮ್ಮೆ ಮಾಡಿ ಗೊತ್ತಿಲ್ಲೆ. ನಾವ್ ಇವರ ನಿತ್ಯವು ಮಾಡ್‌ವಂತ ಹೇಳ್ತ್ ಗಡ. ಹಾಂಗೆ ಇಂವ ಬಾಳೆಲೆ ಕೊಡಿಗೆ ಬಿದ್ದ್‌ವರ ಪನೀಸ್ ನೆಕ್ಕಿ ನೋಡ್ತ್. ನೆಕ್ಕಿ ನೋಡಿಕೆ ಆಕನ ಇದ್ ಬಾಳ ಸಿಹಿ ಮುಟ್ಟಿತ್. ಇನ್ನ್ ಊಟ ಮಾಡಿಕೆ ಆಕನ ವಾಪಾಸ್ ಕೇಳಿಕೆ ನಾಚಿಕೆ ಆದ್ಲೆಸ. ಮುಂದೆನ ಕಾಲಲಿ. (ನೂರ್ ವರ್ಷಕ್ಕೆ ಹಿಂದೆನ ಕತೆ ಅಲ್ಲೊ) ಹಂಗೆ ಇವೆಲ್ಲ ಉಂಡ್ ತಿಂದ್ ಮಲಗಿಕನ ಇಂವ ಹೆಣ್ಣ್‌ನೊಟ್ಟಿಗೆ ಕೇಳ್ತ್. ಈ ಅಡ್‌ಗೆ ಮಾಡ್ದ ರೂಮ್ ಯಾವ್‌ದ್‌ಂತ. ಅದ್ ಓ ಇಂತ ರೂಮ್. ಅಲ್ಲಿ ಪಾಯ್ಸ ಒಳ್ದಿರ್ರೊಂತ ಕೇಳ್ತ್‌ಗಡ. ಯಾಕೆ, ನೀವ್ ಆಗಬೇಡಂತ ಹೇಳ್ದರಿಗಡ. ಈಗ ಎಂತಕೆ ತಿಂಬೋದ್‌ಂತ. ನೀ ಅಂವರೆ ಹಂಞ ತಂದ್‌ಕೊಡ್‌ವನಾಂತ ಹೇಳ್ತ್. ತಂದ್‌ಕೊಡಿಕೆ ಆಕಿಲ್ಲೆ. ಅತ್ತಿಗೆಕ್ಕ ಜೋರ್ ಮಾಡ್‌ವಾಂತ ಆತ್. ಹಂಗೆ ಇಂವ ಒಂದ್ ಕರೆಲಿ ಮಲಗಿತ್. ಅಂವನೂ ಗೂಡೆನೂ ಒಂದ್ ಕರೆಲಿ ಮಲಗಿದೊ. ಸುಮಾರ್ ರಾತ್ರೆ ಒಂದ್ ಹನ್ನೊಂದ್ ಗಂಟೆ ಹನ್ನೆರಡ್ ಗಂಟೆ ಹೊತ್ತಿಗೆ ಆಕನ ಎದ್ದತ್‌ಗಡ. ಎದ್ದ್ ಮೆಲ್ಲ ಹೋನೆಂತ ಹೋತ್‌ಗಡ. ಹೋಗಿ (ಮುಂದೆಲ್ಲ ಮಣ್ಣ್‌ನ

ಮಡ್‌ಕೆ ಗಡ. ಈಗೆಲ್ಲ ತಾಮ್ರದ ಮಡಿಕೆ) ಈ ಮಣ್ಣ್ ಮಡ್‌ಕೆಗೆ ತಲೆ ಹೆಟ್ಟ್‌ಕನ ಅಡೀಲಿದ್ದ ಪಾಯ್ಸಕ್ಕೆ ತಲೆ ಹಾಕಿಕನ ತಲೆ ಅಡಿಗೆ ಆತ್‌ಗಡ. ತಲೆ ಅದರ ಒಳಗೆ ಹುಕ್‌ತ್. ಹುಕ್ಕಾಕನ ಮಡ್‌ಕೆ ಒಡ್ದೊದ್ತ್. ಮಡ್‌ಕೆ ಒಡ್ದಮೇಲೆ ಇನ್ನ್ ಹೇಂಗಾರ್ ಮಾಡಿ ಹೊರಟತ್. ಹೊರಟಾಕನ ಅವ್ ನಾಯಿ ನಾಯಿಂತ ಜೋರ್ ಮಾಡ್ಡೊ. ಜೋರ್ ಮಾಡಿಯಾಕನ ಓಡ್ತ್. ಓಡಿ ಹೋಗಿದ್ ಅಲ್ಲಿ ಒಂದ್ ತೊಂಡೆ ಬೊಳ್ಳಿ ಚಪ್ಪರ ಇತ್ತಗಡ. ಈ ತೊಂಡೆ ಬೊಳ್ಳಿ ಚಪ್ಪರಕ್ಕೆ ಇಂವ ಹತ್ತಿ ಕುದ್ದತ್. ಮಾರನೆ ದಿನ ನಂಟ ಎಲ್ಲಿಯೋ ದೂರ ಹೊರ್ಕಡೆ ಕುದ್ರಿಕೆ ಹೋಗಿರ್‍ದಂತ ಗೇನಾ ಮಾಡ್ದೊ. ಎಲ್ಲ ನನ್ಕಂದಿರ್ ಬಾಪಂದಿರ್ ಡೋಂಗಿ ಮಾಡ್‌ವಂತ ಹೇಳಿ ದೂರ ಹೋಗಿರ್‍ದಂತ. ಬೊಳ್ಳಿಗೆ ಅಂವನ ಅತ್ತೆ ಹೋಗಿ ತೊಂಡಕಾಯಿ ಕೊಯ್ಯೆಕ್ಕೆ ಸುರ್‌ಮಾಡ್ತ್. ಇಂವ ಉರ್‍ಬ್ಬಿಳಿ ಎದ್ದ್ ಓಡ್ದಂವಲ್ಲ. ಈ ತೊಂಡೆಕಾಯಿಗೆ ಹೋಕನ ಇಂವನ ಸಾಮಾನ್ (ತುಣ್ಣೆ) ಅಡಿಗೆ ನೇಳಿಕೊಂಡ್‌ಟ್ಟ್‌ಗಡ. ಇದ್ ಅದರ ಹಿಡ್ದ್ ಏಳ್ದತ್. ಅಪ್ಪೊತ್ತಿಗೆ ಅಯ್ಯಯ್ಯೊಂತ ಹೇಳ್ತ್. ಅಯ್ಯೋ ಮಾರಾಯಾ ನೀ ಅಳಿಯ ಇಲ್ಲಿ ಬಂದ್ ಕುದ್ದದಂತ ಹೇಳ್ತ್.

ಅಂವನ ಕರ್‍ದ್ದ ಇಳ್ಸಿ, ಅವನ ಮೂಸಿ ಇದೆಂತದ್‌ಂತ ಮಡ್‌ಕೆ ಕಂಠನ ಇಂವನ ಗಂಟ್ಲಿಂದ ತೆಗ್ದ್ ಎಣ್ಣೆ ಎಲ್ಲ ಹಾಕಿ ಇಂವನ ಮತ್ತೆ ಕುರ್‍ಸಲಿ ಶೃಂಗಾರ ಮಾಡಿ ಕುದ್‌ರ್ಸಿದೊ ಗಡ. ಆಗ ಮಗಬಂದ್ ಹೇಳ್ತ್‌ಗಡ. ಅವ್ವ ಅವ್ ಬರಿ ಹೆಡ್ಡ ಆತಲ್ಲೆ. ಅವ್ ಬರೇ ಹೆಡ್ಡ. ಹೆಡ್ಡಂತ ಹೇಳ್ದ್ರೆ ಅವ್‌ಕ್ಕೆ ಎಂತದ್ ಕತೆ ಗೊತ್ತ್‌ಲೆ. ನನ್ನೊಟ್ಟಿಗೆ ಮಲ್ಗೊಕ್‌ಂತ ಹೇಳ್ಕನ ಹೇಂಗೆ ಮಲ್ಗ್‌ದ್‌ಂತ ಹೇಳಿ ಮೊಂದ್ರಿನ ನೀಟಹಾಕಿ ಬೀಳ್ದ ಮೇಲೆ. ಆತಲ್ಲೆ. ಯಾವ ಇದೂ ಗೋತ್ತಿಲ್ಲೇ. ಅವ್‌ಕ್ಕೆ ನಾ ಹೇಳಿ ಕೊಟ್ಟ್ ಕೊಟ್ಟ್ ಸಾಕಾತ್. ನಿನ್ನೆ ಹಾಂಗೆ ಬಾಕನ ಅವ್ವ ನನ್ನ ತಲೆ ಬಾಚಿ ಅತ್ತೆ ಹೂವೆಲ್ಲ ಮುಡ್ಸಿ ಕಳ್ಸಿದೊ. ಎಡೆ ದಾರಿಗೆ ಬಾಕನ ನಿನ್ನ ತಲೆ ಏನ್‌ನೇ ಒಡ್ದೊದ್‌ಂತ ಕೇಳ್ದೊ. ತಲೆ ಎಲ್ಲ ಹಿಡ್ದ್ ನೋಡ್ದೊ. ಆಗ ಅತ್ತೆ ತಲೆಬಾಚಿದ ಬಕ್ತಲೆ ಅಲ್ಲಾಂತ ಹೇಳ್ದೆ ನಾ. ಈ ಜೆಡೆ ಏನ್ ಉದ್ದ ಬಂವದ್‌ಂತ ಹೇಳ್ದೊ. ಅದ್ ನಂಟ್ರಮನೆಗೆ ಬಾಕನ ಹಾಂಗೆ ಅಲ್ಲ ಕಟ್ಟುದ್. ನಿನ್ನ ಕೈಲಿ ಎಂತದ್‌ಂತ ಕೇಳ್ದೊ. ಅದ್ ಎಣ್ಣೆ ಚೊಂಬ್. ಎಣ್ಣೆ ಚೊಂಬ್ ಎಡದ ಕೈಲಿ ಹಿಡಿಯೋದ್ ಅಲ್ಲಂತ ಹೇಳ್ದೊ. ಅಲ್ಲ ಎಡದ ಕೈ ಹೆಳ್ಮಕ್ಕಳಿಗೆ ಭಾಗ್ಯದ ಕೈಗಡ. ಬಲದ ಕೈಲಿ ಹಿಡಿಂತ ಹೇಳಿ ಬಲದ ಕೈಲಿ ಹಿಡ್ದ್‌ಕಂಡ್ ಬಂದೆ. ಸುಮಾರ್ ದೂರ ಬಾಕನ ತಡ್ಮೆ ದಾಟಿಕೆ ಸಿಕ್ಕಿತ್. ನಾ ಸೀರೆನೇಚಿ ದಾಟಿದೆ. ಅವ್ ಹೇಳ್ದೊ. ಸೀರೆ ನೇಚ್‌ದೆಂತಕೆ. ಅಡ್ಡ ದಾಟೋಕ್‌ಂತ ಹೇಳ್ದೊಂತ ಹೇಳ್ತ್‌ಗಡ. ಹಾಂಗೆ ಆಕನ ಅತ್ತೆಗೆ ತುಂಬ ಬೇಜಾರ ಆತ್‌ಗಡ. ಇಂತಾ ಅಳಿಯನೂ ನಂಗೆ ಆಗಿ ಹೋತ ಲ್ಲೆಂತ. ಹಂಗೆ ಅಂದ್ ಆಸರ್ತಿ ಅಂವನ ಎಲ್ಲ ಡೋಂಗಿ ಮಾಡಿ ಕಳ್ಸಿದೊ ಗಡ. ಕಳ್ಸಿ

ಸಮ್ಮನ ಹೋದದ್ ಹಾಂಗೆ ಬಂದೊ ಆಲ್ಲೆ. ಆಟಿ ಕುದ್ರಿಕೆ ಅಯ್ಯೆಬಂದ್ ಮಗಳ ಕರ್ಕೊಂಡ್ ಹೋತ್‌ಗಡ. ಕರ್ಕೊಂಡ್ ಹೋಗಿ ಆಕನ ಬಾಕಿ ಮಕ್ಕ ಎಲ್ಲ ಕೆಲ್ಸಕ್ಕೆ ಹೋಗೋಳ ಗಡ. ಬೇಸಾಯ ಕೆಲಸಕ್ಕೆ ಹೋಗೋಳ ಗಡ. ಅತ್ತೆ ಮಿೂದ್ ಕೊಂಡಿತ್ ಗಡ ಕೆರೆಳಿ. ಅಳಿಯ ಬಾಕನ ಆಟಿ ಬೊಳ್ಕಿರಿಗೆ ಒಳ್ಕೊ ಬೊಯ್ಬಲ್ಲ. ಮಿೂದ್‌ಕೊಂಡಿದ್ದದ್ ಬಾತ್. ಅಳಿಯ ಬಾತ್‌ಂತ ಹೇಳ್ತ್. ಬೆಳ್ತಿಗೆ ತೆಗ್ತ್ ಅಡಿಗೆ ಮಾಡ್ತ್. ಊಟಕ್ಕೆ ಎಲ್ಲ ರಡೀ ಆತ್. ಅಳಿಯಂಗೆ ಇಕ್ಕಿ ಕೊಟ್ಟ್‌ತ್ ಗಡ. ಇಕ್ಕಿ ಕೊಟ್ಟ್ ಅಳಿಯಂಗೆ ಉಪ್ಪಿನಕಾಯಿ ಕೊಡೊಕುಂತ ಹೇಳ್ಕಿಅಟ್ಟಕೆ ಹತ್ತಿತ್. ಅಷ್ಟೊತ್ತಿಗೆ ಆಕನ ಹೀಂಗೆ ಸೀರೆ ನೇಚಿ ಹೆನ್ಮಕ್ಕ ಕಟ್ಟುವ ಆಬ್ಬೆಸ ಉಟ್ಟು ಗಡ. ನೋಡ್ರೆ ಸೀರೆ ಇಲ್ಲೆ. ಅಲ್ಲಿಂದ ಓಡಿಹೋಗಿ ಸೀರೆ ಉಟ್ಟ್‌ಕಂಡ್ ಬಾತ್ ಗಡ. ಅಲ್ಲಿಗೆ ಕತೆ ಮುಗ್ತ್.

**೧.೫. ಕೃತಜ್ಞ ಮೀನು ಮತ್ತು ಕೃತಜ್ಞ ಹಾವು : ರೋಗ ಗುಣಪಡಿಸಿಕೊಂಡ ಹಾವು ಹುಡುಗಿಗೆ ಸಹಾಯ ಮಾಡುವುದು.**

[(ಗೌಕಜಕ–೧೪) (ವರ್ಗ–೧೬೦)]

ಒಂದ್ ರಾಜ. ಆ ರಾಜಂಗೆ ಮುಂದೆ ಮದ್‌ವೆ ಆಗಿತ್ತ್ ಗಡ. ಮದ್‌ವೆ ಆಗಿ ಅಂವಂಗೆ ಒಬ್ಬ ಮಗ ಹುಟ್ಟಿತ್ ಗಡ. ಮಗ ಹುಟ್ಟಿ ಆರೇಳ್ ವರ್ಷ ಆಕನ ರಾಜನ ಹೆಣ್ಣ್ ತೀರಿ ಹೋತ್ ಗಡ. ತೀರಿ ಹೋದ ಮೇಲೆ ಅಂವಂಗೆ ಗೆತಿ ಇಲ್ಲೆ ಅಲ್ಲ. ಹೆಣ್ ಇಲ್ಲೆ ಅಲ್ಲ. ಈ ರಾಜಮನೆತನದವ್‌ಕ್ಕೆ ಹೆಣ್ಣ್ ಇಲ್ಲೆಂತ ಆದರೆ ಬಾರಿ ಬೇಸರದ ಸಂಗತಿ ಅಲ್ಲ. ಈ ರಾಜಮನೆತನಕ್ಕೆ ಗತಿ ಇಲ್ಲೆಂತ ಹೇಳ್ತ್ ಪ್ರಜೆಗಳ ಎಲ್ಲ ಬಾಕೆ ಹೇಳ್ತ್. ಮಂತ್ರಿನ ಬಾಕೆ ಹೇಳ್ತ್. ಮಂತ್ರಿನೊಟ್ಟಿಗೆ ಹೇಳ್ತ್‌ಗಡ. ನಂಗೆ ಒಂದ್ ಹೆಣ್ಣ್ ನಿಶ್ಚಯ ಮಾಡೊಕ್. ನೀ ಎಲ್ಲಿಯರಾರ್ ಹೋಕ್‌ಂತ. ಹಾಂಗೆ ಮಂತ್ರಿ ಊರ್ಲಿ ಹುಡುಕ್‌ತ್ತಾ ಹೋತ್. ಒಂದ್ ಊರ್‌ಂದ ಮತ್ತೊಂದ್ ಊರಿಗೆ ಅಂವನ ರಾಜ್ಯ ಬುಟ್ಟ್ ಮತ್ತೊಂದ್ ರಾಜ್ಯಕ್ಕೆ ಇಲ್ಲಿಂದ ಬುಟ್ಟ್ ಮಡಿಕೇರಿಗೆ ಹೋತ್‌ಂತ ಗ್ಯಾನ ಮಾಡಿಕನಿ. ಮಡಿಕೇರಿಗೆ ಹೋತ್ ಇತ್ತ ಮೈಸೂರಿಗೆ ಹೋತ್. ಮೈಸೂರಿಗೆ ಹೋತ್ ವಾಪಸ್ ಬಾಗಮಂಡಲಕೆ ಬಾತ್. ಬಾಗಮಂಡಲಂದ ಬಂದ್ ಅಲ್ಲಿಂದ ವಾಪಾಸ್ ತಿರ್‌ಗಿಕೊಂಡ್ ಬಾಕನ ಒಂದು ದಿಕ್ಕ್‌ಲಿ, ಸುಮಾರ್ ಬಾಗಮಂಡಲಂದ ಕರಿಕೆ ರೋಡಿಗೆ ಆಕನ ಒಂದು ಹೆಣ್‌ಮಗಳು, ಒಂದ್ ಒಂಟಿ ಹೆಂಗಸ್ ಬಾಳ ಸುಂದರಿ ಹೆಂಗಸ್ ಮಾತಾಡ್ತ ಹೋದವೆ ಗಡ. ನೀವೆಲ್ಲಿಗೆ ಹೋದು. ನನ್ನ ಗಂಡ ಮೊನ್ನೆ ಸತ್ತೊಗುಟ್ ಹಾಂಗೆ ಈಗ ಯಾರು ಗತಿ ಇಲ್ಲೆ. ಹಂಗೆ ನಾ ಈ ಮಗಳ ಕರ್ಕೊಂಡ್ ಹೊರಟದ್‌ಂತ ಹೇಳ್ತ್ ಗಡ. ಅಯ್ಯೋ ಅಯ್ಯೋ ನಮ್ಮ ರಾಜ್ಯಲಿ ಕೂಡ ಹಾಂಗೆ. ಒಂದ್ ಹೆಣ್ಣಾಕ್‌ಂತ ಹುಡುಕ್‌ಂತ ನನ್ನ ಕಳ್ಸಿದ್. ಅವ್ ಹಿಂದೆ ಮೊದ್‌ವೆ ಆದ್ದರಿಂದಾಗಿ ಬಡವ ಆದರೂ ಕೈದಾರೆ ಕೊಡ್ದಲ್ಲೆ. ಅದಕ್ಕೆ

ನಿರ್ಧಾರಂತ ನನ್ನೊಟ್ಟಿಗೆ ಹೇಳ್ಯೊಳ. ನ್ಂಗೆ ಪತ್ರಕೂಡ ಕೊಟ್ಟೊಳೊ. ರೂಪ ಲಾವಣ್ಯನ ನೋಡಿ ಹೆಣ್ಣ್‌ನ ನೋಡೊಕ್‌ಂತ. ನಾ ಮಂತ್ರಿ ಅವರ. ಹಂಗೆ ನಾ ಬಂದದ್‌ಂತ ಹೇಳ್ತ್. ಅಂದರೆ ನಾ ಬನ್ನೆ. ನನ್ನ ಮಾಡ್ನುಂತ ಆದರೆ ಮಾಡಲಿ. ಮನೆ ಎಲ್ಲ ಶೃಂಗಾರ ಮಾಡಿ. ಅಲ್ಲಿಯೇ ಒಂದ್ ರಾಜ ಮನೆತನದ ರೂಪ್‌ಲಿ ನನ್ನ ಮಾಡಿ, ಅಲ್ಲಿಂದ ಮತ್ತೆ ಕಾರ್ಯಕ್ರಮಕ್ಕೆ ಆಕನ ಕರ್ರೊಂಡ್ ಹೋದರೆ ಸಾಕ್‌ಂತ ಬೇರೆ ಕರ್ರೊಂಡೋಗಿ ಅದರ ಎಲ್ಲ ಮೀಸಿ ಇಂವ ತಕೋಂಡೋಗಿ ಮಂತ್ರಿನ ಮನೆಲಿ ಮಾಡಿಕನ್ತ್‌ಗಡ. ಮಾಡಿಕಂಡ್‌ದ್ ರಾಜ ಮನೆತನಕ್ಕೆ ಕರ್ಕಂಡ್ ಹೋತ್. ರಾಜ ಮನೆತನಲಿ ಈಗನ ಬ್ಂಡ್‌ದಾರೆ ಕ್ರಮಲಿ ಬ್ಂಡ್‌ದಾರೆ ಆತ್.

ಆಗಿ ಅವ್ ಹಾಂಗೆ ಸ್ಂಮಾರ್ ಸಮ್ಂಯ ಸುಖಲಿ ಇದ್ದೊಗಡ. ಆಗ ರಾಜ ಮನೆಸ್ಥನಲಿ ಅದ್ ಪಟ್ಟದ ರಾಣಿ ಅಲ್ಲ. ಎರಡ್ನೆ ಹೆಣ್ಣ್. ಈ ಗೂಡೆ ಸ್ವಲ್ಪ ಬಲ ಆತ್. ದನ ಮೇಪ್‌ಗೆ ಈ ಗೂಡೆನ ಕಳ್ಸಿದೋ. ಅಡಿಗೆ ಎಲ್ಲ ಬ್ಂಟ್ಟತ್ ಇದ್. ಬಾರಿ ಕಷ್ಟ ಆತ್. ದನ ಮೇಪಿಗ್ಂದರ್ ಹೇಳಿ ಹೋನೆ ಅಪ್ಪಂತ ಚಿಕ್ಕಪ್ಪನೊಟ್ಟಿಗೆ ಹೇಳಿ ಹೋತ್‌ಗಡ. ಹಂಗೆ ದನ ಮೇಪಿಗೆ ಹೋಗಿ ಹೋಗಿ ಹೋಗಿ ಇದ್ ಯಾಗೋಳ್ ಅದಕ್ಕೆ ಊಟ ಕೊಡಟ ಇಲ್ಲೆ. ಇದ್ ಬಾಳ ಸುಂದರಿ ಗೂಡೆ. ಇನ್ನ್ ನನ್ನ ಮಗಳ ಕುರುಡಿನ ಇವು ನೋಡಿಕಿಲ್ಲೆ. ಇವರ ಮಗಳ್ನೆ ಹೊಗೊಳ್‌ವಂತ ಹೇಳಿ, ಪ್ರೀತಿಳಿ ಮುಂದೆನ ಹೆಣ್ಣ್‌ನ ಮ್ಂಗಳ ಮೀಸುದ್, ತಲೆಗೆ ಎಣ್ಣೆ ಹಾಕುದ್. ತಲೆ ಬಾಚುದ್. ಹೀಂಗೆಲ್ಲ ಮಾಡಿಯಾಕನ ಇದ್ಕೆ ಸಂಜಿಯಾಗಿ. ನನ್ನ ಕುರ್ಡಿ ಮಗಳ ನೋಡ್ದ್ ಇಲ್ಲೆ. ನನ್ನ ಮಗಳ ನೋಡೋಕ್‌ಂತ ಮಾಡಿತ್. ಇಂವ ಹೋದಂದ್ ಇದ್‌ಕೆ ರಾಜ ಮಂದಿರಕೆ ಹೋಕೆ ಆಕನ ಇದರ ಮನೆಲಿ ಬೊಡ್ಡ್‌ದ್ ಬೇಕಾದಷ್ಟ್ ಬಂಗ ಬರ್‌ಸ್ದು. ಚಿಕ್ಕಪ್ಪ. ಹಂಗೆ ದನ ಮೇಪಿಗೆ ನಾ ಇನ್ನ್ ಹೋನೆ ಅಪ್ಪಾಂತ ಹೇಳ್ತ್‌ಗಡ. ಹಂಗೆ ದನ ಮೇಪಿಗೆ ಹೋಕೆ ಸುರ್ ಮಾಡ್ತ್‌ಗಡ. ಇದ್ ಉಪವಾಸ ಹೋದು. ಇದ್ಕೆ ತನ್ಯಸ ತೆಲಿ ಕೊಡ್ದು. ಇದರ ಕುಡ್ಯೊಂತ ಹೇಳಿ ಸೂಸ್‌ದು. ಅತ್ತ ಇತ್ತ ಕೈ ಹಾಕುದ್. ಹೋದುಗಡ. ಹೋಗಿ ಹೋಗಿ ಮಳೆಗಾಲ ಅರ್ಕಿಲೆಲ್ಲ ಹೊತ್. ಮಳೆಗಾಲ ಹಿಡಿಯಕೆ ಆಕನ ಅದರ ಅಯ್ಯೆ ಸತ್ತ್ ದೊಡ್ಡ ಅಡ್ಕಲಿ ಅದರ ಸುಟ್ಟಿದ್‌ಗಡ. ಆ ದೂಪೆ ಹಕ್ಕಲೆ ಗೋಂಟೆಕಾಯಿಬೊಳ್ಳಿ ದೂಪಗೆ ಹಬ್ಬಿ ಕೊಂಡ್‌ಟ್ ಗಡ. ಅದರ್ಲಿ ತುಂಬ ಗೋಂಟೆಕಾಯಿ ಉಟ್ಟ್‌ಗಡ. (ಕಾಡ್ ತೊಂಡೆಕಾಯಿಂತ ಹೇಳ್ವೆಲ್ಲ ಅದ್.) ಅದ್ ಏನ್ ಮಾಡ್ತ್. ಗೋಂಟೆಕಾಯಿನ ಫೊರ್ಲು ಕೊಯ್ತ್. ಒಂದ್ ದಿನ ಹತ್ತ್ ಗೋಂಟೆಕಾಯಿ ತಿನ್ತ್. ತಿಂದ್ ಕಬ್‌ಲ್ಚಿ ಹಸ್‌ನ ಕರ್ ಬುಟ್ಟತ್‌ಗಡ. ಕರ್ ಬುಡ್ದು ಹಾಲ್ ಕುಡಿಯೊದ್. ಈ ಗೋಂಟೆಕಾಯಿನ ಪಿನ್ಚುದು ಮನೆಂಪ ಹಾಳೆ ಎಂತಾರು ತಕೊಂಡೋದು. ಪಿನ್ಚಿ ಇವರ್ಲಿ ಈ ಗೋಂಟೆ ಕಾಯಿನ ಪೊರ್ಲ್ ಚಿರ್‌ಂಬಿ ಗೋರ ಕುಡಿಯುದ್. ಕುಡ್ದ್ ಮನೆಗೆ ಬಾದ್. ದನಂಗಳ

ಎಲ್ಲ ಕಟ್ಟಿ ಹಾಕಿ, ದನಂಗಳ ಕರ್‌ಬುಟ್ಟ್ ಹಾಲೆಲ್ಲ ಕುಡ್ದ್ ಹಾಲ್ ಕಾಸಿದ್ ಚಿಕ್ಕವ್ವನೊಟ್ಟಿಗೆ ಹೇಳ್ದು. ಹಾಲ್ ಕಾಸಿಸಿಯೊಳೆಂತ. ಇದ್ ಹೋದು, ಅದರ ಮೇಲೆನ ಬಾವೆ ತೆಗೆಯುದ್. ಇದರ ಮಗಳಿಗೆ ತಂದ್ ಕೊಡ್ದು. ಆಮೇಲೆ ಇದರೊಟ್ಟಿಗೆ ಹೇಳ್ದು. ನಿಂಗೆ ಅಲ್ಲಿ ಗಂಜಿ ಹಾಕಿ ಇಸಿಯೊಳೆ. ಹಾಳೆ ಕಿಳ್ಳಿಲಿ. ಬೇಕಾರೆ ತಿನ್ನ್ಂತ ಹೇಳ್ದು.

ಇದ್ ಗಂಜಿನ ಹೋಗಿ ಅತ್ತ ಇತ್ತ ನೋಡ್ದು. ಅದಕ್ಕೆ ನೆಳನೊ, ಕಾಡೋ ಎಂತಾರ್ ಬಿದ್ದ್ ಕೊಂಡಿದ್ದದೆ ಅದರ್ಲಿ. ಇವ್ ಪೊರ್ಲ್ ಉಂಡ್ ಬುಟ್ಟ ಮಡೆ ಅನ್ನನ ಎಲ್ಲ ಅದ್ಕೆ ಬರ್‌ಂಬಿ ಹಾಕಿ ಇಸುದ್. ಅದರ ಆದ್ ದನಂಗಳಿಗೆ ಕೊಡ್ದ್. ಇದ್ ಹಾಂಗೆ ಉಪಾಸವೆ ಇತ್ತ್‌ಗಡ. ಇದ್‌ಕ್ಕೆ ಯಾಗೋಳ್ ಇದೇ (ತೊಂಡೆಕಾಯಿನ ಪಿನ್ಚ್‌ದ್) ಗೋಂಟೆಕಾಯಿನ ಪಿನ್ಚ್‌ದ್. ಕುಡೀದು. ದನಂಗಳ ಹೊಡ್ಕೊಂಡ್ ಹೋದು. ಹೋದು ದನಂಗಳ ಮೇಸುದ್, ದನಂಗಳ ಚಾಕರಿ ಮಾಡ್ದು. ಇದ್ ಒಂದ್ ದಿನ ರಾಜನೊಟ್ಟಿಗೆ ಹೇಳ್ತ್‌ಗಡ. ನಿಮ್ಮ ಮಗ ಏನಿಯಾ ದಿನಂದ ದಿನಕ್ಕೆ ಮಡ್ಡಮ್ಮನ ಹಾಂಗೆ ಕಂಡದೆ. ಏನೊ ಬದಲಾಗುಟ್ಟ್. ಅದ್ಕೆ ಬೇರೆ ಕಡೆ ನೆರೆ ಕರೆಲಿ ನಿಮ್ಮ ಕುಟುಂಬದವ್ ಊಟ ಮಿನಿ ಕೊಟ್ಟವೆನಾ ಏನ್. ಹೇಂಗೆ ಆದ್ ಈ ತರ. ಇದ್ ನಾಳೆಗೆ ನಾವಿಗೆ ಕೆಟ್ಟ ಹೆಸರ್ ಏನಾರ್ ಬಾದೊ ಹೇಂಗೆ. ಆನ್ಂತ ಹೇಳ್ತ್‌ಗಡ. ಅಯ್ಯೋಪ್ಪ ನಿನ್ನ ಕೆಟ್ಟ ಹೆಸರ್ ಎಂತದ್, ನನ್ನ ಮಗಳಿಗೆ ಎಂತ ಕಷ್ಟಂತ ನಂಗೆ ಅಲ್ಲ ಗೊತ್ತ್‌ಂತ ಹೇಳ್ತ್‌ಗಡ. ಹಾಂಗೆ ಇರಿಕಾಕನ ಈ ಕುರ್ಡಿ ಮಗ ಕೇಳ್ತ್‌ಗಡ. ಅಕ್ಕ ಅಕ್ಕ ದನ ಮೇಪಿಕೆ ನಾನುನ್ ಬರೋಕಾಂತ ಕೇಳ್ತ್‌ಗಡ. ನೀ ಬರ್ಬಡಪ್ಪ. ಮಳೆಗೆ ನನ್ಕಂಡ್ ಈ ಪಣೆ ಕೊಡೆ ಹಿಡ್ಕಂಡ್ ಈ ಚೆಂಡಿಲಿ ಈ ಪಣೆ ಒಲಿಲಿ ನಾವಿಬ್ಬರು ಹೇಂಗೆ ಹೋದು. ನೀ ಬರ್ಬಡಂತ ಹೇಳ್ತ್‌ಗಡ. ಅಂದ್ ಆದ್ ಹೊಡ್ಕೊಂಡ್ ಹೋತ್‌ಗಡ. ಹೊಡ್ಕೊಂಡ್ ಹೋಗಿ ಹಸ್ ಮೇದ್‌ದ್ ಆಕನ ಹಸ್‌ಗಳ ಎರಡರ ಕರ್ ಬುಟ್ಟತ್ ಇದ್‌ಹಾಲ್ ತಾತ್, ಪಣ್ಣ್ ಕ್ಯೊತ್ ಪಿನ್ಚಿತ್ ಕುಡ್ತ್ ಬಾತ್. ಬಂದ್‌ದ್, ಬಾಕನ ಹೇಳ್ತ್‌ಗಡ ಅಕ್ಕ ನಾ ಇಂದ್ ಕಂಡಿತ ಬನ್ನೆಂತ. ಕಂಡಿತ ಬನ್ನೆಂತ ಹೇಳ್ಕನ ಮಾರನೆ ದಿನ ಪಟಮಾಡಿ ಕರ್ಕೊಂಡ್ ಹೋತ್‌ಗಡ. ಕರ್ಕೊಂಡ್ ಹೋಗಿ ತೋರ್ಸಿದ್ ಬಂದ್ ಅಯ್ಯನೊಟ್ಟಿಗೆ ಹೇಳ್ತ್. ಅಂದ್ ಕರ್ ಬುಟ್ಟತ್ತ್‌ಲೆ ಗಡ. ಹಸ್‌ನ. ಇದ್ಕೆ ಹೀಂಗೆ ಅಡ್ಕ ತೋರ್ಸಿತ್. ಇದ್ಕೆಲ್ಲ ಬೊಚ್ಚಿಸಿತ್ ಕರ್ಕೊಂಡ್ ಬಾತ್. ಕರ್ಕೊಂಡ್ ಬಂದ್‌ದ್ ದನಗಳ ಎಲ್ಲ ಕೂಡ್ಸಿತ್. ಅವ್ವ ಅಕ್ಕನೊಟ್ಟಿಗೆ ಹೋದರೆ ಯಾರಾರ್ ಸಾಯುವೊ. ಅದೆಂತದ್ ಮಾರಾಯಿತಿ. ಇದ್ದ ಕಾಡ್ ಗುಡ್ಡೆಲಿ ನೀರಿಲ್ಲೆ. ಅದ್ ಅಲ್ಲಿಂದ ಬಾದ್ ಇಲ್ಲಿ ದನಗಳಿಗೆ ಕೊಡ್‌ವ ಅರ್ಕಚಿನ ಕುಡಿಯುದ್. ನಂಗೆನ್ ಹೆನೀಸ್ ಕೊಟ್ಟತ್. ನಾನ್ ಹಂಞ ಕುಡ್ಪೊಳೆಂತ ಹೇಳ್ತ್. ಹಾಂಗೆ ಈ ಬಣ್ಣ ಬದಲಾದದ್ದರ ನೋಡಿದ್ ನೆರೆಕರೆಯ ಒಂದ್ ಹೆಂಗ್‌ಸ್ ಬಾತ್

ಗಡ. ಓ ಅಕ್ಕ, ನಾನ್ ಇಷ್ಟ್ ದೊಡ್ಡ ಮನೆಸ್ಥನಲಿ ಇದ್ದ್ ನನ್ನ ಮಗಳಿಗೆ ಕಣ್ಣಿತ್ತ್‌ಲರೆನೂ ರೂಪಕ್ಕೆ ಏನ್ ತೊಂದರೆ ಇಲ್ಲೆ.

ಯಾರ್ ತೆಕಂಡೋಕೆನೂ ರಾಜನ ಮಗ ಎರಡ್ನೆ ಹೆಣ್ಣ್‌ನ ಮಗಂತ ಹೇಳ್ಕನ ಯಾರ್ ತೆಕಂಡೋಗಿರ್‌ವೊ. ಇದ್ ಏನ್ ನನ್ನ ಮಗಳಿಗೆ ಯಾವ ತಿಂಡಿ ಕೊಟ್ಟರೆನೂ ಒಳ್ಳೆತ್ ಆದ್ಲೆಂತ ಹೇಳ್ತ್‌ಗಡ ಚಿಕ್ಕವ್ವ. ಅಯ್ಯೋ ಅಕ್ಕ ನೀವೊಂದ್ ಸಂಗತಿ ಮಾಡಿ. ಅಕ್ಕಿನ ತೊಳಿನಿ, ತೊಳ್ದ್‌ದ್ ಹಾಲ್‌ಲಿ ಬೀಸಿನಿ. ಹಾಲೆಲಿ ಬೀಸ್‌ದ್ ಅದರ ಗಂಜಿನ ನಿಮ್ಮ ಮಗಳಿಗೆ ಕೊಡಿ. ಆ ತೆಲಿನ ನಿಮ್ಮ ರಾಜನ ಮುಂದೆನ ಹೆಣ್ಣ್‌ನ ಮಗಳಿಗೆ ಕೊಡಿ. ನಿಮ್ಮ ದನ ಮೇಪ್‌ನ ಮಗಳಿಗೆ ಕೊಡಿಂತ ಹೇಳ್ತ್‌ಗಡ. ನೆರೆಕರೆನ ಹೆಂಗಸ್. ಇದ್ ಸುಮಾರ್ ಒಂದ್ ಆರ್ ತಿಂಗ ಹೀಂಗೇ ಮಾಡ್ತ್. ಹೀಂಗೆ ಮಾಡಿಕೆ ಆಕನ ಇದ್ ಮತ್ತೂ ಬಣ್ಣ ಬದಲಾತ್. ಹಾಲ್‌ನ ಅಂಶ ಎಲ್ಲಾ ಇದ್ಕೆ ಬಾತಲೆ. ಒಳ್ಳೆ ರೂಪದ ಗೂಡೆ ಆತ್. ಇದ್ ಅಲ್ಲಿಗೆ ಬೊಚ್ಚಿಕಂಡ್ ಬಾತ್. ಬರೇ ಉಗ್ಗೆ ತಿಂದ್. ಅಲ್ಲಿಂದ ಇದ್ ಬಣ್ಣ ಬದಲಾತ್‌ಂತ ಮತ್ತೊಂದ್ ದಿನ ಹಟ ಮಾಡಿ ಮಗಳ ಕಳ್ನಿತ್‌ಗಡ ನೀ ಹೋಕ್‌ನೆ. ಇಂದ್ ಅಕ್ಕನೊಟ್ಟಿಗೆ. ಅದ್ ಒಂದೇ ಹೋದ್ ಅಲ್ಲ. ಈಗ ಪ್ರಾಯಕ್ಕೆ ಬಂದ ಮಗ ಅಲ್ಲ. ಹತ್ತ್ ಹದ್ನಾರ್ ವರ್ಷದ ಗೂಡೆಗಳ ಕಾಡಿಗೆ ಕಳ್ಸದು ಒಳ್ಳೆದಲ್ಲ. ನೀ ಹೋಗಂತ ಅದ್ ಹಾಂಗೆ ಹೋತ್‌ಗಡ. ಹೋಗಿ ಬಿಸಿಲು ಹೊತ್ತಿಗೆ ಗೋಂಟೆಕಾಯಿನ ಕೊಯ್ದೊಗಡ, ಅಕ್ಕನ್ ತಂಗೆನ್ ಕರ್ ಬುಟ್ಟ್, ಕುರ್ಡಿ ಮಗಳಿಗೆ ಹಂಞ ಕೊಟ್ಟತ್, ಇದ್ ಹಂಞ ಕುಡ್ದ್ ಬಂದೊ ಗಡ. ಬಂದ್ ಕುರ್ಡಿ ಮಗ ಅಯ್ಯೋನೊಟ್ಟಿಗೆ ದೂರ್ ಹೇಳ್ತ್. ಅವ್ವವ್ವ ಅಕ್ಕನ ಸಂಗತಿ ಎಂತದ್ ಗೊತ್ತ್‌ಟ್ಟ ನಮ್ಮ ಎರಡ್ ಕಬಿಲೆ ಹಸ್‌ಗಳ ಕರ್ ಬುಡ್ದ್. ಕರ್ ಬುಡ್ದ್ ಹಾಲ್ ಕುಡಿಯ್‌ದು. ಅದ್ ಮತ್ತೆ ಬಣ್ಣ ಬದಲಾಗದೆ ಇರ್ದೊ. ನಾವೆಲ್ಲ ಹಾಸಿಗೆಲಿ ಮಲಗುದ್. ಅದಕ್ಕೆ ಗೋಣಿ ಕೊಡ್ದು. ಅಂದರ್ ಅದ್ ಹೇಂಗುಟ್ಟ್. ನೀ ಎಂತರ ಹೇಳಿಯವ್ವ. ಅದಕ್ಕೆ ಇನ್ನ್ ಅಂತ ತಿಂಡಿ ಇರ್ಕನ ನಿನ್ನ ಮಗ್ಗೆ ಬೇಕೊ. ಮಗ್ಗೆ ಏನೂ ಬೇಡ. ಅದ್ ಬಾಳ ಲ್ಯಾಕಿ ಆದ್. ಅದರ ಅವ್ವನ ಸತ್ತ ದೂಪೆಗಡ. ಅದಕ್ಕೆ ಒಗ್ಗು ಹಾಕೊಕ, ಒಂದೊಂದ್ ಗೋಂಟೆಕಾಯಿ ಬೊಳ್ಳಿಯವ್ವ. ಕೈ ಕೈ ಬೆರ್ಳ್‌ಷ್ಟ್ ತೋರ ಉಟ್ಟ್. ಆರ್ ಬೊಳ್ಳಿ ಹತ್ತಿಕಂಡಿತ್ತ್‌ಗಡ ಗೋಂಟೆಕಾಯಿದ್. ಅಕ್ಕ ನೀ ನಾಳೆ ಅದ್ ಬಾದ್ ಬೇಡಂತ ಹೇಳ್ದೊ, ನೀ ಹೋಕ್ಕ್. ಅದ್ ಗೋಂಟೆಕಾಯಿ ಕೊಯ್ದ್ ತಿರ್ಗಿಕನ ಅದರ ಬೊಳ್ಳಿನ ಬುಡಂದ ಕೆಯ್ದ್ ಬುಡೊಕ್.

ಕುಂಞ ಕತ್ತಿ ತಕೊಂಡೋಕ್ ಹೋಕನ. ಅಯ್ಯೆ ಕುಂಞ ಕತ್ತಿ ಕೊಟ್ಟತ್, ಹೊಟ್ಟೆನ ಸೆರೆಲಿ ಇಸಿಕಂಡ್ ಗೊತ್ತೇ ಇಲ್ಲದೆ ಹೋತ್ ಇದ್. ಇದ್ ಗೋಂಟೆ ಕಾಯಿನ ಕೊಯ್ದ್‌ದ್ ಹಸ್‌ನ ಕರ್‌ಬುಡಿಕೆ ಹೋಕನ ಈ ಬೊಳ್ಳಿನ ಒಟ್ಟ್

ಕೊಯ್‌ದ್ದ್ತ್. ಕೊಯ್ದ್ ಇದ್ ಹೋತ್‌ಗಡ, ಹೋಗಿ ಪ್ರೊರ್‌ಲ್ಲಿ ಅಂದ್ ಇದ್ಕೆ ಬರಾಬರಿ ಕೊಟ್ಟತ್. ಅದುನ್ ಕುಡ್ತ್, ಕುಡ್ದ್ ದನಂಗಳ ಎಲ್ಲ ಹೊಡ್ಕೊಂಡ್ ಬಂದೊ, ಕಟ್ಟಿಹಾಕಿದೊ, ಮೀಸಿದೊ, ಅದ್ ಚಾಕರಿ ಎಲ್ಲ ಮಾಡ್ತ್. ಅಂದ್ ಇದ್ಕೆ ಒಳ್ಳೊ ಮೊಂದ್ರಿ ಕೊಟ್ಟೊ. ಇಂದನೆ ನಿಯಾಗೋಳ್ ಎಷ್ಟ್ ಇದರ್‌ಲ್ಲಿ ಮಲ್ಗ್‌ದ್. ಇಂದ ಈ ಒಳ್ಳಿ, ಈ ಹಾಸಿಗೆ, ಈ ಮೋಂದ್ರಿಂತ ಕೊಟ್ಟೊ. ಅದ್ ಯಾಕಪ್ಪ ನನ್ನ ಅವ್ವ ಸಾಯುಕನ ನನ್ನ ಹಾಸಿಗೆ ಮೊಂದ್ರಿ ಎಲ್ಲ ಹೋಗ್‌ಟ್ಟ್. ನಂಗೆ ಇದ್ ಯಾಕೆಂತ ನಂಗೆ ನಿತ್ಯದ್ದೇ ಇರ್‌ಲ್ಲಿಂತ ಹೇಳ್ತ್‌ಗಡ. ಮಲ್ಗಿದ್ ಮಾರನೆ ದಿನ ದನ ಹೊಡ್ಕೊಂಡ್ ಹೋಕನ ಬಾನೆ ಪ್ರೊಯಿಂತ ಹೇಳ್ದ್ರ ಕೂಡ ಬಾತ್ಲೆಗಡ. ಬಾ ಪ್ರೊಯಿಂತ ಸುಮಾರ್ ಎಡೆದೂರಿಗೆ ಮುಟ್ಟ ಕರ್ತ್‌ಗಡ. ಕರ್ದರ್‌ನೂ ನಾ ಬಾದ್ಲೆ, ನಾ ಬಾದ್ಲೆ. ನಂಗೆ ಮುಳ್ಳ್ ಹೆಟ್ಟಿದೆ. ಬಾದ್ಲೆಂತ ಹೇಳ್ತ್‌ಗಡ. ಹಂಗೆ ಇದ್ ದನಂಗಳ ಹೊಡ್ಕೊಂಡ್ ಹೋತ್ ಗಡ. ಹೋಗಿ ಸುಮಾರ್ ಪತ್ತ್ ಗಂಟೆ ಹೊತ್ತಿಗೆ ಅಲ್ಲಿಗೆ ಎತ್ತ್ಯಟ್. ನೋಡಿಕನ ಈ ಗೋಂಟೆಕಾಯಿ ಬೊಳ್ಳಿ ಇಡೀ ಬಾಡಿಟ್ಟ್. ನೋಡ್ರೆ ಬೊಳ್ಳಿ ತಂಡಾಗ್‌ಟ್. ಅಲ್ಲಿಂದ ಹರಹರಾಂತ ಹೇಳಿ ಅಯ್ಯೊನ ದೂಪೆಗೆ ಅಡ್ಡ ಬೀತ್‌ಗಡ. ಅಡ್ಡ ಬಿದ್ದಾಕನ ಅಯ್ಯೋ ಇಂಥ ಕಷ್ಟ ನಂಗೆ ದೇವರ್ ಕೊಟ್ಟ್ ಬುಟ್ಟೋ ಅಲ್ಲಂತ ಹೇಳ್ತ್‌ಗಡ. ಅಮೇಲೆ ಬೊಳ್ಳಿಲಿ ಇದ್ದ ಹಣ್ಣ್‌ನ ಎಲ್ಲ ಕೊಯ್ತ್. ಇದ್ ನಂಗೆ ಮಾಡ್ದ ಗೆತಿಂತ ಗೇಣಮಾಡಿಕನ್ತ್. ಇದೇ ಕುರ್ತಿ ಮಗಳ್ ಮಾಡ್ದ್. ಮತ್ತೇನಲ್ಲಂತ ಪ್ರೊರ್‌ಲ್ಲ ಕೊಯ್ತ್ ಕುಡ್ತ್ ಬಾತ್. ನನ್ನ ಭಾಗ್ಯವೇ ಹಾಳಾತ್‌ಂತ ಹೇಳ್ತ್ ಬಾತ್‌ಗಡ. ಬಂದ್‌ಂದ್ ಮಾರನೆ ದಿನ ವಾಪಸ್ ಆ ಹಾಳಾದ ಗೋಂಟೆಕಾಯಿನ ಕೊಯ್ತ್ ಕುಡ್ತ್.

ಹಾಂಗೆ ಅದರಂದ ಮಾರ್ನೆ ದಿನ ಬಾತ್. ದನಗಳ ಚಾಕರಿ ಮಾಡ್ತ್. ಹಸ್‌ಗೆ ಹಾಲ್ ಕರಿಯುಕೆ ಪಾತ್ರೆ ತಕೊಂಡೊಗಿ ಮೊಡ್ಪಲೆ ಒಡ್ಡಿದ ಕೂಡ್ಲೆ ಹಸ್ ಕರ್ ಬುಡಿಕೆ ಬುಟ್ಟತ್‌ಗಡ. ಹಾಂಗೆ ಕರ್ ಬುಟ್ಟತ್. ವಾಪಾಸ್ ಮಾರನೆ ದಿನನ್ ಹೋತ್ ಅಂದ್‌ಗೆ ಗೋಂಟೆಕಾಯಿ ಮುಗ್ತ್. ಮನೆಗೆ ಬಾತ್ ಗಡ. ಮನೆಗೆ ಬಾಕನ ಒಬ್ಬ ಒಂದ್ ಊರ್ನ ಅರಸ್‌ಗೆ ಒಂದ್ ಮಂಜ ಹುಟ್ಟಿತ್ ಗಡ. ಅಂವ ದಿನಂದ ದಿನಕ್ಕೆ ವರ್ಣ (ಬಣ್ಣ) ಬದಲಾದು (change). ಅಂವನ ಹೆಣ್ಣ್ ಮೀನ್ ಕುಮಾರನ ಹೆತ್ತ್‌ತ್ ಗಡ. ಮೀನ್‌ನ ಆಕಾರ. ಮೀನ್‌ನ ಆಕಾರಲಿ ಹೆತ್ತದರ ಕೆರೆಗೆ ತಂದ್ ಹಾಕಿದೊ. ಹಾಕಿದ್ ಒಂದ್ ಆರ್ ತಿಂಗ ಆಕನ ಅದ್ ಬಲ ಆತ್. ಬಲ ಆಗಿದ್ ರಾಜ ಕೈಕಾಲ್ ತೊಳಿಯುಕೆ ಆಕನ ನಂಗೆ ಮೊದುವೆ ಮಾಡಿಯುನ ಇಲ್ಲರೆ ನಿನ್ನ ಈಗ ತಿನೋಕಂತ ಹೇಳ್ತ್‌ಗಡ. ಹಾಂಗೆ ಊರ್‌ಲ್ಲಿದ್ದ ಗೂಡೆಗಳ ಎಲ್ಲ ಈ ಮೀನ್ ಕುಮಾರಂಗೆ ತಂದ್ ಒಪ್ಪಿಸುದ್. ಇಂವನ ಒಂದ್ ಆಸ್ಥಾನ ಉಟ್ಟುಗಡ. ಶಿವ ಕಟ್ಟೆನಾಂಗೆ ಆ ಕಟ್ಟೆ ಮೋಲೆ ಇವರ ಶೃಂಗಾರ ಮಾಡ್ದ್. ಕರ್ಕೊಂಡೋಗಿ ಕುದ್ರಿಸುದ್ ಗಡ. ದಾರೆಗೆ

ಅಂವ ಬರೊಕಲ್ಲೆ. ಮೊನ್ನನಾಂಗೆ. ಕುದ್ರಿಸಿ ಆಕನ ಇಂವ ಅಡಿಗೆ ಮೇಲೆ ಮೊಕ್ಕೊಂಡ್ ಬಾದು ಇದ್. ಬುಂಳ್ಕಂತ ಇದರ ಹಾರಿ ನುಂಗ್‌ದು. ಹಾಂಗೆ ಮುಗ್ಸಿ ಮುಗ್ಸಿ ಆಕನ ಗೂಡೆಗ ಎಲ್ಲ ಮುಗ್ದೊ. ಇಂವ ಹುಡುಕ್‌ತ್ತಾ ಬಾತ್. ಈ ರಾಜನೊಟ್ಟಿಗೆ ಬಂದ್ ಕೇಳ್ತ್. ಅಂವನ ಊರ್ಲಿದ್ದ ಗೂಡೆಗಳ ಮುಗ್ತ್. ಇಂವನ ಊರ್ಲಿ ಕೇಳ್ತ್ ನಂಗೆ ಹೀಂಗೆಂಗೆ ಒಂದ್ ಗೂಡೆ ಆಕಿತ್ತ್ ಏನ್ ಮಾಡ್ದುಂತ. ನನ್ನಕ್ಕಲೆ ಒಂದ್ ಮಗ ಉಟ್ಟ್. ತಬ್ಬುಲಿ. ಅಯ್ಯೆ ಇಲ್ಲೆ. ನಾ ಅಪ್ಪ ಒಳೆ. ಹಂಗೆ ಎರಡ್ನೆ ಹೆಣ್ಣ್ ಏನ್ ಮಾಡ್ದು. ಅದರ ಕೊಡ್ದಾದರೆ ಕೊಡೋಮಾಂತ ಹೇಳ್ತ್. ಹಾಂಗೆ ಮನೆಗೆಲ್ಲ ಬಾತ್. ಈ ರಾಜನ ಮನೆ ಎಲ್ಲ ನೋಡ್ತ್. ನೋಡಿ ಮುಂದೆನ ಹೆಣ್ಣ್‌ನ ಮಗಳ. ಚಿಕ್ಕಮ್ಮನ ಕುರ್ಡಿ ಮಗಳನೂ ನೋಡ್ತ್.

ನೋಡಿ ಅವರೊಟ್ಟಿಗೆ ಊಟ ತಿಂಡಿ ಎಲ್ಲ ಆತ್. ಅಂದ್ ಈ ಗೊಡೆನ ಕರ್ಕೊಂಡೋಕೆ ಎಲ್ಲ ನಿಘಂಟ್ ಮಾಡಿ ಅಪ್ಪ ಒಪ್ಪಿತ್. (ಮುಂದೆನವು ಅಪ್ಪ ಒಪ್ಪಿದ ಮೇಲೆ ಮತ್ತೆ ಮಕ್ಕ ತಪ್ಪಟ ಇಲ್ಲೆಗಡ). ಹಿಂಗೆ ಇದ್ ಒಂದ್ ಐದ್ ಗಂಟೆಗೆ ಗುಡ್ಡೆಗೆ ದನನ ಹೊಡ್ಕೊಂಡೋದ್ ಗೂಡೆಬಾತ್. ಬಾಕನ ಕುರ್ಡಿ ಮಗ ಓಡಿಬಾತ್‌ಗಡ. ಅಕ್ಕಕ್ಕ ನಿನ್ನ ಇಂದ್ ಹೆಣ್ಣ್ ಮಾತಡಿಕೆ ಬಂದೊಳೊ. ನಿನ್ನ ಕೊಡ್ದ್ ಮೊನ್ ಕುಮಾರಂಗೆ ಗಡ. ಅಂವ ಊರ್ಲಿದ್ದ ಗೂಡೆಗಳ ಎಲ್ಲ ತಿಂದುಟ್ಟ್ ಗಡ. ಎಲ್ಲ ತಿಂಬೊದ್ ಗಡ. ಕಟ್ಟೆ ಶೃಂಗಾರ ಮಾಡಿ ಕುದ್ರಿಸಿ ಬೇಕಾದ ತಿಂಡಿ ಎಲ್ಲ ಕೊಡ್ದ್‌ಗಡ. ಇದ್ ಬೆಳ್ದ್ ಸೀರೆ ನಮ್ಮ ದಾರೆ ಕಾರ್ಯುದ್ ಉಡ್ಸುದು ಗಡ. ಹೂವ್ ಮುಡ್ಸಿದ್‌ಗಡ ಶಿಂಗಾರ ಇಡುದ್‌ಗಡ. ಗೂಡೆಗ ಮಂಗಳಾರತಿ ಎಲ್ಲ ಮಾಡಿ ಅಲ್ಲಿ ಕರ್ಕೊಂಡೋಗಿ ಕುದ್ರುಸುದ್‌ಗಡ. ಕುದ್ರಿಸಿ ಹರಿವಾಣ ಹಿಡ್ಕಂಡ್ ಕುದ್ರುದ್‌ಗಡ. ಮದುಮಳಿಗ ಅಂವ ಬಂದ್ ನುಂಗುದ್‌ಗಡ. ಆ್ಣಂತ ಹೇಳ್ತ್. ಹಂಗೆ ಹೇಳಿಕೆ ಆಕನ ಇದ್ ಲಾಯಿಕಾತಳ್ಳೆ. ಇದ್ ಬಂಗ ಇಲ್ಲೆ ಅಲ್ಲಿ ಮತ್ತೆ. ಇನ್ನೇನು ಮಾಡ್ದು. ಇದ್ ಹಾಂಗೆ ಹೇಳಿದ್ ವಾಪಾಸ್ ಬಾತ್‌ಗಡ. ಬಂದ್‌ದ್ ಈ ಕಬುಳ್ಚಿ ದನಂಗಳ ಎಲ್ಲ ಮೈಮುಟ್ಟಿ ಪೂಜಿದ್ ನಾಳೆಂದ ಮೇಲೆ ನೀವ್‌ಗೆ ಚಾಕರಿಗೆ ಜನ ಇಲ್ಲೆ ಬಳಂತ ಹೇಳಿ ಎಲ್ಲ ಕೈಮುಟ್ಟಿ ಕೂಗ್ತ್‌ಗಡ. ಆಗ ದನಂಗ ಎಲ್ಲ ಎದ್ದ್ ಬೆರೆಬೆರೆಂತ ಹೇಳ್ದೊಗಡ. ಬೆರೆ ಬೆರೆಂತ ಹೆಳ್ಕನ ಆಕಾಶವಾಣಿ ಹೇಳ್ತ್‌ಗಡ. ನಿನ್ನ ಅಯ್ಯೆನ ದೂಪೆಂದ ಎಡ ಪಾರ್ಶ್ವಲಿ ಈಶಾನ್ಯ ಭಾಗಲಿ ಒಂದ್ ನಾಗರ ಹುತ್ತ ಉಟ್ಟ್. ಈ ಹುತ್ತಲಿ ಸರ್ಪ ಉಟ್ಟ್. ಆ ಸರ್ಪಕ್ಕೆ ಪ್ರಾಣ ಸಂಕಟ. ನೀ ಹೋಗಿ ಆ ಹುತ್ತನ ಮುರಿಯೊಕ್. ನೀ ಮುಟ್ಟಿರೆ ಆ ಸರ್ಪನ ಬಾಪ್ ಒಡ್ಡದೆಂತ ಹೇಳ್ತ್‌ಗಡ. ಇದೊಂದ್ ಹೌದ್. ದೈವ ಕಾರ್ಯ ಹೌದ್. ದೇವ್ರು ನಂಗೆ ಹೇಳ್ದಂತ ಸೀದಾಬಾತ್. ಬಂದ್‌ದ್ ಈ ಹುತ್ತನ ಮುರ್ತ್. ಹುತ್ತನ ನೋಡಿಟ್ಟ್ ಅದ್ ಮುಂದೆ. ಇದ್ ಸಣ್ಣ ಕೂಸ್ ಅಲ್ಲ. ಹುತ್ತನ ಹೆದ್ರಿ ಯಾರ್ ಹಕ್ಕಲೆ ಹೊದ್‌ಲೆ ಅಲ್ಲ.

ಹಂಗೆ ಮಿೂನ್‌ಕುಮಾರಂದ ಸಾಯುಉದರಿಂದ ಇದಾದರೂ ಕಚ್ಚಿ ಕೊಂದರೂ ಆಮಂತ ಸೀದಾ ಬಾತ್. ಬಂದಾಕನ ಇದ್ ಬುಸ್ಂತ ಎದ್ದತ್. ಎದ್ದಾಕನ ಹೋಗಿ ಅದರ ಪೂಜಿತ್. ಕಚ್ಚಿದರೂ ಕಚ್ಚಲಿಂತ ಹೇಳಿ. ಆದ್ ಟಪ್ಪ ಒಡ್ತ್‌ಗಡ. ಅದರ ಬೇನೆ. ಬೇನೆ ಒಡ್ದಾಕನ ಅದ್ ಉಸಾರಾಗಿ ನೀ ಏನಾಗಿ ಬಂದೆ ಮಗಳೇಂತ ಕೇಳ್ತ್‌ಗಡ. ಅಯ್ಯೋ ನಾ ಬಂದ ಕಷ್ಟ ಇಂತದ್. ನನ್ನ ಅಪ್ಪ ಇಂದ್ ಮಿೂನ್ ಕುಮಾರಂಗೆ ಕೊಡ್ದ್‌ಗಡ. ಆ ರಾಜನ ಊರ್ಲಿದ್ದ ಗೂಡೆಗೆಲ್ಲ ಮುಗ್ದೊಳೊಗಡ. ಇನ್ನ್ ನನ್ನ ಅಪ್ಪ ನಾ ತಬ್ಬಿಂತ ಹೇಳಿ. ನನ್ನ ಕೊಡಿಕೆ ಒಪ್ಪಂದ ಮಾಡ್ಯೊಳಗಡ. ಇಂದ್ ಆ ರಾಜ ನನ್ನ ಕರ್ಕೊಂಡೋಕೆ ಬಂದ್‌ಟ್ಟ್. ಇನ್ನ್ ಕರ್ಕೊಂಡೋಗಿದ್ ಅಂವಂಗೆ ತಿನ್ನಿಕನ ಮುಟ್ಟ ಇಂವ ಮಾವ. ನನ್ನ ಮಾವ ಬಂದುಟ್ಟ್. ನಾ ಇನ್ನ್ ಹೊಣೆ. ಹಂಗೆ ನೀಯಾರ್ ನನ್ನ ಕೊಲ್ಲುವಾಂತ ನಾ ಇಂದ್ ಬಂದದ್. ಅಯ್ಯೋ ಮಗಳೆ. ನಿನ್ನ ಕೊಲ್ಲುದಿಲ್ಲೆ ಬಳ. ನಿಂಗೆ ನಾ ಮೂರ್ ಕಲ್ಲ್ ಕೊಟ್ಟನೆ. ಈ ಮೂರ್‌ ಕಲ್ಲ್‌ನ ನಾ ಮಂತ್ರಿಸಿ ಕೊದ್ದು. ಇದರ ಮೊಟ್ಟೆಲಿ ಲ್ಯಾಕ್ ಕಟ್ಟಿಕೊ. ಯಾರಿಗ್ ತೋರ್‌ಸಬಡ. ನಿನ್ನ ಶೃಂಗಾರ ಮಾಡಿ ಕರ್ಕೊಂಡೋಕನ ಕಟ್ಟಿಕೊನೊಕ್. ಅದರ ಲ್ಯಾಕ್, ಇಂದ ಕಟ್ಟಿಕೊಂತ್ ಹೇಳಿ ಅದ್ ಅದಕ್ಕೆ ಮಂತ್ರಾಕ್ಷ ಎಲ್ಲ ಹೇಳಿ ಕೊಟ್ಟತ್‌ಗಡ. ಇದ್ ಬಾತ್. ಊಟ ತಿಂಡಿ ಎಲ್ಲ ಆತ್. ಇವರ ದಿಬ್ಬಣಲಿ ಅಪ್ಪನ ಮಗಳ ಎಲ್ಲ ಕರ್ಕೊಂಡ್ ಹೋತ್ ರಾಜ. ಅಂದ್ ಕತ್ತಲೆಗೆ ಸುಮಾರ್ ಒಂಬತ್ತುವರೆಗೆ ಅದರ ಕರ್ಕೊಂಡೋಗಿ ಕುದ್ರಿಸುದ್‌ಗಡ. ಈ ಬಾಮಿ ಕಟ್ಟೆಲಿ. ಅಲ್ಲಿ ಶೃಂಗಾರ ಆತ್. ಬಣ್ಣ ಬಂಗಾರ ಕೊಡ್‌ವ ಮೊದ್‌ಪೆ ಕ್ರಮ ಎಲ್ಲ ಆತ್. ಆಗಿ ತಕೊಂಡೋಗಿ ಬಾಮಿಕಟ್ಟೆಲಿ ಕುದ್ರಿಸಿದೊಗಡ. ಕುದ್ರಿಸಿ ಇವ್ ಬಂದೊ. ಇವ್ ದೀಪ ಹೊತ್ತಿಸಿ ಬಾದಲ್ಲ. ಇದ್ ಧೈರ ಮಾಡಿಕನ್ತ್.

ಮಿೂನ್‌ಕುಮಾರ ಮೊಕ್ಕೊಂಡ್ ಬಾತ್. ಬಂದ್ ಮೇಲೆ ಬಾತ್‌ಗಡ. ಮೇಲೆ ಬಾಕನ ಒಂದ್ ಕಲ್ಲ್ ಹೊಡ್ತ್‌ಗಡ. ಬಿಚ್ಚಿತ್ ಕಲ್ಲ್ ರಡೀ ಮಾಡಿಕನ್ತ್. ಬುಳ್ಕ ಅಡಿಗೆ ಕಂತಿತ್. ವಾಪಾಸ್ ಮೇಲೆ ಬಾತ್‌ಗಡ ಒಂದ್ ಕಾಲ್‌ಗಂಟೆ ಕಳಿಯುಕನ ಮೇಲೆ ಬಂದ್ ಕಂತಿತ್. ಬಾಕನ ಕೊಟ್ಟತ್. ಅದ್ ಮಂತ್ರಆಕ್ಷಯ ಮಾಡ್ದ ಕಲ್ಲಲ್ಲ. ಹೇಂಗೆ ಹೊಡ್ದರೂ ತಾಂಗಿದೆ. ವಾಪಾಸ್ ಕಂತಿತ್‌ಗಡ. ವಾಪಸ್ ಕಂತಿ ಮತ್ತೊಂದ್ ಸಲ ಬಾಕನ ಮೂರ್ನೆ ಕಲ್ಲ್‌ನ ಸರಿ ಮೇಲೆ ನೆತ್ತಿಗೆ ಗುರಿ ಇಟ್ಟತ್. ಮೊನ್ಸನ ಆಕಾರಲೆ ಬಾತ್‌ಗಡ. ಬುಳ್ಕ ಕಂತಿತ್‌ಗಡ. ಕಂತಿದ್ ಅಲ್ಲಿಂದ ಮಿೂದ್ ಕೊಂಡೇ ಬಾತ್. ಇಂವ ಮಾರನೆ ದಿನ ಬೊಳ್ಪಿಗೆ ನೋಡಿಕೆ ಹೋದು. ಈ ಮಂಚನ. ಮಿೂನ್ ಕುಮಾರನ ನೋಡಿಕೆ ಆಕನ ಇವ್ ಇಬ್ಬರ್ ಕುದ್ದ್‌ಕೊಂಡ್ ಒಳಗಡ. ಅಲ್ಲಿಂದ ಕರ್ಕೊಂಡ್‌ಬಂದೊ. ಅಂವಂಗೆ ಕರ್ಕೊಂಡ್ ಬಂದ್ ಬೇಕಾದ ಧಾರೆ ಕಾರ್ಯಗಳ ಎಲ್ಲ ಮಾಡ್ದೊ. ಊರಿಗೆ ಎಲ್ಲ ಡಂಗ್‌ರ ಕೊಟ್ಟೊ. ಈ ರಾಜನ

ಬಾಕೆ ಹೇಳ್ದೊ. ಹೆಣ್ಣ್ ಕೊಟ್ಟಂವನ ಅಂವನ. ಬಾರಿ ಶೃಂಗಾರ ಮಾಡಿ ದಾರೆ ಕಾರ್ಯ ಎಲ್ಲ ಮಾಡಿ ಅಲ್ಲಿಂದ ದಾರೆ ಎಲ್ಲ ಕಳ್ದ. ಅವರ ಶೇಪೋಪಚಾರ ಎಲ್ಲ ಕೆಳ್ದ. ರಾಜಂಗೆ ಹೆಣ್ಣ್ ಕೊಟ್ಟಪಂಗೆ ಉಡಿಗಿರೆ ಎಲ್ಲ ಕೊಟ್ಟ್. ಸಂತೋಷಲಿ ಅವ್ ಮೆರ್ಕೊಂಡ್ ಇದ್ದೊಗಡ. ಅಲ್ಲಿಗೆ ಕತೆ ಮುಗ್ತ್.

**೧.೬ ಕ್ರೂರ ಮಲತಾಯಿ : ಮಕ್ಕಳಿಗೆ ಕಷ್ಟಕೊಡುವುದು.**

[(ಗೌಕಜಕ–೨೯) (ವರ್ಗ–೪೦೩)]

ಒಂದ್ ಊರ್ಲಿ ಒಂದ್ ರಾಜ. ಆ ರಾಜಂಗೆ ಏಳ್ ಅಬ್ಬೆಗ. ಈ ಏಳ್ ಅಬ್ಬೆಗ ಇದ್ದರ್‌ಕೂಡ ಅವ್‌ಕೆ ಮಕ್ಕ ಇಲ್ಲೆ. ದಿನ ಅವರಲ್ಲಿಗೆ ಈ ಬೇಡವ್ ಕಾಡವ್‌ಂತ ಬರ್ತಾ ಇದ್ದವೆ. ಬೇಡವ್ ಬಂದರೆ ಭಕ್ತಿ ಇದ್ದದ್ ಕೊಡ್ತಿದ್ದೊ. ಒಂದ್ ದಿನ ಒಂದ್ ರಾಣಿ ಹೇಳ್ತ್. ನಾವ್ ಇನ್ನ್ ಬೇಡವ್‌ಕೆ ಧರ್ಮ ಕೊಡಟ ಇಲ್ಲೆ. ಧರ್ಮದ ಬಾಗಿಲ್ ಮುಚಿಸಿ ಕರ್ಮದ ಬಾಗಿಲ್ ತೆಗ್ದಿಸೊಕ್. ನಾವಿನ್ನ್ ಕೊಡ್ದಿಲ್ಲೆ ಹಂಗೆಂತ ಒಂದ್ ರಾಣಿ ಹೇಳ್ತ್. ಕೆಲವ್ ದಿನಗಳೊಳಗೆ ಒಂದ್ ದಿನ ಒಬ್ಬ ಬೇಡಂವ ಬಾತ್. ಬಂದಾಕನ ಧರ್ಮ ಕೊಡಿಯವ್ವಾಂತ ಹೇಳ್ದ. ಧಮ್ಮ ನಾವ್ ಕೊಡಾಟ ಇಲ್ಲೆ. ನಾವ್ ಎಷ್ಟ್ ಧರ್ಮ ಕೊಟ್ಟರ್ ಏನ್. ಆದರ್ ನಾವ್‌ಗೆ ಸುಖ ಇಲ್ಲೆ. ನಾವ್ ಏಳ್ ಜನ ಹೆಣ್ಣ್‌ಮಕ್ಕಂತ ಹೇಳಿನ್ ನಾವ್‌ಗೆ ಒಂದ್ ಸಂಸಾರಾಂತ ಕಾಂಬಕೆ ಇಲ್ಲೆ. ಹಂಗೆ ನಾವ್ ಧರ್ಮ ಕೊಡ್ದ್ ಬುಟ್ಟೊಳೊ. ನಾವ್ ಕರ್ಮದ ಬಾಗಿಲ್ ತೆಗ್ದಿಸಿಯೊಳ. ಧರ್ಮದ ಬಾಗಿಲ್ ಮುಚ್ಚಿಯೊಳ. ಅದ್ ಆಕ್ಕೇ ಇಲ್ಲೆ. ನಂಗೆ ಬಂದಲ್ಲಿಗೆ ನೀವ್ ಧರ್ಮ ಕೊಡೊಕ್. ನಿಮ್ಮ ಮನೆಲಿ ಸಂಸಾರ ಆದು. ಹಾಗೆಂತ ಹೇಳ್ತ್. ಹಾಂಗೆ ಅವ್ ಧರ್ಮ ಕೊಟ್ಟೊ. ಅಷ್ಟಾಕನ ಅಂವನ ಜೋಲಿಗೆ ಉಟ್ಟಲ್ಲೆ. ಬೇಡವರ ಜೋಲಿಗೆ ಆದರಂದ ಒಂದ್ ಮಾವಿನ ಹಣ್ಣ್ ತೆಗ್ದ್ ಕೊಟ್ಟತ್. ನೀವ್ ಏಳ್ ಜನ ಹೆಣ್ಣ್ ಮಕ್ಕಳ್ ಈ ಮಾವಿನ ಹಣ್ಣ್‌ನ ಪಾಲ್ ಮಾಡಿ ತಿನ್ನೊಕ್. ಹಂಗೆಂತ. ಹಂಗೆ ಈ ಮಾವಿನ ಹಣ್ಣ್‌ನ ಅವ್ ಏಳ್ ಜನನೂ ಪಾಲ್ ಮಾಡಿ ತಿಂದೊ. ಆರ್ ಜನ ತಿಂದೊ. ಒಂದ್ ಲಾಸ್ಟ್ ಅಬ್ಬೆಗೆ ಈ ಹಣ್ಣ್‌ನ ಕೊಟ್ಟತ್‌ಲ್ಲೆ. ಅವ್ ತಿಂದ ಆ ಮಾವಿನ ಕೊರಂಟ್ ಬಿದ್ದ್ ಎಲ್ಲಿಯೋ ಅದಕ್ಕೆ ಸಿಕ್ಕಿತ್. ಸಿಕ್ಕಿದರ ಹೆರ್ಕಿ ಅದ್ ತೀನ್ತ್. ಹಂಗೆ ಕೆಲವ್ ಸಮಯ ಕಳ್ದಾಕನ ಅಕೇರಿನ ಹೆಣ್ಣ್ ಗರ್ಭಿಣಿ ಆತ್. ಗರ್ಭಿಣಿ ಆಗಿದ್ ಏಳ್ ತಿಂಗಳ ಒಂದ್ ಕ್ರಮ ಉಟ್ಟಲ್ಲ. ಆ ಕ್ರಮನ ಎಲ್ಲ ಕಳ್ಸಿದೊ, ಕಳ್ಸಿ ಎಂಟನೆ ತಿಂಗಳಿಗೆ ಆಕನ, ಆ ರಾಜಂಗೆ ದಂಡಿಗೆ ಹೋಂವ ದಿನ ಬಾತ್. ದಂಡಿಗೆ ಹೋಂವ ದಿನ ಬಾತ್ ರಾಜ ದಂಡಿಗೆ ಹೋತ್. ಮತ್ತೆ ಅಲ್ಲಿ ಮನೆಲಿ ಇರ್ದ್ ರಾಣಿಗಳೇ. ರಾಜ ಹೋಕೆ ಆಕನ ಹೇಳಿ ಹೋಗ್‌ಟ್ಟ್. ರಾಣಿ ಕಷ್ಟ ಬಾಕೆ ಆಕನ ನಾ ಚಿನ್ನದ ಹಗ್ಗ ಪುತ್ತ್ ಬೆಳ್ಳಿ ಹಗ್ಗ ಎರಡ್ ಬುಟ್ಟ್ ಹೋನೆ. ಒಂದ್

ತುಂಡ್' ನನ್ನ ಕೈಲಿ, ಒಂದ್ ತುಂಡ್' ನಿಮ್ಮ ಕೈಲಿ. ರಾಣಿ ಸುಖಲಿ ಇರಿಕಾಕನ ಬೆಳ್ಳಿ ಹಗ್ಗನ ಎಳ್ದರೆ ಸಾಕ್. ರಾಣಿ ಕಷ್ಟ ಬಂದಿರಿಕೆ ಆಕನ ಚಿನ್ನದ ಹಗ್ಗ ಎಳಿಯೊಕ್. ಹಾಂಗೆಂತ ಹೇಳಿ ರಾಜ ದಂಡಿಗೆ ಹೋತ್.

ಕೆಲವ್ ದಿನ ಆತ್'. ರಾಣಿಗೆ ಅಂದ್ ಹೆರಿಗೆ ದಿನ ಬಾತ'. ಬಂದ್ ಅದೇ ದಿನ ರಾಣಿ ಕೇಳ್ತ್ ಈ ಅಕ್ಕಂದರೊಟ್ಟಿಗೆ. ಅಕ್ಕ ಈ ಊರ್ನ ಹೆರಿಗೆ ಹೇಂಗೆ. ಹಾಂಗೆಂತ. ಅಷ್ಟಾಕನ ಅವ್ ಹೇಳ್ದೊ. ರಾಜರ' ಇಲ್ಲೆ. ಚಿನ್ನದ ಹಗ್ಗನ ಎಳಿಯೊಕ್. ಅವ್ ಹೇಳಿ ಹೋಗೊಳೊ. ಚಿನ್ನದ ಹಗ್ಗ ಎಳಿನಿಂತ ಒಂದ್ ರಾಣಿ ನೊಟ್ಟಿಗೆ ಹೇಳಿಕನ ಮತ್ತೊಂದ್ ರಾಣಿ ಹೋಗಿದ' ಬೆಳ್ಳಿ ಹಗ್ಗ ಎಳ್ತ್. ಹಾಂಗೆ ಆವರೆ ನಾ ಮನೆ ಕಡೆ ಹೊದ್‌ಲೆ. ಅವ್ ಉಷಾರೊಳ ಹಂಗೆಂತ ಬಾತ್ಲೆ. ಈ ರಾಣಿ ಹೆರ್ಗ ಆಕೆ ಆಕನ ಕೇಳ್ತ್. ರಾಜ ಬಾತ್ಲೆಯಾಂತ. ಬಾವೊ ಚಿನ್ನದ ಹಗ್ಗ ನಾವ್ ಎಳ್ದೊಳೊ. ಬಾರದಿರಕಿಲ್ಲೆಂತ ಬೇರೆ ರಾಣಿಗ ಹೇಳ್ದೊ. ಸ್ವಲ್ಪ ಹೊತ್ತ್‌ಲಿ ಅದ್ಕೆ ಹೆರ್ಗೆನ್ ಆತ'. ಎರಡ' ಮಕ್ಕ. ಒಂದ' ಗಂಡ'. ಒಂದ್ ಹೆಣ್ಣ್. ಈ ಮಕ್ಕ ಹುಟ್‌ಕನ ಕೂಡ್ಲೆ ಈ ಆರ್ ಜನ ರಾಣಿಗ ಈ ರಾಣಿನ ಕಣ್ಣಿಗೆ ಬಟ್ಟೆ ಕಟ್ಟಿ ಆ ಎರಡ್ ಮಕ್ಕಳ ತೊಕೊಂಡ' ಹೋಗಿದ' ಗೊಬ್ಬರದ ಗುಡ್ಡೆಲಿ ಹುಗ್‌ದೊ. ಈ ಹೆರ್ಗ ಆದ ರಾಣಿನ ಜಾಗಕೆ ಓಂತಿ, ಹಾವ್, ಪೊಲ್ಲಿ, ಕೊಂಬುಚೋಳ' ಎಲ್ಲ ತಂದ್ ಹಾಕಿದ್ ಅವರ ಕಣ್ಣ್ಂದ ಬಟ್ಟೆ ಬಿಚ್ಚಿ ಬುಟ್ಟೊ. ನೋಡ್ ನಿನ್ನ ಮಕ್ಕ ಹಾಂಗೆಂತ. ಅಲ್ಲಿಂದ ಕೂಡ್ಲೆ ಚಿನ್ನದ ತಂತಿ ಎಳ್ದೊ. ನಿಮ್ಮ ರಾಣಿಗೆ ಹೆರ್ಗ ಆಗುಟ್ಟ್ ನೀವ್ ಬನ್ನಿಂತ. ಅವ್ ಬಂದೊ. ಬಂದಾಕನ ನೋಡಿ ನೀವ್ ತಂದ ನಿಮ್ಮ ಕಡೇ ರಾಣಿನ ಮಕ್ಕ ಹಾಂಗೆಂತ ಆ ರಾಜನೊಟ್ಟಿಗೆ ಹೇಳ್ದೊ. ಅವುಕ್ಕೆ ನೋಡಿ ತುಂಬ ಬೇಸರ ಆತ್. ನಾಳೆಂದಲೇ ದಿನಕ್ಕೆ ಒಂದ್ ಪಾವ' ಅಕ್ಕಿ ಖರ್ಚ್‌ಗೆ ಕೊಟ್ಟ್ ಅವರ ಕುದ್‌ರೆ ಲದ್ದಿ ಎತ್ತಿಕೆ ಬುಡೊಕ್. ನಮ್ಮ ಮನೆಲಿ ಅದಿನ್ನ್ ಬೇಡ. ನೀವ್ ಆರೇ ಜನ ಸಾಕ' ಹಾಗೆಂತ ಹೇಳಿ ಈ ರಾಜ ಹೇಳಿ ಬುಟ್ಟತ್. ಮಾರನೇ ದಿನಂದಲೇ ದಿನಕ್ಕೆ ಖರ್ಚ'ಗೆ ಒಂದ್ ಪಾವ್ ಅಕ್ಕಿ ಕೊಟ್ಟ್‌ದ' ಈ ರಾಣಿನ ಕುದುರೆ ಲದ್ದಿ ಎತ್ತಿಕೆ ಬುಟ್ಟೊ. ತಲೆ ಕೂದಲೆಲ್ಲ ಮುಂಡೆ ಮಾಡಿದ' ಅದರ ಬುಟ್ಟೊ. ಆದ' ದಿನಕ್ಕೆ ಒಂದ್ ಪಾವ'ನ ಅನ್ನ ಬೆಯಿಸಿಕಂಡ' ಊಟ ಮಾಡಿಕಂಡ' ಅಲ್ಲೇ ಇತ್ತ್.

ಈ ಗೊಬ್ಬರದ ಗುಡ್ಡೆಲಿ ಹುಗ್‌ದ ಎರಡ' ಮಕ್ಕೊ ಒಳ ಅಲ್ಲ, ದಿನಾಲ್ ಈ ಬಾಕಿ ಆರ' ಜನ ಅಬ್ಬೆಗೆ ಹಟ್ಟಿಗೆ ಹೋದವೆ. ಒಬ್ಬಲ್ಲರೆ ಒಬ್ಬ ಒಬ್ಬಲ್ಲರೆ ಒಬ್ಬ ಕರ' ಬುಡಿಕೆ ಹೋದವೆ. ಕರ' ಬುಡಿಕೆ ಹೋಗಿದ' ಕರ' ಬುಟ್ಟ್ ಚೊಂಬು ತುಂಬ್‌ತಾ ಬಾಕನ ಆ ಹಸ್ ಚೊಂಬ'ನ ಮುಟ್ಟಿ ಇಟ್ಟ್ದ. ಚೊಂಬ್ ಮುಟ್ಟಿ ಇಟ್ವಾಕನ ಹಾಲ್ ಕಂಕನಿ ಆತಲ್ಲ ಅಲ್ಲಿ. ಆ ಹಾಲ' ಈ ಗೊಬ್ಬರದ ಸೆರೆಗೆ

ಹರ್ಕೊಂಡ್ ಹೋದೆ. ಅದ್ ಈ ಮಕ್ಕಳ ಬಾಯಿಗೆ ಹೋಗಿ ಮಕ್ಕಳ್ ದಿನಂದ ದಿನ ದಿನಂದ ದಿನ ದೊಡ್ಡಿತಾದೊ. ಅದ್ ಒಂದ್ ರಾಣಿಗೆ ಕಂಡತ್. ಗೊಬ್ಬರದ ಗುಡ್ಡೆಲಿ ಹುಗ್‌ದ ಮಕ್ಕ ಈಗ ಗೊಬ್ಬರದ ಗುಡ್ಡೆನ ಮಗ್ಚಿಕಂಡ್ ಬಂದವೆ. ಅವರ ಎಂತ ಮಾಡ್ದ್ ಹಂಗೆಂತ ಆತ್. ಅದ್ ಹೇಂಗೆ ಅಷ್ಟ್ ದೊಡ್ಡಿತ್ತಾದ್. ಅದ್ ದಿನಾ ನಮ್ಮ ಕಬಿಲೆ ಹಸ್‌ನ ಕರ್‌ನ ಬುಡ್‌ಕನ ಚೊಂಬ್‌ನ ಮೆಟ್ಟಿ ಇಟ್ಟದೆ. ಆ ಚೊಂಬ್‌ನ ಮೆಟ್ಟಿ ಇಟ್ಟ ಕಾರಣ ಆ ಹಾಲ್ ಮಕ್ಕಳ ಬಾಯಿಗೆ ಹೋಗಿದ್, ಆ ಮಕ್ಕ ದೊಡ್ಡಿತಾದೊ ಹಾಂಗೆಂತ ಅವ್ ಮಾತಾಡ್ದೊ. ಹಾಂಗೆ ಆದರೆ ಏನ್ ಮಾಡ್ದ್. ಹೇಂಗೆ ಆ ಹಸ್‌ನ ಕೊಲ್ಲುವ್‌ಂತ ಹೇಳಿ ಈ ಆರ್ ಜನ ಹೆಣ್ಣ್ ಮಕ್ಕಳೂಸು ಮಾತಾಡ್ದೊ. ಇದರ‍್ಲಿ ಒಂದ್ ರಾಣಿ ಹೇಳ್ತ್. ನಾ ತಲೆಬೇನೆ ತಲೆಬೇನೆಂತ ಹೇಳಿ ಹೊನ್ಕ್‌ತಾ ಇದ್ದನೆ. ಮತ್ತೆ ನೀ ಒಂದ್ ಸೇರ್ ಹಣ ತಕೊಂಡೋಗಿ ವೈದ್ಯ ಗಾರಂಗೆ ಕೊಡೊಕ್. ನಮ್ಮ ರಾಜರ್ ಬಾವೊ. ನಮ್ಮ ರಾಣಿಗೆ ಒಂದಕ್ಕೆ ಸುಖ ಇಲ್ಲೆಂತ ಹೇಳಿದ್ ಇಲ್ಲಿಗೆ ಬಾವೊ. ಬಂದಾಕನ ನೀವ್ ಏನ್ ಹೇಳೊಕ್ ಗೊತ್ತ್‌ಟ್ಟ. ನಿಮ್ಮ ಹಟ್ಟಿಲಿ ಒಂದ್ ಕಬಿಲೆ ಹಸ್ ಉಟ್ಟ್. ಆ ಹಸ್‌ನ ತಲೆ ಕಡ್ದ್ ರಕ್ತ ತಂದ್‌ದ್ ನಿಮ್ಮ ರಾಣಿನ ಹಣೆಗೆ ಹಾಕಿರೆ ಮಾತ್ರ ಪ್ರಾಣ ಸಿಕ್ಕುದ್. ಇಲ್ಲರೆ ಪ್ರಾಣ ಸಿಕ್ಕುದ್ಲೆಂತ ನೀವ್ ಹೇಳೊಕೂಂತ. ಹಂಗೆ ಮಾರನೆ ದಿನ ಅದೇ ಕೆಲ್ಸ ಮಾಡ್ದೊ. ಒಂದ್ ರಾಣಿಗೆ ತಲೆಬೇನೆ. ಮತ್ತೊಂದ್ ರಾಣಿ ರಾಜನ ವೈದ್ಯಗಾರನ ಹಕ್ಕಳೆ ಒಂದ್ ಸೇರ್ ಹಣ ಕೊಟ್ಟ್ ಕಳ್ಸಿತ್. ಹೋಗಿ ಹೇಳಿ ಬನ್ನಿಂತ. ಅಲ್ಲಿಗೆ ಹೋಗಿ ನಮ್ಮ ರಾಣಿಗೆ ಸುಖ ಇಲ್ಲೆಂತ ಹೇಳಿಕೆ ಆಕನ ಆ ಜನ ಏನ್ ಹೇಳ್ತ್ ನಿಮ್ಮ ಹಟ್ಟಿಲಿ ಒಂದ್ ಕಬಿಲೆ ಹಸ್ ಉಟ್ಟ್. ಅದರ ತಲೆ ಕಡ್ದ್ ರಕ್ತ ತಂದ್ ಬೊಟ್ಟ್ ಹಾಕಿರೆ ನಿಮ್ಮ ರಾಣಿನ ಪ್ರಾಣ ಸಿಕ್ಕುದ್. ಇಲ್ಲರೆ ಪ್ರಾಣ ಹೋವೂಂತ. ರಾಜ ಬಾತ್ ಒಂದ್ ರಾಣಿನೊಟ್ಟಿಗೆ ಹೇಳ್ತ್. ನಾಳೆ ನಮ್ಮ ಒಂದ್ ಕಬಿಲೆ ಹಸ್‌ನ ತಲೆ ಕಡಿಯು ದಿದ್ದರೆ ಆಕಿಲ್ಲೆ ಗಡ. ಅದರ ರಕ್ತನ ತಂದ್ ಹಣೆಗೆ ಬೊಟ್ಟ್ ಹಾಕದಿದ್ದರೆ ನಮ್ಮ ರಾಣಿನ ಪ್ರಾಣ ಸಿಕ್ಕುದ್ಲೆಂತ.

ಅಂದೇ ರಾತ್ರೆ ಆ ಹಸ್‌ಗೆ ಸ್ವಪ್ನ ಬಿದ್ದ್ ಹಸ್ ಹಟ್ಟಿಂದ ಹೊರಟ್ ಹೋತ್. ಹಸ್ ಹೊರ್‌ಟ್ ಹೋಕನ ಈ ಏರಡ್ ಮಕ್ಕಳ ಕರ್ಕೊಂಡ್ ಆನೆನ ಕಾಲಡಿಲಿ ಬುಟ್ಟ್ ಇಷ್ಟರವರೆಗೆ ನಾ ಸಾಂಕನ ಮಾಡ್ಡೆ. ಇನ್ನ್ ಮೇಲೆ ನೀಸಾಂಕನ ಮಾಡೋ ಕುಂತ ಹೇಳಿದ್ ಅದ್ ಗಟ್ಟದ ಕಡೆಗೆ ಹೋತ್. ಹಸ್. ಕೆಲವ್ ದಿನ ಕಳ್ತ್. ಒಂದ್ ದಿನ ನೋಡಿಕೆ ಆಕನ ಆ ಆನೆನ ಕಾಲ ಅಡಿಲಿ ಈ ಮಕ್ಕ ಒಳೊ. ಮತ್ತೊಂದ್ ರಾಣಿ ಹೇಳ್ತ್. ಈಗ ಗೊಬ್ಬರ ಗುಡ್ಡೆಂದ ಆನೆನ ಕಾಲಡಿಗೆ ಆ ಮಕ್ಕ ಹೋಗೊಳ. ಮಕ್ಕ ಲ್ಯಾಕ್ ಒಳೊ. ಅವರ ಹೇಂಗೆ ಕೊಲ್ಲುದ್. ಆ ಆನೆನ ಇವ್ ಹೇಂಗೋ ಸಾಂಕಿವೆ. ಆ ಆನೆನ ಕೊಲ್ಲೊಕ್. ಹಾಂಗೆಂತಿದ್ದರೆ ವಾಪಾಸ್ ನಾವ್ ವೈದ್ಯಗಾರನಲ್ಲಿಗೆ

ಪೋಯು. ಅಲ್ಲಿಗೆ ಒಂದ್ ಸೇರʻ ಹಣನ ಮತ್ತೊಂದ್ʻ ರಾಣಿ ತಕೊಂಡೋತ್. ತಕೊಂಡೋಗಿ ನಮ್ಮ ರಾಜರʻ ಬಂದರೆ ನೀವʻ ಹೇಳೋಕ್. ನಿಮ್ಮ ಪಟ್ಟದ ಆನೆನ ತಲೆ ಕಡಿಯೋಕʻ. ಆದರ ರಕ್ತನ ತಕೊಂಡೋಗಿ ನಿಮ್ಮ ರಾಣಿನ ತಲೆಗೆ ಹಾಕಿರೆ ನಿಮ್ಮ ರಾಣಿನ ಪ್ರಾಣ ನೀವʻಗೆ ಸಿಕ್ಕುದ್. ಹಾಂಗೆಂತ ಹೇಳಿ ನೀವ್ ಹೇಳೊಕʻಂತ ಈ ಒಂದ್ ಸೇರʻ ಹಣನ ವೈದ್ಯಗಾರಂಗೆ ಕೊಟ್ಟ್ ಈ ರಾಣಿ ಬಾತ್.

ಮಾರನೆ ದಿನ ಈ ರಾಣಿಗೆ ಪುನಾಃ ತಲೆ ಬೇನೆ. ರಾಣಿ ಹೇಳ್ತ್. ವೈದ್ಯಗಾರ ನಲ್ಲಿಗೆ ಹೋಕಾಗಿತ್ತ್. ಏನಾರʻ ತರೋಕಾಗಿತ್ತ್. ನಂಗೆ ಸುಖ ಇಲ್ಲೆ. ತಲೆ ಬೇನೆಂತ ಹೇಳ್ತ್. ಆ ರಾಜ ಪುನಾಃ ಅದೇ ವೈದ್ಯಗಾರನ ಹಕ್ಕಲೆ ಹೋದೆ. ಹೋಗಿ ಕೇಳಿಕೆ ಆಕನ ಇದೇ ಮಾತʻನ ಅವʻ ಹೇಳ್ದೊ. ನಿಮ್ಮ ಪಟ್ಟದ ಆನೆನ ತಲೆ ಕಡ್ದ್ʻ ಆದರ ರಕ್ತನ ನಿಮ್ಮ ರಾಣಿನ ಹಣೆಗೆ ಹಾಕದಿದ್ದರೆ ನೀವ್‌ಗೆ ಪ್ರಾಣ ಸಿಕ್ಕಿಕಿಲ್ಲೆ. ಹಾಂಗೆಂತ ಹೇಳಿ ವೈದ್ಯಗಾರ ಹೇಳ್ತ್. ರಾಜ ಬಂದ್ ಹೇಳ್ತ್. ನಾಳೆ ನಮ್ಮ ಪಟ್ಟದ ಆನೆನ ತಲೆ ಕಡಿಯೋದʻ. ತಲೆ ಕಡ್ದ್ ರಕ್ತ ತಂದ್ ರಾಣಿನ ಹಣೆಗೆ ಬೊಟ್ಟ್ ಹಾಕಿರೆ ಮಾತ್ರ ನಮ್ಮ ರಾಣಿನ ಪ್ರಾಣ ಸಿಕ್ಕುದ್. ಅಲ್ಲದಿದ್ದರೆ ಸಿಕ್ಕಿ ಕಿಲ್ಲೆಂತ. ಆ ದಿನ ಪಟ್ಟದ ಆನೆಗೆ ಸ್ವಪ್ನ ಬಿತ್ತ್. ನಾಳೆ ನನ್ನ ಕೊಂದವೆ. ಈ ಆನೆ ಎರಡ್ ಮಕ್ಕಳ ಕರ್ಕೊಂಡೋಗಿದ್ ಗದ್ದೆ ಪುಣಿಲಿ ಕಪ್ಪೆಗಳ ವಾಸ ಬುಟ್ಟತ್. ಇಷ್ಟರವರೆಗೆ ನಾ ಸಾಕಣೆ ಮಾಡಿಕಂಡೆ. ಇನ್ನ್ ಈ ಎರಡ್ ಮಕ್ಕಳ ನೀವ್ ಸಾಕಣೆ ಮಾಡೊಕʻಂತ ಹೇಳಿದ್ ಕಪ್ಪೆಗಳ ವಶ ಕೊಟ್ಟ್‌ದ್ ಆನೆ ಗಟ್ಟ ಹತ್ತಿ ಹೋತ್.

ಮಾರನೆ ದಿನ ತಲೆ ಕಡಿಯುಕೆ ನೋಡಿಕನ ಆನೆ ಉಟ್ಟ. ಆನೆ ಇಲ್ಲೆ. ಹೀಂಗೇ ಮತ್ತೂ ಸಮಯ ಕಳ್ತ್. ಸಮಯಂ ಕಳ್ದ್ ನೋಡ್ರೆ ಮಕ್ಕ ಗದ್ದೆ ಪುಣಿಲಿ ಆಟ ಆಡ್ತಾ ಒಳೊ. ಪುನಃ ಒಂದ್ ರಾಣಿ ಬಂದʻ ಹೇಳ್ತ್. ಮಕ್ಕ ಗದ್ದೆಲಿ ಆಟ ಆಡ್ತಾ ಒಳೊ. ಮಕ್ಕಳಿಗೆ ಏನೂ ಆತ್ಲೆ. ಆನೆನೂ ಇಲ್ಲೆ. ನಮ್ಮ ಕಬಿಲೆ ಹಸುನೂ ಇಲ್ಲೆ. ಮಕ್ಕ ಹುಶಾರ್ ಒಳೊ. ಇನ್ನ್ ನಾಳೆ ನಾಳ್ದ್‌ಲಿ ಇಲ್ಲಿಗೆ ನಡ್ಕಂಡʻ ಬಾವೊ. ಹಾಂಗಾರೆ ಏನʻ ಮಾಡುದ್. ಯಾರʻ ಸಾಂಕುದʻ. ಅಂದರೆ ಕಪ್ಪೆಗ ಈಗ ತಿಂಡಿ ಎಲ್ಲ ಕೊಟ್ಟ್, ಹಾಲʻ ಹಣ್ಣ್ ಎಲ್ಲ ಕೊಟ್ಟ್ ಮಕ್ಕಳ ಸಾಂಕಣ ಮಾಡ್ದ್, ಹಾಂಗೆಂತ ರಾಣಿಗ ಮಾತಾಡ್ದೊ. ಅದರ್ಲಿ ಮೂರ್ನೆ ರಾಣಿ ಹೇಳ್ತ್. ಇಂದʻ ನಾ ಒಂದʻ ಸೇರʻ ಹಣ ತಕಂಡʻ ವೈದ್ಯಗಾರನಲ್ಲಿಗೆ ಹೋಣೆ. ಹೋಗಿದʻ ಆ ವೈದ್ಯಗಾರನೊಟ್ಟಿಗೆ ಹೇಳಿ ಬನ್ನೆ. ನಾಳೆ ನಾ ತಲೆಬೇನೆ, ತಲೆ ಬೇನೆಂತ ಮಲಗಿನೆ. ಮತ್ತೆ ನಮ್ಮ ರಾಜರ ನಾವʻ ಕಳ್ಸಕ್ಕ್ ಅಂತ ಮೂರ್ನೆ ರಾಣಿ ಹೇಳ್ತ್.

ಮೂರ್ನೆ ದಿನ ಆ ರಾಣಿ ಒಂದ್ ಸೇರʻ ಹಣ ತಕ್ಕೊಂಡʻ ಅದೇ ವೈದ್ಯಗಾರ ನಲ್ಲಿಗೆ ಹೋತʻ. ಹೋಗಿ, ನಮ್ಮ ರಾಜರʻ ಬಂದರೆ ನಿಮ್ಮ ಗದ್ದೆಲಿ ಒಂದʻ ಸಾವಿರ

ಕಪ್ಪೆಗಳ್ ಒಳೊ. ಆ ಕಪ್ಪೆಗಳ ಎಲ್ಲ ಕೊಲ್ಲೊಕ್ ಕೊಲ್ಲದಿದ್ದರೆ ಆಕಿಲ್ಲೆ. ಅವರ್ದಿಂಗ ಉಪದ್ರ ದೋಷ ಅದ್. ಹಾಂಗೆಂತ ಹೇಳಿ ಹೇಳೋಕ್. ಹಾಂಗೆಂತ ವೈದ್ಯಗಾರ ಹೇಳ್ತ್. ಪೂರ್ನೆ ದಿನ ರಾಜ ಹೋಕೆ ಆಕನ ವೈದ್ಯಗಾರ ಇದೇ ಮಾತ್ ಹೇಳ್ತ್. ರಾಜ ಬಂದ್ ಹೇಳ್ತ್. ನಾಳೆ ನಮ್ಮ ಗದ್ದೆಲಿದ್ದ ಕಪ್ಪೆಗಳ ಎಲ್ಲ ಕೊಲ್ಲೊಕ್. ಕೊಲ್ಲದಿದ್ದರೆ ಆಕಿಲ್ಲೆ. ಅವರಿಂದ ಆಗಿ ನಮ್ಮ ರಾಣಿಗ ಹುಷಾರಿಲ್ಲೆ. ಯಾಗೋಳ್ ಹುಷಾರಿ ಲ್ಲೆಂತ ಹೇಂಗೆ ಕೊಲ್ಲುದ್. ವಿಷ ಏನಾರ್ ಬುಟ್ಟ್‌ದ್ ಕೊಲ್ಲ್‌ದೂಂತ ಮಾತಾಡ್ದೊ. ಆದಿನ ಕಪ್ಪೆಗಳಿಗೆ ಸ್ವಪ್ನನೂ ಬೀತ್. ನಾಳೆ ನಮ್ಮ ಎಲ್ಲ ಕೊಂದವೆ. ಇಸ್‌ದ್‌ಲೆ. ಹಾಗೆಂತ ಹೇಳಿ ರಾತೊರಾತ್ರೆ ಆಚಾರಿನಲ್ಲಿಗೆ ಹೋಗಿದ್ ಒಂದ್ ಪೆಟ್ಟಿಗೆ ಮಾಡ್ಸಿ ತಕಂಡ್ ಬಂದ್ ಮಕ್ಕಳ ಆ ಪೆಟ್ಟಿಗೆಲಿ ಮಲಗಿಸಿ ಹಳ್ಳಕೆ ಹಾಕಿ ಬುಟ್ಟೊ. ಹಳ್ಳಕೆ ಹಾಕಿ ದೂಡಿ ಬುಟ್ಟೊ, ಎಲ್ಲಿ ಬೇಕರೆ ಹೋಗಲಿ. ಹೇಂಗೊ ಆಗಲಿ. ನಮ್ಮಂದ ಇನ್ನ್ ಸಾಧ್ಯ ಇಲ್ಲೆ. ನಮ್ಮ ಜೀವನೇ ಇನ್ನ್ ಒಳಿಯುದ್ದಿಲ್ಲೆಂತ ದೂಡಿ ಬುಟ್ಟೊ. ಹೀಂಗೆ ಆತ್. ಈ ಪೆಟ್ಟಿಗೆ ಹೋಗಿ ಹೋಗಿ ಹೋಗಿ ಹಳ್ಳಲಿ ಹೋಗಿ ಒಂದ್ ಕರೇಲಿ ಅಂಡಿ ನಿಂತತ್.

ಅಂಡಿ ನಿಂತ್‌ದ್ ಅಲ್ಲಿಗೆ ಯಾಗೋಳ್ ಒಂದ್ ಋಷಿ ಮಿಯಕ್ಕೆ ಬಂದದೆ. ಆ ಋಷಿ ಮಿದ್ ಬಂದ್‌ದಾಕನ ಒಂದ್ ಪೆಟ್ಟಿಗೆ ನಿಂತ್‌ಕೊಂಡ್‌ಟ್ಟ್. ಇಷ್ಟ್‌ದಿನ ಇಲ್ಲದ ಈ ಪೆಟ್ಟಿಗೆ ನಾ ಯಾಗೋಳ್ ಇಲ್ಲಿ ಬಂದ್ ಮಿದ್ ಹೋತ್ತಿದ್ದೆ. ಇಲ್ಲಿ ಪೆಟ್ಟಿಗೆ ಇತ್ತ್‌ಲೆ. ಇಂದ್ ಪೆಟ್ಟಿಗೆ ಉಟ್ಟಲ್ಲಂತ ಹೇಳಿ ಈ ಋಷಿ ಆದರ ತಕ್ತನ್. ತಕಂಡ್ ಮನೆಗೆ ಹೋತ್. ಮನೆಲಿ ಒಡ್ದ್ ನೋಡ್ತ್. ಒಡ್ದ್ ನೋಡ್ರೆ ಒಂದ್ ಹೆಣ್ಣ್ ಒಂದ್ ಗಂಡ್ ಕೂಸ್‌ಗ ಒಳೊ. ಮಕ್ಕಳ ಪೊರ್ಲ್ ಋಷಿ ಸಾಂಕಿತ್. ಸಾಂಕಿ ಸಾಂಕಿ ಸಾಂಕಿ ಶಾಲೆಗೆ ಹೋವ ಪ್ರಾಯ ಬಾತ್. ಶಾಲೆಗೆ ಕಲ್ಸಿ ಬೇಕಾದ ವಿದ್ಯೆ ಬುದ್ಧಿ ಕಲ್ಸಿ ಮಕ್ಕ ದೊಡ್ಡವ್ ಆದೊ. ದೊಡ್ಡವ್ ಆದಮೇಲೆ ಮಕ್ಕ ಹೇಳ್ವೆ ನಾವ್ ಮದ್ವೆಗೆ ಹೋದವೆ, ನಾವ್ ಊರ್ ತಿರ್‌ಗಿಕೆ ಹೋದವೆ, ಹಾಂಗೆಂತ ಎಲ್ಲ ಈ ಋಷಿ ನೊಟ್ಟಿಗೆ ಹೇಳ್ವೆ. ನೀವ್ ಎಲ್ಲಿಗೂ ಬೇಕಾರ್ ಹೋಗಿ ಮಕ್ಕಳೆ. ನಾ ಸಂಸಾರ ಸಾಗರ ಇಲ್ಲದಂವ. ಬೇಕಾದ ಹಣ ಉಟ್ಟ್ ತಕಂಡ್ ನೀವ್ ಹೋಗಿ, ಹಾಂಗೆಂತ ಈ ಋಷಿ ಅವರ ಮೊದ್‌ವೆಗೆ ಜಾತ್ರೆಗೆ ಎಲ್ಲ ಕಲ್ಸಿ ವಾಪಾಸ್ ಮನೆಗೆ ಬಾತಿದ್ದೊ.

ಒಂದ್ ದಿನ ಋಷಿನೊಟ್ಟಿಗೆ ಮಕ್ಕ ಕೇಳ್ದೊ. ನಾವ್ ನಮ್ಮ ಮನೆಗೆ ಹೋದವೆಂತ. ನೀವ್‌ಗೆ ಎಲ್ಲಿ ಮಕ್ಕಳೆ ಮನೆ. ನೀವ್ ಯಾವ ಮನೆಗೆ ಹೋದ್. ನೀವ್‌ಗೆ ಮನೆ ಎಲ್ಲಿಂತ ಹೇಳಿ ಗೊತ್ತುಟ್ಟ್. ನೀವ್ ಪೆಟ್ಟಿಗೆ ಒಳಗಿದ್ದ ಮಕ್ಕ. ನಿಮ್ಮ ತೊಟ್ಟಿಲ್‌ಲಿ ಹಾಕಿ ನಾ ಇಷ್ಟ್ ದೊಡ್ಡಿತ್ ಮಾಡಿದ್. ನೀವ್‌ಗೆ ಎಲ್ಲಿ ಮನೆ ಹೇಳಿ. ಅಲ್ಲ ನಾವ್ ಎಲ್ಲಾದರೂ ಹೋದವೆ. ಎಲ್ಲಾದರ್ ಹೋಗಿ ನೀವ್ ಬೊದ್‌ಕ್‌ವರಿಯಾ.

ನಿಮ್ಮ ಒಂದ್ ವರ ಸಿಕ್ಕಿರೆ ನಾವ್ ಬೊದ್‌ಕ್‌ವೊ. ನೀವ್ ಒಂದ್ ವರ ಕೊಡೊಕ್. ಆತ್ ನೀವ್ ಹೋಗಿಂತ ಹೇಳಿ ಪಾರನೆ ದಿನ ಒಂದ್ ಪೆಟ್ಟಿಗೆ ಹಣವ್ ಒಂದ್ ಕಂಬಳಿ, ಒಂದ್ ಕೋಲ್ ಕೊಟ್ಟ್ ಅವರ ಕಳ್ಸಿದೊ. ಋಷಿ. ಕಳ್ಸಿ ಹೊರ್ಟ್ ಹೋಕೆ ಆಕನ ಹೇಳೊಕ್. ನಮ್ಮ ಈ ಋಷಿನ ಮನೆ ಹೊತ್ತಿ ಬಸ್ಮ ಆಗಲಿಂತ ಹೇಳಿ ಹೋಕ್ಕ ಮಕ್ಕಳೆ. ನಂಗೆ ಬೇಡ. ಹಂಗೆಂತ ಹೇಳಿ ಈ ಋಷಿ ಮಕ್ಕಳೊಟ್ಟಿಗೆ ಹೇಳ್ತ್. ಈ ಮಕ್ಕಳ್ ಒಂದ್ ಪೆಟ್ಟಿಗೆ ಹಣವೂ ಒಂದ್ ಕಂಬ್‌ಳಿ, ಒಂದ್ ಕೋಲ್ ಈ ಮೂರರ ತಕ್‌ಂಡ್ ಅಂಗಳಕ್ಕಿಳ್‌ದ್ ಹೇಳ್ದೊ. ನಮ್ಮ ಋಷಿನ ಮನೆ ಹೊತ್ತಿ ಬಸ್ಮ ಆಕ್ಕ. ನಾವ್ ಹೋಪವೆ ಹಾಂಗೆಂತ ಹೇಳಿ ಮಕ್ಕ ಹೋದೊ.

ಹೋಗಿ ಹೋಗಿ ಹೋಗಿ ಹೋಗಿ ಒಂದಾನೊಂದ್ ಊರಿಗೆ ಎತ್ತಿಕನ ಕತ್ತಲಿ ಆತ್. ಒಂದ್ ಅಡ್ಕ. ಏನ್ ಮಾಡ್ದ್ ಇನ್ನ್. ಇಲ್ಲೆ ಮಲ್ಗೊಂಬಂತ ಹೇಳ್ದೊ. ಆ ಕಂಬಳಿನ ಹಾಸಿದೊ. ಮಲ್ಗಿದೊ. ಊಟ ಮಾಡಿಕೆ ಏನೂ ಇಲ್ಲೆ ಅವರ ಹಕ್ಕಲಿ. ಮಲ್ಗಿದ್ ರಾತ್ರಿ ಎಚ್ಚರಾಗಿ ನೋಡ್ರೆ ಕಂಬ್ಳಿ ಹಾಸಿದ ಮಕ್ಕ ಒಂದ್ ಒಳ್ಳೆ ಅರಮನೆಲಿ ಒಳೊ. ಎಲ್ಲಿ ಕಣ್ಣ್ ಬುಟ್ಟರ್ ಪೂರಾ ಫಳ ಫಳ ಚಿನ್ನವೇ. ಅಂತಾ ಅರಮನೆ ಆಗುಟ್ಟ್. ಬೆಳಗಾತ್. ನೋಡ್ರೆ ದನಗ ಕರ್ದವೆ. ಮನೆ ಸುತ್ತ ಜನ ಬಂದವೆ. ನಾಯಿ ಒಂದ್ ಕಡ ಮರಿಯ್‌ತ್ತಾ ಉಟ್ಟ್. ಇದ್ ಏನ್ ಹಾಂಗೆಂತ. ಇವ್ ಹೋಗಿ ಹೋಗಿ ಎತ್ತಿದ್ ಈ ರಾಜನ ಮನೆ ಬಾಗಿಲ್‌ಗೆ. ರಾಜ ಅಪ್ಪ ಅಲ್ಲ ಮುಂದೆ. ಅಂವನ ಮನೇಬಾಗಿಲಿಗೆ ಎತ್ತಿದ್. ಆ ರಾಜ ಎದ್ದ್‌ದ್ ನೋಡಿಕನ ತುಂಬ ಪ್ರಕಾಶ ಹೊಡ್ದವೆ. ಬಿಸಿಲಿನಾಂಗೆ. ಇದೇನಪ್ಪ ಇಷ್ಟ್ ಪ್ರಕಾಶ ಇಂದ್ ಹಾಂಗೆಂತ ಹೇಳಿ ನೋಡ್ರೆ ದೊಡ್ಡ ಒಂದ್ ಅರಮನೆ ಆಗಿ ಉಟ್ಟ್.

ನಿನ್ನೆ ಕತ್ತಲೆಗೆ ಮುಟ್ಟ ಯಾವುದೊಂದ್ ಇತ್ಲೆ. ಇಂದ್ ಒಂದ್ ಅರಮನೆ ಆಗಿ ಎದ್ದುಟ್ಟಲೆ, ಇದ್ ಯಾರ್ದ್‌ಂತ ರಾಜ ಸೀದಾ ನೋಡಿಕೆ ಬಾತ್. ನೋಡಿಕೆ ಬಂದರೂ ರಾಜಂಗೆ ಮನೆ ಹತ್ತಿಕೆ ಧೈರ ಬಾದ್ಲೆ, ಮಾತಾಡಿಕೆ ಮತ್ತೂ ಧೈರ ಬಾದ್‌ಲ್ಲೆ. ನೋಡಿ ಸೀದ ಹೋತ್. ಹೋಗಿದ್ ಮನೆಲಿದ್ದ ಕೆಲ್ಸದವರ ಮಕ್ಕಳ ಕಳ್ಸಿತ್. ನೀವ್ ಹೋಗಿ ಮಕ್ಕಳೇ ಅವರೊಟ್ಟಿಗೆ ಮಾತಾಡಿ. ಒಂದ್ ಗಂಡ್ ಒಂದ್ ಹೆಣ್ಣ್ ಎರಡ್ ಮಕ್ಕ ಅಲ್ಲಿ ಒಳೊ. ಅವರೊಟ್ಟಿಗೆ ನೀವ್ ಮಾತಾಡಿ. ನಿಮ್ಮ ಊರ್ ಯಾವ್‌ದ್. ನಿಮ್ಮ ಸಮುಚಾರ ಏನ್ ಹೇಂಗೆಲ್ಲ ಮಾತಾಡಿಂತ. ಅವ್ ಈ ಗೂಡೆನೊಟ್ಟಿಗೆಲ್ಲ ಮಾತಾಡ್ದೊ. ನೀವ್ ಯಾಕೆ ಬಂದದ್. ನೀವ್ ಎಲ್ಲಿನವ್, ನಿಮ್ಮ ಸಮುಚಾರ ಏನ್ ಹಾಂಗೆಂತ. ಇಲ್ಲೆ ನಾವ್ ನಿನ್ನೆ ಬಂದದ್. ಆಗ ಮನೆ ಮಾಡ್ದ್ ಯಾಗ. ಮನೆ ನಿನ್ನೆ ರಾತ್ರೆ ಮಾಡ್ದ್. ಹಾಂಗೆಂತ ಆ ಗೂಡೆ ಹೇಳ್ತ್. ಅಲ್ಲಿಂದ ಅದ್ ಪುನಾ ಮನೆಗೆ ಹೋತ್. ಪುನ ಮನೆಗೆ ಹೋಗಿದ್ ಪುನ ಅಲ್ಲಿ ಅದೇ ಮಾತ್ ಹೇಳ್ತ್.

ಮಾರನೆ ದಿನ ಮತ್ತೊಂದ್ ಹೆಂಗ್ಸ್ ಬಾತ್. ಬಂದ್ ಕೇಳ್ತ್. ನಿಮ್ಮ ಸಮಚಾರ ಏನ್. ನೀವ್ ಯಾಗ ಬಂದದ್. ಎಲ್ಲಿ ನಿಮ್ಮ ಮನೆಂತ ಎಲ್ಲಾ ಕೇಳ್ದಿ. ಕೇಳಿದ್ ಆಕನ ನಾವ್ ಹೀಂಗೆ ತಿರ್‌ಗಾಡ್ತಾ ಬಂದದಪ್ಪಾ. ಬೇಲಿಕರೆಲಿ. ನಾವ್ ಇಲ್ಲಿ ಒಂದ್ ಮನೆ ಮಾಡಿ ಕುದ್ದದ್‌ಂತ. ಆಗ ಆ ಹುಡುಗ ಯಾರ್. ಅಂವ ನನ್ನ ಅಣ್ಣ. ಆಗ ನೀವ್ ಇಬ್ಬರೇ ಇರ್ದ್ರೊ. ನಾವ್ ಇಬ್ಬರೇ ಇರ್ದ್. ಅಣ್ಣ ಎಲ್ಲಿಗೆ ಹೋಗೊಳೊ. ಅಣ್ಣ ಶಿಕಾರಿಗೆ ಹೋಗೊಳೊ. ನೀ ಅಣ್ಣಾನೊಟ್ಟಿಗೆ ಮದುವೆ ಆಕ್ಕೆ ಹೇಳೊಕ್. ಆಗ ನಿಂಗೆ ಅತ್ತಿಗೆಗೆ ಎಲ್ಲ ಒಟ್ಟಿಗೆ ಇರೊಕ್. ನಿನ್ನ ಒಬ್ಬನೇ ಬುಟ್ಟ್ ಹೋದಲ್ಲ ಅಣ್ಣ ಹಾಗೆಂತ ಹೇಳಿ ಕೊಟ್ಟತ್. ಆತ್ ನಾ ಹೇಳ್ನಿಂತ ಹೇಳ್ತ್. ಅಣ್ಣ ಬಾಕನ ಇದ್ ಹೇಳ್ತ್. ಆಚೆ ಮನೆಂದ ಬಂದಿದ್ರೊ ಯಾರೊ. ಆ ಬಂದವರ್ ನನ್ನೊಟ್ಟಿಗೆ ಎಲ್ಲ ಹೇಳ್ದ್ರೊಂತ ಹೇಳಿ ಆಕನ ಅವ್ ಹೀಂಗೆ ಹೇಳ್ದ್ರೊ, ನೀ ಅಣ್ಣನೊಟ್ಟಿಗೆ ಮದ್ವೆ ಆಕೆ ಹೇಳೊಕ್. ಅಣ್ಣನೊಟ್ಟಿಗೆ ಒಬ್ಬನೇ ಇರ್ದು ಸರಿಯಲ್ಲ. ಮತ್ತೆ ಅತ್ತಿಗೆಗೂ ನಿಂಗೂ ಇರಿಕೆ ಒಳ್ಳೆದ್‌ಂತ ಆಚೆ ಮನೆಯವ್ ಹೇಳ್ದ್ರೊಂತ. ಆದ್‌ಂತ ಅಂವ ಒಪ್ಪಿಕನ್ತ್.

ಮಾರನೆ ದಿನ ಮತ್ತೊಂದ್ ಹೆಂಗ್‌ಸ್ ಬಾತ್. ಬಾಕೆ ಆಕನ ಈ ಹುಡುಗ ಇಲ್ಲೆ. ಇಂವ ಶಿಕಾರಿಗೆ ಹೋಗ್‌ಟ್ಟ್. ಬಂದ್ ಕೇಳ್ತ್. ಅಣ್ಣ ಎಲ್ಲಿಗೆ ಹೋಗ್‌ಟ್ಟ್‌ಂತ. ಅಣ್ಣ ಶಿಕಾರಿಗೆ ಹೋಗ್‌ಟ್. ಮತ್ತೆ ಮರ್ದಾಳ ಗುಡ್ಡೆಗೆ ಹೋಗಿದ್ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಹೇಳಿ ಕರ್ದ್ರೆ ಅಲ್ಲಿ ಹೆಣ್ಣ್ ಬಂದದೆ. ಪೊರ್ಲ್ನ ಸುಂದರಿ ಗೂಡೆ. ಅದರ ಕರ್ಕೊಂಡ್ ಬರೋಕ್. ನೀವ್ ಹೀಂಗೆ ಇರ್ದ್ ಸರಿಯಲ್ಲಂತ ಆ ಹೆಂಗ್ಸ್ ಹೇಳಿ ಹೋತ್. ಇದ್ ಕತ್ತಲೆ ಆಕನ ಅಣ್ಣ ಬಂದ ಕೂಡ್ಲೆ ಈ ಗೂಡೆ ಎಲ್ಲ ಹೇಳ್ತ್. ಮರ್ದಾಳ ಗುಡ್ಡೆಗೆ ಹೋಗಿ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಕರ್ದ್ರೆ ಹೆಣ್ಣ್ ಬಂದದೆಗಡ. ಅದರ ಕರ್ಕೊಂಡ್ ಬರೊಕಡ. ಪೊರ್ಲ್ನ ಹೆಣ್ಣ್ಗಡ. ಅವ್ ಹೇಳ್ದ್ರೊ. ಆತ್‌ಂತ ಮಾರನೆ ದಿನ ಅಣ್ಣ ಹೊರಟ್ ಹೋತ್. ಹೋಗಿ ಮರ್ದಾಳ ಗುಡ್ಡೆಲಿ ನಿಂತ್ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತೇಲಿ ಕರ್ತ್. ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತ ಕರ್ದ್ರೆ ಅಲ್ಲಿ ಇರ್ದ್ ಯಾರ್. ಸೂರ್ಯ ದೇವರ ಮಗ. ಮೀಯಕೆ ಬಾದ್. ಮೀಯಕೆ ಬಾಕೆ ಆಕನ ಅದಕ್ಕೆ ಪಾರಕ್ಕೆ ಒಂದ್ ಜನ ಇದ್ದದೆ. ಆ ಜನಕ್ಕೆ ಫಿರಂಗಿ ಹಾಕಿದ್ ಕೇಳದಂವ. ಈ ಜನ ಹೋಗಿ ಮರ್ದಾಳ ಸಿಂಗಿ ಮರ್ದಾಳ ಸಿಂಗಿಂತೇಲಿ ಕರ್ದದ್ ಅಂವಂಗೆ ಕೇಳ್ತ್.

ಅಕ್ಕ ಯಾರೋ ನಿಮ್ಮ ಕರ್ದವೆಂತೆ ಹೇಳ್ತ್. ಎಲ್ಲಿ. ಎಲ್ಲಿಯೋ ದೂರಂದ ಕರೀದ್ ಕೇಳ್ದೆ. ಹಾಂಗೆ ಆದರೆ ನೀ ಈಗ ಹೊಂಕೊನ್ ನೋಡ. ಓಂತ ಹೊಂಕನತ್. ಬಾಂತ ಹೇಳ್ತ್. ನೀ ಬಾಂತ ಹೇಳ್ತ್. ಸೀದ ಇಂವ ಅಲ್ಲಿಗೆ ಹೋತ್. ಅಲ್ಲಿಗೆ ಹೋಗಿ ನೋಡ್ರೆ ಸೂರ್ಯ ದೇವರ ಮಗ. ಮತ್ತೆ ಅದಕ್ಕೆ

ಪಾರಕ್ಕೆ ಇದ್ದ ಜನ ಇಬ್ಬರೇ ಒಳದ‘. ಅವ‘ ಕೇಳ್ರೊ. ನೀ ಯಾಕೆ ಬಂದದ‘ ಎಲ್ಲಿಂದ ಹೊರ್ಟದ‘. ಅಲ್ಲ ನನ್ನೊಟ್ಟಿಗೆ ಹೇಳ್ರೊ. ಮರ್ದ್ಯಾಳ ಗುಡ್ಡೆಗೆ ಹೋಗಿ ಮರ್ದ್ಯಾಳ ಸಿಂಗಿ ಮರ್ದ್ಯಾಳ ಸಿಂಗಿಂತ ಕರ್ದರೆ ಹೆಣ್‘ಣ ಬಂದದೆ. ಮತ್ತೆ ಪೊರ್‘ಲ್ನ ಗೂಡೆ. ಅವರ ನೀ ಮರೆಯದೆ ತರೊಕ‘ಂತ. ನನ್ನ ಇಲ್ಲಿಗೆ ಕಳಿಸಿದ‘ ಹಾಂಗೆ ಬಂದದ‘ಂತ. ಹಾಂಗೆಂತಿದ್ದರೆ ನನ್ನೊಟ್ಟಿಗೆ ನಿಂಗೆ ಬಾಕೆ ಆದೊ. ನಾ ಸೂರ್ಯ ದೇವರ ಮಗ. ನಾ ನೂಲ‘ ಕೆಳಗೆ ಬುಟ್‘ಟ್ಕಂಡ‘ ಮೇಲೆ ಹೋನೆ. ನನ್ನ ಒಟ್ಟಿಗೆ ನೀ ಹತ್ತಿಕಂಡ‘ ಬರೋಕ‘. ನೂಲ‘ ಮೊಡ್ಚಿಕಂಡೇ ಬರೊಕ‘. ನೂಲ‘ ಬುಟ್‘ಟ್ಕೊಂಡ‘ ಬಾಕೆ ಬೊತ್‘ತ. ನೀ ಮೊಡ್ಚಿಕಂಡ‘ ನನ್ನೊಟ್ಟಿಗೆ ಬಾವೊಸಂತ ಕೇಳ್‘ತ. ಬಾವೆಂತ ಹೇಳ್‘ತ. ಹಾಂಗೆ ಅದ‘ ನೂಲ‘ ಬುಟ್‘ಟ್ಕಂಡ‘ ಮೇಲೆ ಹತ್ತಿತ‘.

ಇಂಪಂಗೆ ನೂಲ‘ ಮೊಡ್ಸಿಕೆ ಆತ್ಲೆ. ಇಂವ ನೂಲ‘ ಮೊಡ್ಸದೆ ಹತ್ತಿಕಂಡ‘ ಹೋತ‘. ಹೋಗಿ ಆಕನ ಪುನಃ ಕಳ್ಸಿತ‘. ನೀ ನೂಲ‘ ಮೊಡ್ಸಿಕಂಡ‘ ಬರೊಕ‘ಂತ ಪುನಃ ಬಾತ‘. ಇಂವ ಕೆಳಗೆ ಅಡಿಂವ ಬಂದ‘ ನೂಲ‘ ಮೊಡ್ಚಿಕೊಂಡ‘ ಹೋಕನ ಇಂವ ಅರ್ಧಂವ ಬಿದ್ದ‘ ಪೊಡಿ ಪೊಡಿ ಪೊಡಿಯಾತ‘. ಪುನಃ ಅದ‘ ಬಾತ‘. ಬಂದ‘ದ‘ ಆ ಪೊಡಿಯಾದರ ಪೂರ ಸೇರ್ಸಿದ‘. ಅಂಪಂಗೆ ಜೀವ ಕೂಡ್ಸಿ ಮುಂದೆನಂತೆ ಮಾಡಿದ‘ ಪುನಃ ನಾ ನೂಲ‘ ಬುಟ್‘ಟ್ಕಂಡ‘ ಹೋನೆ ನೀ ಬಾಂತ ಹೇಳಿ ಪುನಃ ಹೋತ‘. ಇಂವ ಹಿಂದಕ್ಕೆ ಆ ನೂಲ‘ಲೇ ಹೋತ‘. ಹೋಗಿ ಹೋಗಿ ಸೂರ್ಯದೇವರ ಮನೆಗೆ ಎತ್ತಿತ‘, ಅಲ್ಲಿಗೆ ಎತ್ತಿ ಆಕನ ಸೂರ್ಯದೇವರ‘ ಕೇಳ್ರೊ. ಇದ‘ ಯಾರ‘, ನೀ ಯಾಕಾಗಿ ಬಂದಂವ ಇಲ್ಲಿಗೆ. ಇಷ್ಟರವರೆಗೆ ನರಪೊನ್ನಂತೇಲಿ ನಮ್ಮಲ್ಲಿಗೆ ಬಂದವ‘ ಇಲ್ಲೆ. ನೀಯಾಕೆ ಬಂದದ‘ಂತ. ಆಗ ಹೇಳ್‘ತ ನಂಗೆ ಮೊದ್ವೆ ಆಕ‘. ಹಂಗೆ ನಾ ಹೆಣ್‘ಣ ಹುಡ‘ಕಿಕೊಂಡು ಬಂದದ‘. ಬಂದ‘ ಮರ್ದ್ಯಾಳ ಗುಡ್ಡೆಲಿ ಮರ್ದ್ಯಾಳ ಸಿಂಗಿ ಮರ್ದ್ಯಾಳ ಸಿಂಗಿಂತ ಕರಿಂತ ಹೆಂಗ್‘ಸ ನನ್ನ ಕಳ್ಸಿದ‘ಂತ. ನಾ ಹಾಂಗೆ ಬಂದೆ. ಬಂದ‘ ಆಕನ ಇವ‘ ಅಲ್ಲಿದ್ರೊ. ಅವರೊಟ್ಟಿಗೆ ನಾ ಬಂದೆ. ಆತ್‘ಂತ ಹೇಳ್ರೊ. ಅಂದೇ ಸೂರ್ಯ ದೇವರ‘ ಇವರ ಧರ್ಮ ಧಾರೆ ಮಾಡಿದೊ. ಇವರ ನೂಲ್‘ಲಿ ಕೆಳಗೆ ಇಳ್ಸಿದ್ ಬುಟ್ರೊ. ನೀವ್ ನಿಮ್ಮ ಮನೆಗೆ ಹೋಗಿಂತ.

ಅದೇ ದಿನ ಅವ್ ಬಂದೊ. ಇವರ ಆರಮನೆಗೆ ಸೇರ್ರೊ. ಸೇರಿ ಅವ್ ಹೀಂಗೆ ಅವರ ಮನೆಲಿ ಪೊರ್‘ಲ್ಲಿ ಇದ್ರೊ. ಒಂದ್ ದಿನ ಈ ಅಬ್ಬೆಕ ಬಂದ್ ಏನ್ ಹೇಳಿದೊ ಗೊತ್‘ತ್ಟ. ನೀವ್ ಹೀಂಗೆಲ್ಲ ಇರ್ದು ಸರಿಯಲ್ಲ. ನೀವ್ ಎಲ್ಲವರ ಕರಿಸ್ಸಿ ಒಂದ್ ಸಮ್ರಾಜನ ಎಲ್ಲ ಮಾಡೋಕ್. ನೀವ್ ಹೀಂಗೆಲ್ಲ ಬಂದ‘ ನಮ್ಮ ಮನೆ ಬಾಗಿ ಲ್‘ಲಿ ಬಂದ‘ ಬಿದ್ದರೆ ಏನ್ ಸುಖ. ನೀವ್ ಸಮ್ರಾಜನೆನ ಮಾಡೊಕ್ ಹಾಂಗೆಂತ. ಸಮ್ರಾಜನೆ ಮಾಡಿಕೆಲ್ಲ ನಾವಿಗೆ ಗೊತ್ತುಟ್ಟ್. ನಾವ್ ಸಮ್ರಾಜನೆಗೆ ನಿಮ್ಮ ಕರ್ಸಿಕನ ನೀವ್ ಬೊನ್ನಿ. ನೀವ್ ನಾವ್ಗೆ ಏನೂ ಹೇಳೊಕ್‘ಂತ ಇಲ್ಲೆ ಹಾಗೆಂತ ಹೇಳ್ರೊ.

ಮತ್ತೆ ಕೆಲವ್ ದಿನ ಕಳ್ದ್ ಸಮ್ರುಜನೆ ತಯಾರ್ಸಿದೊ. ಸಮ್ರುಜನೆ ತಯಾರ್ಸಿತ್ ಇಡೀ ಊರಿಗೆ ಓಲೆ ಕೊಡ್‌ಪವ್‌ಕ್ಕೆ ಓಲೆ, ಬಾಯಿ ಮಾತಿನವ್‌ಕ್ಕೆ ಬಾಯಿ ಮಾತ್‌ಲಿ ಹೇಳಿ ಜನಂಗಳ ಎಲ್ಲ ಕಲ್ಸಿ, ಬೇಕಾದ ಅನ್ನ ಅಡಿಗೆ ಎಲ್ಲ ತಯಾರ್ಸಿ, ಸಭೆ ಸೇರಿಕಂಡ್ ಇರ್‌ಕನ ಈ ರಾಜರಿಗೆ ಗೊತ್ತ್‌ಟ್ಟ. ಈ ರಾಜರ ಕೆಲ್ಸದವ್‌ಕ್ಕೆ ಗೊತ್ತ್‌ಟ್ಟ್. ನೀವ್ ಎಲ್ಲವ್ ಆ ಮನೆಂದ ಬರೊಕ್, ಯಾರ್ ಬಾಕಿ ಆಕ್ಕೆ ಬೊತ್ತ್‌ಂತ. ಎಲ್ಲವರ ಮನೆಗೆ ಕರ್ದ್‌ದ್ ಸೇರ್ಸಿತ್.

ಸೇರ್ಸಿ ಎಲ್ಲ ಜನರ್ ಇದ್ದಾಂಗೆ ಏಳ್ ಸೀರೆನ ಹೀಂಗೆ ಅಡ್ಡ ತೆರೆಕಟ್ಟಿತ್. ಏಳ್ ಸೀರೆನ ಆಚೆ ಪಕ್ಕ ಆ ಅಣ್ಣನೂ ತಂಗೆನೂ ಇಬ್ಬರೂ ನಿಂತೋ. ಏಳ್ ಸೀರೆನ ಈಚೆ ಪಕ್ಕ ಈ ಆರ್ ಜನ ಹೆಣ್ಮಕ್ಕಳ ನಿಲ್ಸಿತ್. ಆರಾಜನ ಕಡೆ. ಈ ಆರ್ ಜನ ಹೆಣ್ಣ್ ಮಕ್ಕ ನಿಂತ್‌ದ್. ಇನ್ನೊಂದ್ ಹೆಣ್ಣ್ ಆಕಲ್ಲ. ನಿಮ್ಮಲ್ಲಿಂದಂತ ಹೈದ ಕೇಳ್ತ್. ಆ ಕುದ್‌ರೆ ಲಡ್ಡಿ ಎತ್ತ್‌ಪ ಗಿರಾಕಿ ಒಂದ್ ಉಟ್ಟಲ್ಲಂತ. ಅದ್ ಬಾತ್ಲೆ, ಅದ್ ಏಕೆ ಬಾತ್ಲೆ. ಅದ್ ಮನೆಲಿ ಉಟ್ಟ್. ಇಲ್ಲೆ ಅದ್ ಕೂಡ ಬರೊಕ್ ಹಾಗೆಂತ ಅದರ ಕರ್ಸಿದೊ. ಈಗಲೇ ಅದ್ ಬರೊಕ್‌ಂತ. ಅದ್ ಸಹ ಬತ್. ಅದ್ ಬಂದ್ ಈ ಏಳ್ ಸೀರೆಗಳ ಆಚೆ ಪಕ್ಕ ಈ ಆರ್ ಅಬ್ಬೆಗಳೊಟ್ಟಿಗೆ ಸೇರ್ಸಿ, ಅವರ ಸಾಲಿಗೆ ನಿಲ್ಸಿದೊ.

ಆಗ ಅಲ್ಲಿ ಏಳ್ ಹೆಣ್ಣ್‌ಮಕ್ಕ ಆದ ಅಲ್ಲ. ಈ ಎರಡ್ ಮಕ್ಕ ಈಚೆ. ಅಲ್ಲಿಂದ ಈ ಕುದುರೆ ಲಡ್ಡಿ ಎತ್ತ್‌ಪ ಹೆಂಗ್ಸ್ ಉಟ್ಟಲ್ಲ ಅದರ ಮೊಲೆ ಹಾಲ್ ಹಿರ್ದ್‌ದ್ ಆ ಎರಡ್ ಮಕ್ಕಳ ಬಾಯಿಗೆ ಅದ್ ಹೋಗಿ ಸೇರ್ದ್. ಮೂರ್ ಮೂರ್ ಸರ್ತಿ ಮೊಲೆ ಹಾಲ್ ಹಿರ್ದ್‌ದ್ ಆ ಮಕ್ಕಳ ಬಾಯಿಗೆ ಹೋದೆ. ಹೋಗಿ ಆಕನ ಅಕೇರಿಗೆ ಕೇಳ್ತ್ ಇಂಪ ಆ ರಾಜನೊಟ್ಟಿಗೆ ಇದ್ ಏನ್ ಹೀಂಗೆ ಆದ್. ಈ ಏಳ್ ಸೀರೆ ದಾಟಿದ್ ಅವರ ಮೊಲೆ ಹಾಲ್ ಈ ಮಕ್ಕಳ ಬಾಯಿಗೆ ಸೇರೋಕಾದರೆ, ಇದ್ ಏನ್ ಕಾರಣ ನಿಂಗೆ ಗೊತ್ತ್‌ಂಟ್ಟಂತ. ನಂಗೆ ಗೊತ್ತ್‌ಲ್ಲೆ. ಈ ಕುದ್‌ರೆ ಲಡ್ಡಿ ಎತ್ತ್‌ಪ ಗಿರಾಕಿ ಉಟ್ಟಲ್ಲೆ. ಅದೇ ನಮ್ಮ ಅಪ್ಪ.

ನಮ್ಮ ಅಪ್ಪನ ಅಂದ್ ನಾವ್ ಹುಟ್ಟಿದ ಕೂಡ್ಲೆ ಅಪ್ಪನ ಕಣ್ಣಿಗೆ ಸೀರೆ ಕಟ್ಟಿದ್ ಅಪ್ಪನ ಮಕ್ಕ ಓಂತಿ ಹಾವ್, ಪೊಳ್ಳಿ, ಕೊಂಬಚೋಳ್‌ಂತ ಮಾಡಿದ್, ನಮ್ಮ ತಕೊಂಡ್ ಗೊಬ್ಬರ ಗುಡ್ಡೆಲಿ ಹುಗ್‌ದ್, ಗೊಬ್ಬರ ಗುಡ್ಡೆಂದ ಆನೆಕಾಲ್‌ಗೆ. ಆನೆ ಕಾಲಡಿಂದ ಕಪ್ಪೆಗಳ ಗದ್ದೆಪುಣಿಗೆ, ಕಪ್ಪೆಗ ನಮ್ಮ ಪೆಟ್ಟಿಗೆಲಿ ಹಾಕಿ ಹಳ್ಳಲಿ ಬುಟ್ಟದ್. ಹಳ್ಳಂದ ನಮ್ಮ ತಕೊಂಡೋಗಿ ಒಂದ್ ಋಷಿ ಸಾಂಕಿದ್. ಇಲ್ಲಿ ನಡ್ದಂತೆ ಎಲ್ಲ ನಾವ್‌ಗೆ ಋಷಿ ಹೇಳಿಕೊಟ್ಟ್ ನಮ್ಮ ಕಳ್ಸಿದ್. ನಾವ್ ಬೇಕಾದ ಐಶ್ವರ್ಯ, ಐಭಾಗ್ಯ ಸಿಕ್ಕಿಕೆ ಋಷಿ ಕಾರಣ. ಇದ್ ನೀವ್‌ಗೆ ಗೊತ್ತ್‌ಂಟಾಂತ ಕೇಳ್ತ್ ರಾಜನೊಟ್ಟಿಗೆ.

ನಂಗೆ ಗೊತ್ತಿಲ್ಲೆ. ಹಾಂಗಾದರೆ ಇನ್ನ್ ಮಾಡ್ದ್ ಎಂತರ. ಇನ್ನ್ ಆ ಆರ್ ಅಬ್ಬೆ ಗಳನ್ನು ಕರ್‍ಕೊಂಡೋಗಿದ್ ನೀರಿಲ್ಲದಲ್ಲಿ ತಲೆ ಕಡಿಯೋಕ್. ಹಾಗೆಂತ ಹೇಳಿ ಆ ಆರ್ ಜನ ಅಬ್ಬೆಗಳನ್ನೂ ತಕೊಂಡೋಗಿ ನೀರಿಲ್ಲದಲ್ಲಿ ತಲೆಕಡ್ದ್, ಈ ಕುದ್‌ರೆ ಲಡ್ಡಿ ಎತ್ತಿಕೊಂಡಿದ್ದ ಹೆಂಗ್‌ಸ್, ಈ ಎರಡ್ ಮಕ್ಕೊ ಆ ರಾಜ ಪೊರ್‍ಲ್ಲಿ ಒಳೊ.

## ೧.೭ ಅಪ್ಸರೆಯು ಬಟ್ಟೆಕದ್ದು ಮದುವೆಯಾಗುವುದು

[(ಗೌಕಜಕ ೩೬) (ವರ್ಗ ೪೧೩)

ಒಂದ್ ಊರ್‍ಲ್ಲಿ ಒಂದ್ ರಾಜ. ಆ ರಾಜಂಗೆ ನಾಲ್ಕ್ ಗಂಡ್ ಮಕ್ಕ. ಈ ನಾಲ್ಕ್ ಗಂಡ್ ಮಕ್ಕಳ ಶಾಲೆಗೆ ಕಳ್ಸಿದೊ. ಶಾಲೆಗೆ ಕಳ್ಸಿ, ಬೇಕಾದ ವಿದ್ಯೆ ಕಲಿಸಿ ನಾಲ್ಕ್ ಮಕ್ಕಳ್ ಮನೆಲೇ ಇದ್ದೊ. ಮನೆಲೇ ಇದ್ದ್, ಒಂದ್ ದಿನ ರಾಜ ಕೇಳ್ತ್. ಈ ನಾಲ್ಕ್ ಮಕ್ಕಳಿಗೂ ಒಟ್ಟಿಗೆ ಮೊದ್‌ವೆ ಮಾಡೊಕ್. ಹಾಂಗೆಂತ ರಾಜ ಹೇಳ್ತ್. ಆಷ್ಟಾಕನ ಈ ಮೂರ್ ಜನ ಮಕ್ಕ ಒಪ್ಪಿದೊ. ಲಾಸ್ಟ್‌ನ ಮಂಜ ಒಪ್ಪಿತ್ಲೆ. ಅಣ್ಣಂದರೆಲ್ಲ ಮೊದ್‌ವೆ ಆಗಲಿ. ನಾ ಸಣ್ಣಂವ. ನಾ ಲಾಸ್ಟ್‌ಗೆ ಮೊದ್‌ವೆ ಆಂವೆಂತ ಹೇಳ್ತ್. ಈ ಮೂರ್ ಜನ ಅಣ್ಣಂದರಿಗೆ ರಾಜ ಮೊದ್‌ವೆ ಮಾಡಿ ಅವ್ ಮನೆಲೇ ಇದ್ದೊ. ಈ ರಾಜ ಬೇರೊಂದ್ ಊರಿಗೆ ಹೋತ್. ರಾಜ್ಯ ಆಳಿಕೆ. ಮನೆಲಿ ನಾಲ್ಕ್ ಮಂಜಂದರೂ, ಮೂರ್ ಸೊಸೆ ಯಂದಿರೂ ರಾಣಿನೂ ಇರ್ದ್.

ಈ ಲಾಸ್ಟ್‌ನ ಮಂಜ ಯಾಗೋಳ್ ಹಳ್ಳಕ್ಕೆ ಹೋಮ. ಹಳ್ಳಕ್ಕೆ ಬೆಳಿಗ್ಗೆ ಹೋದರೆ ಕತ್ತಲೆಗೆ ಬಾದ್. ಇಂವ ಅಲ್ಲಿ ಬೆಳಿಗ್ಗೆಂದ ಕತ್ತಲೆ ವರೆಗೆ ಹಳ್ಳದ ಕರೆಲಿ ಯಾರೆಲ್ಲ ಹೋದವೆ. ಯಾರೆಲ್ಲ ಬಂದವೆ ಅವರೆಲ್ಲರ ಮೊಯಿಸಿದ್. ಬಟ್ಟೆ ಒಗಿಪಂವರ ಬಟ್ಟೆ ಒಗೀದ್. ಇನ್ನ್ ದಿಕ್ಕಂತ ಇಲ್ಲೆ. ಮಡಿವಾಳಂತ ಇಲ್ಲೆ ಯಾರ್‌ಂತ ಇಲ್ಲೆ. ಎಲ್ಲಾ ಮೊಯಿಸಿದ್. ಒಂದ್ ದಿನ ಮಡಿವಾಳನ ಮೊಯಿಸಿತ್.. ಮೊಸ್‌ದಾಕನ ಮಡಿವಾಳಂಗೆ ನಾಚಿಕೆ ಆತ್ ರಾಜರ ಮಂಜ. ನನ್ನ ಇಂದ್ ಮೊಯಿಸಿ ಬುಟ್ಟ್‌ದ್. ಹಾಂಗೆಂತ ಹೇಳಿ ಆ ಮಡಿವಾಳ ಸೀದ ಬಂದ್ ಅಣ್ಣಂದ ರೊಟ್ಟಿಗೆ ಹೇಳ್ತ್. ರಾಜರೆ ನಿಮ್ಮ ತಮ್ಮ ಇಂದ್ ನನ್ನ ಹಳ್ಳಲಿ ಮೊಯಿಸಿಯೊಳೊ. ಅದ್ ನೀವ್ಗೆ ಬಾರಿ ಅಪಕೊರತೆ ಅದೆ. ನಂಗೆ ಬಾರಿ ಬೇಜಾರ ಆತ್. ನಾ ಹಂಗೆ ನಿವ್ಮೊಟ್ಟಿಗೆ ಬಂದ್ ಹೇಳ್ದ್. ಹೌದೊ. ಹಾಂಗಾದರೆ ಇವನ ಮಾತ್ ಸುಳ್ಳೊ. ಸತ್ಯವೊ ನೋಡೊಕ್. ಹಾಂಗೆಂತ ಹೇಳಿದ್ ಈ ಮಡಿವಾಳನ ಕೋಣೆಗೆ ಹಾಕಿ ಬುಟ್ಟ್‌ದ್ ಅವ್ ಹಳ್ಳಕೆ ಹೋದೊ. ಈ ಅಣ್ಣಂದರ್.

ಮೂರ್ ಜನ ಅಣ್ಣಂವರ್ ಹೋದ್ರೋ. ಹೋಕ್ಕೆ ಆಕನ ಒಂದ್ ದಿಕ್ಕನ ಮೊಸಿದೆ ತಮ್ಮ. ಸರಿಯಾದ ಮಾತ್. ಹೌದ್. ಹಾಂಗೆಂತ ಹೇಳಿ ಮನೆಗೆ ಬಂದೊ.

ಈ ಮಡಿವಾಳನ ಕೋಣೆಂದ ಬುಟ್ಟ್, ಅಂವಂಗೆ ಊಟ ಎಲ್ಲ ಕೊಟ್ಟ್, ಆಂವನ ಕಳ್ಸಿದೊ. ನೀ ಹೋಗಪ್ಪ ನಿನ್ನ ಮನೆಗೆ, ಹಾಂಗೆಂತ. ಈ ತಮ್ಮ ಕತ್ತಲೆಗೆ ಮನೆಗೆ ಬಾತ್. ಮಾರನೆ ದಿನ ಬೆಳಿಗ್ಗೆ ಈ ಅಣ್ಣಂದಿರ್ ಕಾಡಿಗೆ ಕರ್‍ಕೊಂಡ್ ಹೋದೊ. ನಾವ್ ತಮ್ಮನ ಕಾಡಿಗೆ ಕರ್‍ಕೊಂಡ್ ಹೋಕನ ಅಂವಂಗೆ ಈ ಕೆಲ್ಸ ಮರ್‍ತೋದೆ. ಹಳ್ಳಿಲಿ ಹೋಗಿ ನಿಲ್ಲುದ್. ಬಂದವರ ವಿೂಯಿಸ್ ಎಲ್ಲ ಮರ್‍ತ್ ಹೋದೆ. ಇಂದೊಂದ್ ಕೆಲ್ಸ ಅಂವ ಕಲಿಯಲಿ. ಹಾಂಗೆಂತ ಕಾಡಿಗೆ ಕರ್‍ಕೊಂಡ್ ಹೋದೊ. ಕಾಡಿಗೆ ಕರ್‍ಕೊಂಡ್ ಹೋಗಿ ಎಲ್ಲೆಲ್ಲಿ ತಿರ್‍ಗಿರೂ ಅಂವ ಹೊತ್ತ್ ನೋಡ್‌ತಾ ಇರ್‍ದ್. ನನ್ನ ಹೊತ್ತ್ ಆಕನ ನಾ ಹೋಗಿ ಬುಟ್ಟನೆ ಅಂತ. ಇಂವ ಹೋತ್ ನೋಡಿ ನೋಡಿದ್ ಅಂವನ ಹೋತ್ತಾಕನ ಇವರ ಬುಟ್ಟ್ ಬಾತ್.

ಗುಡ್ಡೆಂದ ಬಂದ್ ಇಂವ ಹಳ್ಳಕ್ಕೆ ಹೋತ್ ವಿೂಯಿಸಿಕಿ. ಇವ್ ಇಂವ ಹೋತಲ್ಲ. ಇನ್ನ್ ಕಾಡ್ ಏಕೆ ತಿರ್‍ಗುದ್‌ಂತ ಹೇಳಿದ್ ಬಂದೊ. ಬಾಕನ ಒಂದ್ ಕುಂಬ್ ಮರದ ಅಡಿಲಿ ಒಂದ್ ಕಂದಡಿ ಹಾವ್ ಮಲ್ಕೊಂಡ್‌ಟ್ಟ್ ಅದರ ಹೊಡ್ದ್ ಮಾಸ ಮಾಡಿ ತೆಕಂಡ್ ಬಂದೊ. ತೆಕಂಡ್ ಬಂದ್ ಅವ್ವನ ಕೈಲಿ ಕೊಟ್ಟೊ. ಅವ್ವ ಇದರ ಬೇಗ ಗೈಪ್ ಮಾಡೊಕ್. ಮಧ್ಯಾಹ್ನ ತಮ್ಮ ಊಟಕ್ಕೆ ಬಾದು. ಈ ಅವ್ವ ಅದ್‌ಕ್ಕೆ ಬೇಕಾದ ಮೆಣ್ಸ್ ಎಲ್ಲ ಕಡ್ದ್ ಬೇಗ ಬೇಗ ಗೈಪ್ ಮಾಡ್ದೊ. ಗೈಪ್ ಎಲ್ಲ ಮಾಡಿ ಆಕನ ತಮ್ಮನೂ ಬಾತ್. ಹಳ್ಳಕೆ ಹೋದಂವ. ಅವ್ವ ಊಟಕ್ಕೆ ಆತ. ಊಟಿಕ್ಕೆ ಆತ್. ಎಂತ ಗೈಪ್ ಅವ್ವ. ಗೈಪ್. ಆಣ್ಣಂದಿರೇನೋ ಒಂದ್ ಪುಂಡಿ ಮಾಸ ತಂದ್ ಕೊಟ್ಟೊಳೊ. ಅದೇ ಗೈಪ್ ಹಾಂಗೆಂತ ಹೇಳ್ದೊ. ಇಕ್ಕಿ ಕೊಟ್ಟೊ. ಈ ಊಟಕ್ಕೆ ಕುದ್ದ್ ಆಕನ ಒಂದ್ ಕೊತ್ತಿ ಬಾತ್. ನಮ್ಮ ಕೊತ್ತಿ ಬಾತ್‌ಂತ ಹೇಳಿ ಒಂದ್ ಪುಂಡಿ ಅನ್ನ ಕೊಟ್ಟತ್. ಕೊತ್ತಿ ತಿಂದ್ ಅಲ್ಲೆ ಬೀತ್. ಈ ಕೊತ್ತಿ ಯಾಕೆ ಬಿದ್ದ್ ಹೋದ್ ಹಾಂಗೆಂತ ಹೇಳ್ತ್. ನಾಯಿನ ಕರ್‍ದ್ ನಾಯಿಗೆ ಒಂದ್ ಪುಂಡಿ ಅನ್ನ ಕೊಟ್ಟತ್. ನಾಯಿನೂ ತಿಂದ್ ಒಂದ್ ಸ್ವಲ್ಪ ದೂರ ಹೋಗಿ ಅದೂನ್ ಬಿದ್ಪ್ ಹೋತ್. ಕೊತ್ತಿನೂ ಬೀತ್. ನಾಯಿನೂ ಬೀತ್. ಇನ್ನ್ ನಾ ತಿಂದರೆ ಒಳಿಯಕೆ ಉಟ್ಟ. ನಂಗೆಬೇಡ ಈ ಅನ್ನ ಹಾಂಗೆಂತ ಹೇಳಿತ್ ಅದರ ಬುಟ್ಟ್ ಹೊರಗೆ ಬಾತ್. ಹೊರಗೆ ಬಾಕನ ಈ ರಾಜ್ಯ ಆಳಿಕೆ ಹೋದ ಅಪ್ಪ ಬಂದ್ ಮನೆ ಹತ್ತಿದೆ. ಮಂಜ ನೀ ಎಂತ. ಊಟ ಮಾಡ್ತಾ ಇದ್ದನಾ ಹಾಂಗೆಂತ ಹೇಳಿ ಮಂಜನ ಕರ್‍ಪ್ ಹೇಳ್ತ್. ಏನ್ ಸಮಾಚಾರ. ಅಣ್ಣ–ಅತ್ತಿಗೆ ಎಲ್ಲ ಹೇಂಗೆ ನಿನ್ನ ಸಾಂಕ್ವಿಸ ಪೋರ್‍ಲ್ಲ. ನಿನ್ನ ಮಾತೆಲ್ಲ ಕೇಳ್ವೆನೊಂತ ಕೇಳ್ತ್. ಯಾವ್‌ದಕ್ಕ ಮಾತಿಲ್ಲೆ ಸುಮ್ಮನೇ ಕುದ್ದತ್ ಈ ಮಂಜ. ಲಾಸ್ಟ್‌ಗೆ ಅಪ್ಪ ಕೇಳ್ತ್. ನಿಂಗೆ ಮೊದ್‌ವೆ ಆಕ್ಕಂತ. ಅಂದ್ ಅಣ್ಣಂದರೊಟ್ಟಿಗೆ ಮೊದ್‌ವೆ ಮಾಡೊಕಂತ ಹೇಳ್ಕನ ನೀ ಬೇಡಂತ ಹೇಳ್ದ. ಇಂದ್ ನಿಂಗೆ ಮೊದ್‌ವೆ ಆಕ್ಕಂತ ಕೇಳ್ತ್. ಮೊದ್‌ವೆ

ಆಕ್ಕ್. ನಾ ಮೊದ್‌ವೆ ಆಕ್ಕ್‌ಂತ ಇದ್ದರೆ ಒಂದ್ ದೇವಲೋಕದ ದೇವತೆ ಆಕ್ಕ್. ಮತ್ತೊಂದು ಬೆದ್‌ರೊಳಗಿದ್ದ ಚದ್‌ರಂಗಿ ಹೆಣ್ಣಾಕ್ಕ್. ನಂಗೆ ಹಣವನ್ನೇ ಬಳ್ಸೊಕ್ ಹಣವನ್ನೇ ಊಟ ಮಾಡೊಕ್ ಹಾಂಗೆಂತ ಹೇಳ್ತ್. ನಿಂಗೆ ಬೆದ್‌ರೊಳಗಿದ್ದ ಚೆದ್ ರಂಗಿ ಹೆಣ್ಣ್‌ನ ತಾಕ್ಕೆ ನನ್ನಂದ ಸಾಧ್ಯ ಇಲ್ಲೆ. ದೇವಲೋಕದ ದೇವತೆನ ತಾಕ್ಕೊ ಸಾಧ್ಯ ಇಲ್ಲೆ. ಹಣವನ್ನೇ ಬಡಿಸಿ, ಹಣವನ್ನೇ ಊಟ ಮಾಡ್ಸಿಕೆ ನನ್ನಂದ ಸಾಧ್ಯನೇ ಇಲ್ಲೆ. ನೀ ಹೋಗ್ ನನ್ನ ಮನೆಂದ. ಹಾಗೆಂತ ಹೇಳಿ ನೂಕಿ ಹೊರಗೆ ಹಾಕಿತ್ ಅಪ್ಪ.

ಅಲ್ಲಿಂದಲೇ ದೂರ ಕಾಡ'ಲೇ ಹೋತ್. ಒಂದ್ ಚೆಂಡೆ ಬಲ್ಲೆ ಒಳಗೆ ಒಂದ್ ಋಷಿ ಕುದ್ದ್‌ಟ್ಟ್. ಹನ್ನೆರಡ್ ಹನ್ನೆರಡ್ ಇಪ್ಪತ್ತನಾಲ್ಕ್ ವರ್ಷ ಆಗುಟ್ಟ್. ಅಂವ ಅಲ್ಲಿ ಕುದ್ದ್ ಮೂಕ್‌ಗೆ ಹುತ್ತ ಕುತ್ತ ಬೆಳ್ದುಟ್ಟ್. ಇಂವ ಹೋಗಿ ಹಾಯುಕನ ಆ ಹುತ್ತ ಜರ್ದ್ ಬೀತ್. ಬಿದ್ದ್ ಕಣ್ಣ್ ಬುಟ್ಟ್ ನೋಡಿ – ನೀ ಯಾರಪ್ಪ ಎಲ್ಲಿಂದ ಏನಾಗಿ ಬಂದದ್ ಹಾಂಗೆಂತ ಅವನೊಟ್ಟಿಗೆ ಕೇಳ್ತ್. ಕೇಳ್ಕನ ಅಂವನೊಟ್ಟಿಗೆ ಎಲ್ಲ ಹೇಳ್ತ್. ಬಾ ನನ್ನ ಮನೆಗೆ ಪೋಯಿ. ನಾ ಇಷ್ಟ್‌ವರ್ಷ ಕುದ್ದರೂ ನನ್ನಹಕ್ಕಳೆ ಬಂದಂವ ಇಲ್ಲೆ. ನನ್ನ ತಲೆಂದ ಮೇಲೆ ಚೆಂಡ ಬಲ್ಲೆಯೂ ಮುಚ್ಚಿಟ್ಟು. ನನ್ನ ಮೂಕ್‌ಂದ ಮೇಲೆ ಹುತ್ತವೂ ಬೆಳ್ದುಟ್ಟ್. ಇಲ್ಲಿಗೆ ಒಂದ್ ನರ ಮೊನ್ನಂತ ಹೇಳಿ ಬಂದಂವ ಇಲ್ಲೆ. ಇಲ್ಲಿಗೆ ಬಂದಂವ ನೀನೆ. ಬಾ ಪೋಯಿಂತ ಅಂವನ ಕರ್ಕೊಂಡ್ ಹೋತ್ ಅಲ್ಲಿಗೆ. ಅಂವನ ಅರಮನೆಗೆ. ಹೋಗಿದ್ ನಾ ಒಬ್ಬನೇ ಇರುದ್. ನನ್ನ ಜೊತೆ ನೀ ಇರೊಕ್ ಹಾಂಗೆಂತ ಹೇಳಿ ಅಂವನ ಅಲ್ಲೆ ಹಾಕನ್ತ್. ಈ ಋಷಿಗೆ ಬೆಳಿಗ್ಗೆ ಯಾಗೋಳ್ ಹಾಲ್ ಹಣ್ಣ್ ತಾಕೆ ಇಂವ ಜನ. ಈ ಹುಡ್‌ಗ. ಯಾಗೋಳ್ ಹಾಲ್ ಹಣ್ಣ್‌ಗೆ ಹೋಕನ ಒಂದ್ ದಿನ ಋಷಿ ಹೇಳ್ತ್. ನೀ ಎಲ್ಲಿಗೂ ಹೋಗ್. ನಮ್ಮ ಬಡಗನ ತೋಟಕ್ಕೆ ಮಾತ್ರ ನೀ ಹೋಕ್ಕೆ ಬೊತ್ತ್. ಬಡಗನ ತೋಟಕ್ಕೆ ನೀ ಹೋಕ್ಕೆ ಸಾಧ್ಯ ಇಲ್ಲೆ. ಒಬ್ಬ ಆಗಿ. ಹಾಂಗೆಂತ.

ಆತ್‌ಂತ ಹೇಳಿ ಕೆಲವ್ ದಿನ ಕಳ್ದ್ ಒಂದ್ ದಿನ ಬಡಗನ ತೋಟಕ್ಕೆ ಹೋತ್. ಹೋಕನ ದೇವಲೋಕದ ದೇವತೆಗ ಅಲ್ಲಿ ಮೀತಾ ಒಳೊ. ಅವರ ಕುದ್ದ್ ಕೊಂಡ್ ನೋಡ್ತ್. ನೋಡಿ ನೋಡಿ ಒಂದ್ ದೇವತೆನ ಸೀರೆ ತೆಕೊಂಡ್ ಓಡಿ ಬಾತ್. ಓಡಿ ಬಾಕನ ಈ ಏಳ್ ಜನ ದೇವತೆಗಳೂ ಇಂವನೊಟ್ಟಿಗೆ ಓಡಿಬಂದೊ. ನೀವ್ ನಿಲ್ಲಿ ಅಣ್ಣ. ನಮ್ಮ ಸೀರೆ ಕೊಡಿ. ಓಡ್ಬೇಡಿ ಅಣ್ಣಂತ ಓಡಿ ಬಂದೊ. ಓಡಿ ಬಾಕನ ಇಂವ ತಿರ್ಗಿ ನಿತ್ತ್ ನೋಡ್ತ್. ನೋಡ್ಕನ ಇಂವ ಅಲ್ಲೆ ಕಲ್ಲ್. ಸೀರೆನ ಎಳ್ಕೊಂಡ್ ಅವ್ ಹೋದೊ. ಈ ಋಷಿ ಹಾಲ್ ಹಣ್ಣ್‌ಗೆ ಹೋದ ಹೈದ ಏಕೆ ಬಾತ್ಲೆಂತ ಆಲೋಚನೆ ಮಾಡ್ತಾ ಇತ್ತ್. ಇಲ್ಲೆ ಇಂವಂಗೆ ಏನೋ ತಾಪತ್ರೆ ಬಂದ್‌ಟ್ಟ್ ಹಾಂಗೆಂತ ಋಷಿ ಹೊರಟ್ ಹೋತ್. ಹೋಕನ ದಾರ್ಲಿ ಒಂದ್

ಕಲ್ಲ್ ಉಟ್ಟ್. ಆ ಕಲ್ಲಿಗೆ ಎರಡ್ ಪೆಟ್ಟ್ ಹೊಡ್ತ್. ಸೀದ ಬಾತ್. ಬಂದ್ ಋಷಿ ಅರಮನೆಲಿ ಕುದ್ರಿವಲ್ಲೇ ಕುದ್ದ್‌ಕೊನ್ತ್. ಹಂಞ ಹೊತ್ತಿಗೆ ಆಕನ ಇಂವ ಹಾಲ್ ತೆಕೊಂಡ್ ಬಂದದೆ. ಏನ್ ಮಾರಾಯ ಇಂದ್ ಇಷ್ಟ್ ಹೊತ್ತ್ ನಿಂಗೆ. ಹೊತ್ತ್ ಆತ್. ಯಾಗೋಳ್ ಒಂದೇ ಸಮ ಆದೆನ. ಹಂಞ ಹೊತ್ತಾತ್. ಹೀಂಗೇ ಯಾಗೋಳ್ ಹಾಲ್ ತೆಕೊಂಡ್ ಬರ್ತಾ ಇತ್.

ಕೆಲವ್ ದಿನ ಆಕನ ಇಂವ ದಿನಂವ ದಿನ ಲಾಚಾರ್ ಆಗ್ತಾ ಬಾತ್. ನಿಂಗೆ ಏನಾತ್. ನೀ ಯಾಕೆ ಹೀಂಗೆ ಆದ. ಏನಿಲ್ಲೆ. ನೀ ಬಡಗನ ತೋಟಕ್ಕೆ ಹೋಗಿದ್ದ. ಹೋಗಿದ್ದೆ. ಅಲ್ಲಿ ಯಾರೊಳೊ. ಅಲ್ಲಿ ದೇವಲೋಕದ ದೇವತೆಗ ಮಿಯ್‌ತಾ ಇದ್ದೊ. ಅವರ ನೋಡ್ದ್ಯೊಳನ ನೀ. ನಾ ನೋಡ್ದ್ಯೊಳೆ. ಎಷ್ಟ್ ಜನ ಒಳೊ. ಏಳ್ ಜನ ಒಳೊ. ಆ ಪೈಕಿಂದ ನಿಂಗ ಮೊದ್‌ಪೆ ಆಕ್ಯೊ. ಆಕ್ಕ್. ಹೇಂಗೆ ಅವರ ಪೈಕಿಂದ ಹೆಣ್ಣ್‌ತಾದು. ಈ ದೇಪತೆನ ತರೊಂವ ಯಾರ್ ? ಹೇಂಗೆ ತಾದ್ ? ಋಷಿ ಕೇಳ್ತ್. ಅದ್ ಗೊತ್ತಿಲ್ಲೆ. ಅವ್‌ಕ್ಕೆ ಪಾರ ಯಾರೆಲ್ಲ ಒಳೊ ? ಒಂದ್ ಕರೆಲಿ ಒಂದ್ ನಾಯಿ ಕುದ್ದ್‌ಟ್. ಒಂದ್ ಕರೆಲಿ ಒಂದ್ ನವಿಲ್ ಕುದ್‌ಟ್ಟ್. ಮತ್ತೊಂದ್ ಕರೆಲಿ ಒಂದ್ ಕುರೆ ಕುದ್ದ್‌ಟ್ಟ್. ಹಾಂಗೆಂತ ಇದ್ದರೆ ನೀ ಒಂದ್ ಬಾಳೆ ಹಣ್ಣ್‌ನ ಗೊನೆ, ಒಂದ್ ಕೇಜಿ ಮಾಸ, ಒಂದ್ ಕೇಜಿ ಹೊದ್ರಿ ಇಷ್ಟ್ ತಯಾರ್ಸ್ನಕ್. ಕುರೆನ ದಾರಿಗೆ ಬಾಳೆ ಹಣ್ಣ್ ಹಾಕೊಕ್. ನಾಯಿ ಬರುವ ದಾರಿಗೆ ಮಾಸ ಹಾಕೊಕ್. ನವಿಲ್ ಬರ್‌ವ ದಾರಿ ಹೊದ್ರಿ ಹಾಕೊಕ್. ಅಷ್ಟೆಲ್ಲ ಹಾಕಿ ಆಕನ ಅವೆಲ್ಲ ಅದರ ತಿಂದ್‌ಕೊಂಡ್ ಹೋದವೆ. ಆಗ ನೀ ಅಲ್ಲಿಂವ ಒಂದ್ ಸೀರೆ ತಕೊಂಡ್ ಓಡಿ ಬರೊಕ್. ಓಡಿ ಬಾಕನ ನಿನ್ನ ಒಟ್ಟಿಗೇ ಓಡಿ ಬಾವೊ. ಅಣ್ಣ ನಿಲ್ಲಿಯಣ್ಣ ನಿಲ್ಲಿಯಣ್ಣಂತ ಹೇಳಿ ಓಡಿ ಬಾವೊ. ನೀ ನಿಲ್ಲಿಕೆ ಬೊತ್ತ್, ತಿರ್‌ಗಿ ನೋಡಿಕೂ ಬೊತ್ತ್. ನೀ ಸಿದಾ ನನ್ನ ಮನೆ ಒಳಗೆ ಬರೊಕ್. ಒಳಗೆ ಬಂದ್ ಆ ತಂದ ಸೀರೆನ ನೀ ಪೆಟ್ಟಿಗೆ ಒಳಗೆ ಹಾಕೊಕ್. ಆಗ ನಾ ಇಲ್ಲಿ ತೊಟ್ಲ್ ತೂಗಿ ಇಸಿನೆ. ಆ ತೊಟ್ಲ್‌ಲಿ ನೀ ಹೂ ಗೂಸಾಗಿ ಮಲಗೊಕ್. ಹಾಂಗೆಂತ ಹೇಳಿ ಕೊಟ್ಟ್‌ತ್ ಋಷಿ. ಆದ್‌ಂತ ಹೇಳ್ತ್. ಅಂದ್‌ಂದಲೇ ತಯಾರ್ಸಿತ್.

ಒಂದ್ ಬಾಳೆಗೊನೆ ಕಡ್ದ್ ಹಾಕಿ ಅದರ ಹಣ್ಣ್ ಮಾಡ್ಸಿ ಅದ್ ಹಣ್ಣಾಂವ ಸಂದರ್ಭಕ್ಕೆ ಒಂದ್ ಕೇಜಿ ಮಾಸ, ಒಂದ್ ಕೇಜಿ ಹೊದ್ರಿ ಎಲ್ಲ ತಯಾರ್ಸಿ ಮಾರನೆ ದಿನ ಅವ್ ಮಿಯಕ್ಕೆ ಬಾವ ಹೊತ್ತಿಗೆ ತೆಕೊಂಡ್ ಹೋತ್. ಹೋಗಿ ಕುರೆ ಬರ್‌ವ ದಾರಿಗೆ ಬಾಳೆ ಹಣ್ಣ್‌ಹಾಕಿತ್, ನವಿಲ್ ಬರ್‌ವ ದಾರಿಗೆ ಹೊದ್ರಿ ಹಾಕಿತ್. ನಾಯಿ ಬರ್‌ವ ದಾರಿಗೆ ಮಾಸ ಹಾಕಿತ್. ಹಾಕಿ ಬಂದ್ ಒಂದ್ ಕರೆಲಿ ಕುದ್ದ್‌ಕನ್ತ್. ಅಷ್ಟಾಕನ ಈ ದೇವತೆಗಳ್ ಬಂದ್ ಮಿಯಕೆ ಇಳ್ದೊ. ಇವ್ ಮೂರ್ ಈ ದಾರಿಲಿ ಇದೆಲ್ಲ ಉಟ್ಟಲ್ಲ. ಎಲ್ಲ ತಿಂದ್‌ಕೊಂಡ್ ಹೋದೊ. ಇಂವ ಆ ಪೈಕಿಂದ ಒಂದ್ ಸೀರೆ ತಕೊಂಡ್ ಓಡಿಕಂಡ್ ಬಾತ್. ಓಡಿ ಬಾಕನ. ಅಕ್ಕ ನಿನ್ನ ಸೀರೆ ತಕೊಂಡ್

ಹೋತ್‌ಂತ. ಯಾರ್ ತಕೊಂಡ್ ಹೋದ್. ಯಾರ್ ಗೊತ್ತಿಲ್ಲೆಂತ ಹೇಳ್ತ್. ಈ ಏಳ್ ಜನ ಗೂಡೆಗಳೂ ಓಡಿ ಬಂದೊ. ಓಡಿ ಬಂದ್ ನಿಲ್ಲಿ. ಅಣ್ಣ ನಿಲ್ಲಿಂತ ಹೇಳ್ದ್ರೊ, ನಿಂತತೇ ಇಲ್ಲೆ ಅಂವ. ಇಂವ ಸೀದ ಓಡಿ ಬಾತ್. ಮನೆಯ ಒಳಗೇ ಹುಕ್ಕತ್. ಹುಕ್ಟ್‌ದ್. ಪೆಟ್ಟಿಗೆಲಿ ಸೀರೆ ಹಾಕಿ ತೊಟ್ಟಿಲ್‌ಲಿ ಕೂಸಾಗಿ ಮಲಗಿತ್. ಅಷ್ಟಾಕನ ಈ ಏಳ್ ಹೆಣ್ಣ್ ಮಕ್ಕಳೂ ಮನೆಗೆ ಬಂದೊ. ಬಂದ್ ನಿಮ್ಮ ಜನವೇ ಆಗಿರೊಕ್. ನಮ್ಮ ಸೀರೆನ ಒಂವರ ತಂದುಟ್ಟ್. ನಾವ್ ಮಿಂದ್‌ಕೊಂಡ್ ಇದ್ದೊ ಕೆರೆಲಿ. ನನ್ನ ಮನೆಲಿ ಯಾರ್ ಜನ ಒಳೊ. ನಾ ಒಬ್ಬನೆ. ಋಷಿ. ನಂಗೆ ಸಂಸಾರ ಸಾಗರ ಉಟ್ಟ. ನನ್ನ ಮನೆಲಿ ಯಾರ್ ಜನವೊಳೊಂತ ಒಳಗೆ ಹೋಗಿ ನೋಡಿಂತ ಹೇಳ್ತ್ ಋಷಿ. ಇವ್ ಒಳಗೆ ಹೋಗಿ ನೋಡ್ದೊ. ಇವ್ ಒಳಗೆ ಹೋಕನ ಆ ಕೂಸ್, ತೊಟ್ಟಿಲ್ ಯಾವ್‌ದ್ ಇಲ್ಲೆ. ಎಲ್ಲ ನೋಡ್ದೊ. ಈ ಸೀರೆ ತಂದ ಗೂಡೆ ತಂಗೆ. ಬಾಕಿ ಆರ್ ಗೂಡೆಗ ಅಕ್ಕಂದರ್. ಈ ಆರ್ ಗೂಡೆಗ ಏನ್ ಹೇಳ್ದೊ. ತಂಗೆ ನಿನ್ನ ಸೀರೆ ನಿಂಗೆ ಯಾಗ ಸಿಕ್ಕಿತ್. ಅಂದ್‌ನ ವರೆಗೆ ನೀ ಈ ಮನೆಲೇ ಇರ್. ಹಾಂಗೆಂತ ಆ ಗೂಡೆನ ಅಲ್ಲಿ ಬುಟ್ಟೊ ಸೀದಾ ಹೋದೊ.

ಅವ್ ಹೋಗಿದ್ ಎತ್ತ್‌ವಲ್ಲಿಗೆ ಎತ್ತ್‌ವ ಅಂದಾಜಿಗೆ ಈ ಹುಡ್‌ಗ ಬಾತ್. ಮನೆಗೆ ಬಂದಾಕನ ಈ ಋಷಿ ಹೇಳ್ತ್. ಪೆಟ್ಟಿಗೆಂದ ಬೇರೊಂದ್ ಸೀರೆ ತೆಗ್ದ್ ಕೊಡೂಂತ. ಪೆಟ್ಟಿಗೆಂವ ಆ ಸೀರೆ ಬುಟ್ಟ್ ಬೇರೊಂದ್ ಸೀರೆ ತೆಗ್ದ್ ಕೊಟ್ಟತ್. ಗೂಡೆಗೆ ಉಡಿಕೆ. ಅದ್ ಆ ಸೀರೆನ ಉಟ್ಟ್‌ದ್. ಅವ' ಅಣ್ಣ ತಂಗಿನ ಹಾಂಗೇ ಆ ಮನೆಲಿ ಇದ್ದೊ. ಇದ್ದ್ ಇದ್ದ್ ಇದ್ದ್ ಕೆಲವ್ ವರ್ಷ ಕಳ್ದ್ ಇಂವ ಕೇಳ್ತ್. ನಾವ್ ಹೋದವೆ ನಮ್ಮ ಮನೆಗೆಂತ. ನಿಮ್ಮ ಮನೆ ಎಲ್ಲಿ. ನಮ್ಮ ಮನೆ ಅಂದ್ ಅವ್ವ ಅಪ್ಪ ಇದ್ದದ್ ನಮ್ಮ ಮನೆ. ನಾ ಅಲ್ಲಿಗೆ ಹೋನೆಂತ. ಹೋದಿಯ. ಹೋದಿದ್ದರೆ ನನ್ನಿಂದ ಏನೂ ತೊಂದರೆ ಇಲ್ಲೆಂತ. ಹೋಗ್ ಹಾಂಗೆಂತ ಹೇಳ್ತ್ ಋಷಿ.

ಇವ' ಒಂದ್ ದಿನ ಹೋದೊ. ಹೋಗಿದ್ ಹೋಗಿದ' ಒಂದ್ ರಾಜನ ಮನೆಲಿ ತಿರ್‍ಗಾಡಿದ್ ಬಂದೊ. ಪುನಃ ಬಂದ್‌ದ್ ಮಾರನ ದಿನ ಹೇಳ್ದೊ. ನಾವ್ ಇಂದ್ ಹೋದವೆಂತ. ಆತ್ ಹೋಗಿ. ನೀವ'ಗ' ಎಂತ ಬೇಕ್. ನಾವ'ಗೆ ಏನೂ ಬೇಡ. ಏನಾದ್ರೂ ಬೇಕಾರೆ ನೀವ'ಗೆ ಬೇಕಾದರ ಎಲ್ಲ ತೆಕನೊಕ'. ನಾವ'ಗೆ ಯಾವುದ' ಬೇಡ. ನಿಮ್ಮ ಮನತೃಪ್ತಿಲಿ ನೀವ್ ಎಂತಾರ್ ಕೊಟ್ಟರೆ ತೆಕೊಂಡೋದ'. ನಾ ಏನೂ ಕೊಡಿಕಿಲ್ಲೆ. ನೀವ'ಗೆ ಎಂತದ' ಬೇಕ'. ಅಂತದ' ತಕೊಂಡ' ಹೋಕ್‌ಂತ. ಹಂಗಾದರೆ ನಂಗೆ ಇದೊಂದ' ಕೋಲ' ಬೇಕ'. ಒಂದ' ಬೆತ್ತ. ಆತ' ಆ ಬೆತ್ತದ ಕೋಲ' ತಕಂಡೋಗ'. ಹಾಂಗೆಂತ ಋಷಿ ಹೇಳ್ತ್. ಇಂವ ಬೆತ್ತದ ಕೋಲ'ನ ತಕನ್ತ್, ಗೂಡೆನ ಕರ್‍ಕೊನ್ತ್. ಅಲ್ಲಿಂದ ಹೊರಟ' ಹೋತ'

ಹೋಗಿ ಹೋಗಿ ಹೋಗಿ ಒಂದ' ದೊಡ್ಡ ರಾಜನ ಮನೆಗೆ ಸೇರಿಕನ್ತ್. ಅಲ್ಲಿ ಯಾವ ರಾಜ ಮಕ್ಕಳೊ ಬಂದೊ. ಮತ್ತೆ ಹೀಂಗೆ ಇದ್ದವ' ಏನೂ ಅಲ್ಲ ಹಾಂಗೆಂತ ಆ ರಾಜರ' ಇವರ ಬಾರಿ ಪ್ರೀತಿಸಿದೊ. ಕತ್ತಲೆಗೆ ಮಿಂಯಕೆ ನೀರ್, ಊಟ. ರೂಮ್ ಮಲಗಿಕೆ ಕೊಟ್ಟೊ.

ಮಾರನೆ ದಿನ ಬೆಳಿಗ್ಗೆ ಎದ್ದ್ ರಾಜ ಕೇಳ್ತ್. ನೀವ' ಯಾವ ರಾಜರ ಮಕ್ಕ. ನಿಮ್ಮ ಊರ್ ಯಾವ್‌ದ' ಹಾಗೆಂತ. ನಾವ' ರಾಜರ ಮಕ್ಕ ಏನೂ ಅಲ್ಲ. ನಾವ' ಹೀಂಗೆ ಕೆಲಸ ಮಾಡಿ ದನ ಮೇಯಿಸಿ ಎಲ್ಲ ತಿಂಬೊವ್. ನಾವ' ಹೀಂಗೆ ತಿರ್‌ಗಾಡಿ ಕೊಂಡ' ಬಂದದ್. ಎಲ್ಲಾರ' ದನ ಮೇಯಿಸಿಕೆ ಸಿಕ್ಕಿರೆ ದನ ಮೇಯಿಸಿ ಕಾಲ ಕಳೆಯೊಕ್‌ಂತ ಬಂದದ್. ಹಾಂಗೆ ಆದರೆ ಇಲ್ಲಿ ದನ ಒಳೊ. ನೀವ' ಮೇಯಿಸಿ ಕೊಂಡ್ ಇದ್ದರಿಯ. ಆತ್ ನಾವ' ಇದ್ದವ. ಹಾಂಗೆ ಆದರೆ ನಿನ್ನ ತಂಗೆ ನಮ್ಮ ಮನೆಲಿ ಇರಲಿ. ನೀ ನಮ್ಮ ದನ ಮೇಯಿಸಿಕಂಡ್ ಇರೊಕ್. ಹಾಂಗೆಂತ ಅವನೊಟ್ಟಿಗೆ ಹೇಳಿಕೊಟ್ಟೊ. ಆತ' ನನ್ನ ತಂಗೆ ಮನೆಲಿ ಇರಿಕಿಲ್ಲೆ. ನಾ ಹಟ್ಟಿನ ಬಾಗಿಲ್‌ಲಿ ಸೊಪ್ಪುನಗೂಡ್ ಮಾಡಿದ' ನನ್ನ ತಂಗೆನ ಅಲ್ಲಿ ಬುಟ್ಟ್, ನಾ ದನ ಮೇಸ'ತಾ ಇದ್ದನೆ. ಹಾಂಗೆಂತ ಹೇಳ್ತ್. ಒಂದ' ಸೊಪ್ಪಿನ ಗೂಡ' ಕಟ್ಟಿತ'. ತಂಗೆನ ಆಲ್ಲಿ ಬುಟ್ಟತ'. ಇಂವ ದಿನ ದನ ಹೊಡ್ಕೊಂಡ' ಹೋತ'. ಇಂವ ದನ ಹೊಡ್ಕೊಂಡ' ಹೋಕನ ಆ ಬೆತ್ತದ ಕೋಲ' ಉಟ್ಟಲ್ಲ. ಅದರ ಹಿಡ್ಕೊಂಡೇ ಹೋದೆ. ಎಲ್ಲಿ ಆ ಬೆತ್ತದ ಕೋಲ' ಊರಿ ಇಸಿತ'. ಅಲ್ಲಿ ದನಗಳಿಗೆ ಬೇಕಾದ ಹುಲ್ಲಾತ'. ಅಲ್ಲೆ ತಿಂಬಕೆ ಅಲ್ಲೆ ತಿಂದ್‌ದ' ಕತ್ತಲೆ ಮಾಡಿದ'. ಇಂವ ಹಿಂದೆಂದ ಬಾತ'. ದನಗ ಮುಂದೆ ಹಟ್ಟಿಗೆ ಬಂದ' ಹುಕ್ಕದ'. ಹೀಂಗೆ ಬರ್ತಾ ಇದ್ದೊ.

ಒಂದ್ ದಿನ ಇಂವ ಹಿಂಗೇ ಹೋಕನ ಒಂದ್ ಬೆದ್‌ರ್ ಕೊಡಿ ಇಂವನ ತಲೆಗೆ ಹೊಡ್ಡ್‌ದ್ ಮೇಲೆ ಹೋದೆ. ಇಂವ ಬಂದ್ ತಂಗೆನೊಟ್ಟಿಗೆ ಹೇಳ್ತ್. ತಂಗೆ ನಾ ಹೋಕನ ಯಾಗೋಳ್ ಒಂದ್ ಬೆದ್‌ರ' ಒಂದ' ನನ್ನ ತಲೆಗೆ ಹೊಡ್ಡ್ ಮೇಲೆ ಹೋದ' ಹಾಗೆಂತ. ಆಗ ತಂಗೆ ಹೇಳಿಕೊಟ್ಟತ'. ಆದ' ಬಂದ' ತಲೆಗೆ ಹೊಡ್ಡ ಕೂಡಲೆ ಆದರ ನೀವ' ಬುಡಂದ ಕಡಿಯೊಕ್. ಕಡ್ದ್ ಬುಡನ' ಕೊಡಿನ' ಇಟ್ಟ್ ನಡ' ತುಂಡ್‌ನ ತಕ್ಕೊಂಡ್ ಬರೋಕ'. ಆತ್‌ಂತ ಹೇಳ್ತ್. ಮಾರನೆ ದಿನ ಇಂವ ಕತ್ತಿ ತಕ್ಕೊಂಡ್ ಹೋತ'. ಆ ಬೆದ್‌ರ್ ಕೊಡಿ ಬಂದ್ ತಲೆಗೆ ಹೊಡಿಯಕನ ಇಂವ ಬುಡಂದ ಕಡ್ತ್. ಕೊಡಿನ ಬುಡನ ಕಡ್ದ್ ಇಟ್ಟ್ ನಡೂ ತುಂಡನ ಹಿಡ್ಕೊಂಡ್ ಮನೆಗೆ ಬಾತ್. ಸೊಪ್ಪಿನ ಗೂಡಿಗೆ ಬಂದ್. ಆ ಬೆದ್ರ್‌ನ ಒಡ್ತ್. ಒಡ್ದಾಕನ ಅದರೊಳಗೆ ಒಂದ' ಪೊರ್ಲ್‌ನ ಗೂಡೆ ಉಟ್ಟ್. ಇದ್ ಒಂದ್ ಗೂಡೆ. ಇದ್‌ನ' ತಂಗೆ ನಂಗೆಂತ ಹೇಳ್ತ್ ಪೊರ್ಲ್ ಸಾಂಕಿತ'. ಈ ಎರಡ್ ಗೂಡೆಗಳ' ಈ ಸೊಪ್ಪಿನ ಗೂಡ'ಲಿ ಒಳೊ.

ಈ ರಾಜನ ಹೆಣ್ಣ್ ಹೇಳ್ತ್. ಎಷ್ಟ್ ಪೊರ್ಲ್ ಒಳೊ ಸೂರ್ಯ ದೇವ್ರಿಗಾದರ್ ಕೊರತೆ ಉಟ್ಟ್. ಆ ಎರಡ್ ಮಕ್ಕಳಿಗೆ ಕೊರ್ತೆ ಇಲ್ಲೆ. ಅಂವನ ತಂಗೆಕ ಗಡ. ಮೊನ್ನೆ ಬಾಕೆ ಆಕನ ಒಂದೆ ಇದ್ದದ್. ಇಂದ್ ಎರಡ್ ಒಳೊಗಡ. ಎಷ್ಟ್ ಪೊರ್ಲ್ ಉಟ್ಟ್. ನೋಡಿ ನಿಮ್ಮಿಂದ ಆದೊ. ಇಂತ ಹೆಣ್ಮಕ್ಕಳ ತಾಕೆಂತ ಹೇಳಿ ರಾಜನೊಟ್ಟಿಗೆ ಜಗಳ ಮಾಡ್ತ್ ರಾಣಿ. ಛೀ ! ಅಂತ ಕೇಡ್ ಮಾತ್ ಮಾತಾಡ್ಬೇಡ. ನೀ ಸಹ ಹೆಣ್ಣ್ ಸಂಸಾರ ಅಲ್ಲ. ನೀ ಹಂಗೆ ಮಾತಾಡಿಕೆ ಸಾಧ್ಯ ಇಲ್ಲೆ. ಹಾಂಗೆಂತ ಹೇಳಿ ರಾಣಿಗೆ ರಾಜ ಬೈತ್ತ್. ಬೈದರ್ ಸುಮ್ಮನೇ ಹೀಂಗೇ ಇತ್ತ್. ಒಂದ್ ದಿನ ರಾಣಿ ತುಂಬ ಹಠ ಹಿಡ್ತ್. ಛೆ ! ಅದ್ ಆಕ್ಕೇ ಇಲ್ಲೆ. ಅಂವನ ಕೊಂದೇ ಕೊಲ್ಲೊಕ್. ಅಂವನ ಕೊಂದ್‌ದ್ ಆ ಎರಡ್ ಗೂಡೆಗಳ ನಮ್ಮ ಮನೆಗೆ ತರೋಕ್ ಹಾಂಗೆಂತ. ಹೇಂಗೆ ಕೊಲ್ಲ್‌ದ್‌ಂತ ಆಲೋಚನೆ ಮಾಡ್ದೊ. ಮನೆ ಬಾಗಿಲ್‌ಲಿ ಒಂದ್ ಬಾಮಿ ತೆಗ್ಸಿದೊ. ಆ ಬಾಮಿಗೆ ಅಂವನ ಕಳ್ಸದ್. ಅಲ್ಲಿ ನಮ್ಮ ಬೇಕಾದ ಎಲ್ಲಾ ಸಂಸಾರ ಒಳೊ. ಅಲ್ಲಿಗೆ ನೀ ಹೋಗಿ ಬರೋಕ್. ನೀ ಅಪ್ರೂಪದ ಮೊಸ್ಸ್ಯ ಬಂವದ್. ನೀ ಅಲ್ಲಿಗೆ ಹೋಗಿ ಬರೊಕ್‌ಂತ ಎಲ್ಲ ಸೇರಿ ಮಾತ್‌ಕತೆ ನಡ್ಸಿದೊ. ಅಷ್ಟರ್ಲಿ ಈ ಸೊಪ್ಪಿನ ಗೂಡ್‌ಲಿ ಇದ್ದ ಗೂಡೆ. ನೀವ್ ರಾಜರ ಮನೆಹಿಂದೆ ಹೋಗಿದ್ ರಾತ್ರೆ ಒಂದ್ ಹೆಗ್ಗಣವ ಮೊರಿ ತಂದ್ ಕೊಡೊಕ್‌ಂತ ಹೇಳ್ತ್. ಆತ್ ತಂದ್‌ಕೊಟ್ಟೆನೆಂತ ಹೇಳಿ, ಇಂವ ರಾಜನ ಮನೆ ಹಿಂದೆ ಬಂದ್ ಒಂದ್ ಹೆಗ್ಗಣದ ಮೊರಿನ ತಂದ್‌ಕೊಟ್ಟತ್. ಈ ಗೂಡ ಅದ್ಕೆ ಬೇಕಾದ ಬುದ್ಧಿ ಬಾಕಿದ್ದದ್ದೆಲ್ಲಾ ಕಲ್‌ಸ್ತಾ ಇತ್ತ್. ಕಳ್ಸಿ ಏನ್ ಹೇಳ್ತ್.

ಒಂದ್ ದಿನ. ನೀ ರಾಜರ ಮನೆಗೆ ಹೋಗಿ ಒಂದ್ ಬ್ಯಾಗ್, ಬೂಡ್ಸ್, ಶರ್ಟ್ ಎಲ್ಲ ತಕೊಂಡ್ ಬರೊಕ್‌ಂತ ಈ ಗೂಡೆ ಹೇಳಿ ಕಳ್ಸಿತ್. ಈ ಹೆಗ್ಗಣ ಮರಿ ದಿನಕ್ಕೆ ಒಂದೊಂದೇ ತೆಕೊಂಡ್ ಬಂದ್ ಆಲ್ಲಿ ಕೊಟ್ಟತ್. ಸೊಪ್ಪ್‌ನ ಗೂಡ್‌ಂದ ಬಾಮಿ ವರೆಗೆ ಮಾಳಿ ತೆಗ್ಸಿತ್. ಈ ಗೂಡೆ. ದಾರಿ ಮಾಡ್ಸಿತ್. ಈ ಹೆಗ್ಗಣನ ಮರಿನ ಕೈಲೇ. ಒಂದ್ ದಿನ ರಾಜ ಇಂವನ ಮನೆಗೆ ಕರ್ಸಿದೊ. ನೀ ಬರೊಕ್. ನೀ ಇಂದೇ ಅಲ್ಲಿಗೆ ಹೊಕ್ಕ್. ಇವರ ಒಳಗೆ ಹೋದರೆ ನಮ್ಮ ಸಂಸಾರದವ್ ಒಳಗೆ ಒಳೊ. ಅವರೊಟ್ಟಿಗೆ ನೀ ಮಾತಾಡಿ ಬರೊಕ್. ನಿಂಗೆ ಬೇಕಾದ್ದ್ ಎಲ್ಲ ಅಲ್ಲಿಂದ ಕೊಟ್ಟವೆ. ಹ್ಯಾಟ್, ಬೂಟ್, ಬ್ಯಾಗ್. ಪ್ಯಾಂಟ್, ವಾಚ್ ಎಲ್ಲ ಕೊಟ್ಟವೆ. ಅದರ ಎಲ್ಲ ತಕಂಡ್ ನೀ ಬರೊಕ್. ಹಾಂಗೆಂತ ಹೇಳಿ ಅಂವನ ಕರ್ಸಿದೊ. ಅಂವ ಬಾತ್ ಅಲ್ಲಿಗೆ ಹೋತ್. ಇಳ್ತ್. ಇಳ್ದಕೂಡ್ಲೆ ದಾರಿನ ಮೊಣ್ಣ್ ಮುಚ್ಚಿದೊ. ಮೊಣ್ಣ್ ಮುಚ್ಚಿ ಆಕನ ಅಂವ ಮೊಣ್ಣ್ ಅಡಿಗೆ ಆತಲ್ಲೆ. ಇಂವ ಹೋದರಲ್ಲೇ ಹೆಗ್ಗಣ ಮಾಡಿಸಿದ ಮಾಳಿಲಿ ಸೊಪ್ಪ್‌ನ ಗೂಡಿಗೆ ಬಂದ್ ಸೇರ್ತ್.

ಮೂರ‘ ದಿನ ಕಳ‘ದ್ದ ಬನ್ನಂತ ಹೇಳಿ ಹೋಗೊಳೊಂತ ನೀ ಅವರೊಟ್ಟಿಗೆ ಹೇಳೊಕ‘. ಹಾಂಗೆಂತ ಈ ಸೊಪ್ಪ‘ನ ಗೂಡ‘ಲಿದ್ದ ಗೂಡೆನೊಟ್ಟಿಗೆ ಹೇಳ್ದೊ. ಇಂವ ಆ ಬಾವಿಗೆ ಇಳ್ದ ಕೂಡ್ಲೆ ಇವ‘ ಮೊಣ್ಣ‘ ಮುಚ್ಚಿದ‘ ಆ ಗೂಡೆಗಳ ಮನೆಗೆ ಕರ್ದವೆ. ಬನ್ನಿಂತ. ಇಲ್ಲೆ. ಬಾಕ್ಕೆ ಮೂರ‘ ದಿನ ಕಳಿಯೊಕ‘. ಮೂರ‘ ದಿನ ಕಳಿಯುದೆ ನಾವ‘ ಬಾಕ್ಕಿಲ್ಲೆ. ಅವ‘ ಹೇಳಿ ಹೋಗೊಳೊ. ಹಾಂಗೆಂತ ಹೇಳಿ ಗೂಡೆಗ ನಿಂತೊ. ಆಗ ಅವ‘ಕ್ಕೆ ಧೈರ ಆತ‘. ಮೂರ‘ ದಿನ ಅಲ್ಲ ಆರ‘ ದಿನ ಕಳ್ದರ‘ ಇಂವ ಹೋದಂವ ಬಾಕಿಲ್ಲೆಂತ. ಮೊಣ್ಣ‘ಡಿಗೆ ಹೋದಂವ ಬಾಕೆ ಉಟ್ಟಂತ ಅವ‘ ಧೈರಲಿದ್ದೊ. ಮೂರನೆ ದಿನ ಆಕನ ಇಂವ ಪ್ಯಾಂಟ‘ ಹಾಕಿ, ಬೂಡ್ಸ್ ಹಾಕಿ, ವಾಚ‘ಕಟ್ಟಿ ಗಡ್ದ‘ಲಿ ಅವರ ಮನೆಗೆ ಹೋತ‘. (ಇದೆಲ್ಲ ತಂದ‘ ಕೊಟ್ಟದ್ ಯಾರ್. ಈ ಹೆಗ್ಗಣ ಮೊರಿ)

ಹೊ ! ಬಂವ. ಬಾದ‘ಬುಟ್ಟೆ. ಏನ್ ಸಮಾಚಾರ. ಸಮಾಚಾರ ಬಾರೀ ಖುಷಿ ಅಲ್ಲಿ. ಎಲ್ಲವ್ ಹೊಕ್ಕಡ. ಒಬ್ಬ ಸಹ ಉಳಿಯುದೆ ನೀವೆಲ್ಲವ‘ ಹೋಕ್ಕಡ. ಹಾಂಗೆಂತ. ಯಾಗ ಹೋಕ್ಕ್ ? ಒಂದ್ ವಾರದೊಳಗೆ ಹೊಕ್ಕ್ ? ಹಾಂಗಾರೆ ಅದರಿಂದ ಮೊಣ್ಣ್ ತೆಗಿಯೊಂಬಂತ ಹೇಳಿ ಬಾಮಿಂದ ಎಲ್ಲ ಮೊಣ್ಣ್ ತೆಗ್ದೊ. ಆ ಬಾಮಿಂದ ಮೊಣ್ಣ್ ತೆಗಿಯಕನ ಈ ಹೆಗ್ಗಣ ಮೊರಿ ಮಾಡಿಸಿದ ದಾರಿನ ಎಲ್ಲಾ ಈ ಗೊಡೆ ಮುಚ್ಚಿಸಿತ್. ಹೆಗ್ಗಣ ಮೊರಿನ ಕೈಲಿ ರಾತ್ರೆ ಆ ದಾರಿನ ಎಲ್ಲ ಅಡ್ಡಿಸಿತ್. ಇವ್ ಒಂದ್ ವಾರ ಕಳ್ದ್ ಎಲ್ಲವ್ ಹೋದೊ ಅದರೊಳಗೆ. ಎಲ್ಲವ್ ಅದರೊಳಗೆ ಹೋಗಿ ಆಕನ ಇಂವ ಮೊಣ್ಣೆಲ್ಲ ಅದರೊಳಗೆ ಮುಚ್ಚಿತ್. ಮೊಣ್ಣೆಲ್ಲ ಮುಚ್ಚಿ ಆಕನ ಮತ್ತೆ ಆ ಮನೆ ಎಲ್ಲ ಅಂವಂಗೆ ಆತಲ್ಲ. ಅವೆಲ್ಲ ಅದರ ಅಡಿಗೆ ಆದೊ. ಆ ಮನೆಲಿ ಇವ್ ಮೂರ್ ಜನ ಹಾಂಗೇ ಇದ್ದೊ. ಈ ಎರಡ್ ಗೊಡೆಗಳೂ, ಇಂವನೂ, ಅಣ್ಣ ತಂಗೆಕ ಮೂರ್ ಜನ ಇದ್ದೊ. ಒಂದ್ ದಿನ ಇಂವ ಹೇಳ್ತ್. ಇನ್ನ್ ಹೀಂಗೇ ಇರ್ದ್ ಸರಿಯಲ್ಲ. ಇನ್ನ್ ಇವರ್ನ ಮೊದ್‌ವೆ ಆಕ್ಕನಂಗೆ. ಊರಿಗೆಲ್ಲ ಓಲೆ ಕೊಟ್ಟ್ ಗಂಭೀರಲಿ ಒಂದ್ ಮೊದ್‌ವೆ ಆಕ್ಕ್. ಹಾಂಗೆಂತ ಹೇಳಿ ಮೊದ್‌ವೆಗೆ ತಯಾರ್ಸಿತ್. ಬೇಕಾದ ಚಪ್ಪರ ಹಾಕ್ಸಿತ್. ಜನಗಳಿಗೆ ಓಲೆ ಕೊಡ್‌ವಲ್ಲಿ ಓಲೆ ಕೊಟ್ಟತ್. ಬಾಯಿಮಾತ್ ಹೇಳ‘ವಲ್ಲಿ ಬಾಯಿಮಾತ್ ಹೇಳ್ತ್. ಮೊದ್‌ವೆಗೆ ಜನ ಸೇರ್ದೊ.

ಇಂವನ ಅವ್ವ ಅಪ್ಪಂಗೆ (ರಾಜ ರಾಣಿಗೆ) ಹೇಳ್ದೊ. ಇಂವನ ಅತ್ತಿಗೆ ಅಣ್ಣಂದರ್ ಬಂದವೆ. ಮೊದ‘ವೆಗೆ ಊಟ ತಯಾರ್ಸಿದೊ. ಎಲೆಕೊಡಿ ಊಟ ಕೊಡಿಂತ ಹೇಳ್ತ್ ಜನಂಗಳಿಗೆ. ಒಂದ್ ಕರೆಂದ ಎಲೆ ಕೊಟ್ಟ್‌ಕಂಡ್ ಬಂದೊ. ಇನ್ನೊಂದ್ ಕರೆಲಿ ಕುಡ್ಪ‘ಗೆ ಅನ್ನ ಇಕ್‘ವಲ್ಲಿ ಹಣವನ್ನೇ ಇಳ್ಗಿದ‘ ತೆಡ್ವೆಲಿ ಹಣವನ್ನೇ ಇಕ್‘ತಾ ಬಂದೊ. ಹಣ ಇಕ್ಕಿಕಂಡ‘ ಬಂವರೆ ಅದರ ಹೇಂಗೆ ಊಟ ಮಾಡ್ದ್. ಅವರ ಎಲ್ಲ ಮುದ್ದೆ ಮಾಡಿ ಹಿಡ್ಕೊಂಡೊ. ಇದರ ಊಟ ಮಾಡಿಕೆ ಬೊತ್ತ್ಂತ.

ನಾವ್‌ಗೆ ಹಣ ಸಿಕ್ಕಿದಲ್ಲಂತ ಹೇಳಿ ಮೆಲ್ಲ ಒಂದ್ ಕರೆಲಿ ಇಸಿಕೊಂಡೊ. ಪುನಃ ಒಂದೊಂದ್ ಎಲೆ ಕೊಟ್ಟ್ ಊಟ ಕೊಟ್ಟತ್. ಅವೆಲ್ಲ ಪೊರ್ಲ್ ಊಟ ಮಾಡ್ದೊ.

ಊಟ ಮಾಡಿ ಕುದ್ದಾಕನ ಕೇಳ್ತ್ ಅವರೊಟ್ಟಿಗೆ ಅಣ್ಣ ಅತ್ತಿಗೆ, ಅವ್ವ ಅಪ್ಪ ಇಷ್ಟ್ ಜನ ಬಂದೊಳೊ ಅಲ್ಲ, ಅವರೊಟ್ಟಿಗೆ ನಿಮ್ಮ ಸಮಾಚಾರ ಏನ್‌ಂತ ಕೇಳ್ತಾ ಉಟ್ಟ್. ಕೇಳಿ ಎಲ್ಲ ಆಕನ ಅವೆಲ್ಲ ಕೇಳ್ದೊ ನೀವ್ ಯಾವ ರಾಜ್ಯದ ಮಕ್ಕಂತ. ಕೇಳಿದ್ ಆಕನ ಅಂವ ಹೇಳ್ತ್ ನಾ ಇಂತ ರಾಜರ ಮಂಜ. ನನ್ನ ಅಯ್ಯನ್ ಅಪ್ಪನ್ ನೀವೇ. ನೀವೇ ಅಂದ್ ನನ್ನ ಮನೆಂದ ಕಳ್ಸಿದ್. ನಂಗೆ ಹಣದ ಹುಗ್ಗಿ ಉಣೊಕ್. ದೇವಲೋಕದ ದೇವತೆನ ತರೊಕ್, ಬೆದ್‌ದೊಳಗಿದ್ದ ಚದ್‌ರಂಗಿನ ತರೊಕ್‌ಂತ.ಅದಕ್ಕೆ ಹಣದ ಹುಗ್ಗಿ ಊಟ ಮಾಡಿಕೆ ಸಾಧ್ಯ ಇಲ್ಲೆ. ದೇವಲೋಕದ ದೇವತೆನ ತಾಕ್ಕೊ ಸಾಧ್ಯ ಇಲ್ಲೆ. ಬೆದ್‌ರ್‌ನೊಳಗಿದ್ದ ಚೆದ್‌ರಂಗಿನ ತಾಕ್ಕೊ ಸಾಧ್ಯ ಇಲ್ಲೆ. ನೀ ಹೋಗ್ ನನ್ನ ಮನೆಂದಂತ ಹೇಳಿದ ನನ್ನ ಅಪ್ಪ ನೀವೇಂತ ಹೇಳ್ತ್. ಹೇಳಿಯಾಕನ ಅಪ್ಪಂಗೆ ಒಪ್ಪದೇ ಉಪಾಯ ಇಲ್ಲೆ. ಹೌದ್‌ಂತ ಹೇಳಿ ಅಪ್ಪ ಒಪ್ಪಿಕನ್ತ್. ಆದಿನ ಹಾಂಗೆಂತ ಆದರೆ ನಾವೆಲ್ಲ ಹೋದವೆಂತ ಹೇಳಿ ಅವೆಲ್ಲ ಹೊರ್ಟ್ ಹೋದೋ ಅವೆಲ್ಲ ಹೊರ ಡಿಕನ ಇಂವ ಹೇಳ್ತ್ ಅವ್ವ ನಿಲ್ಲೊಕ್. ಹೊಕೆ ಬೊತ್ತ್. ಇನ್ನ್ ಹತ್ತ್‌ದಿನ ಕಳ್ದ್ ಅಪ್ಪ ಹೋದ್‌ಂತ ಅವ್ವನ ನಿಲ್ಸಿಕನ್ತ್. ಅಣ್ಣ ಅತ್ತಿಗೆಕ್ಕ ಅಪ್ಪ ಇಷ್ಟ್‌ಜನ ಅವರ ಮನಗೆ ಹೋದೊ. ಈ ಅವ್ವ ಎರಡ್ ಸೊಸೆ ಮಂಜ ಮನೆಲೇ ಇದ್ದೊ. ಒಂದ್ ದಿನ ಮಂಜ ಶಿಕಾರಿಗೆ ಹೊರ್ಟ್ ಹೋತ್. ಶಿಕಾರಿಗೆ ಹೊರ್ಟ್ ಹೋಗಿ ಆಕನ ಈ ಅವ್ವ ಈ ಸೊಸೆಕಳ ಪೆಟ್ಟಿಗೆ ತೆಗ್ದ್ ಎಲ್ಲ ನೋಡ್ದೊ. ನೋಡಿ ಆಕನ ಈ ಸೀರೆ ಒಂದ್ ಬಾರೀ ಲಾಯಿಕ್ ಉಟ್ಟ್. ಅಂದ್ ಇಂವ ತೆಗ್ದ್ ಇಸಿದ ಸೀರೆ. ಛೆ ! ನನ್ನ ಇಂತ ಸೊಸೆ ಈ ಸೀರೆನ ಪೆಟ್ಟಿಗೆಲಿ ಇಸಿದ್ ಇದರ ಉಡೊಕ. ಹಣವನ್ನೇ ಊಟಕ್ಕೆ ಬಳ್ಸ ಆಗುಟ್ಟ್. ಇದರ ಯಾಕೆ ಪೆಟ್ಟಿಗೆಲಿ ಇಸುದ್ ಸೊಸೆ ಉಡೊಕ್‌ಂತ ಆಸೊಸೆಗೆ ಉಡಿಗೆ ಕೊಟ್ಟತ್. ಅವ್ವ. ಉಡಿಕೆ ಕೊಟ್ಟ ಕೂಡಲೆ ಅದ್ ಉಟ್ಟತ್ ಅದ್ ಹೋತ್. ಈ ಮಂಜ ಬಾಕ್ಕೆ ಆಕನ ಸೊಸೆ ಎಲ್ಲಿ ಉಟ್ಟ್. ಬಂದ್‌ಕೇಳ್ತ್. ಎಲ್ಲಿಗೆ ಹೋಗುಟ್ಟ್‌ಂತ. ನಾಪ್ಗ ಗೊತ್ತಿಲ್ಲೆ. ಪೆಟ್ಟಿಗೆ ನೋಡ್ತ್. ನೋಡ್ರೆ ಸೀರೆ ಇಲ್ಲೆ. ಸೀರೆ ಯಾರ್ ಕೊಟ್ಟದ್. ಸೀರೆ ಅತ್ತೆ ಕೊಟ್ಟದ್‌ಂತ ಇಂವನ ಮತ್ತೊಂದ್ ಹೆಣ್ಣ್ ಹೆಳ್ತ್. ಚದ್‌ರೆಂಗಿ. ಅತ್ತೆ ಸೀರೆ ಕೊಟ್ಟೊ. ಅಕ್ಕ ಉಟ್ಟ್‌ದ್ ಹೋತ್‌ಂತ. ನಾ ಇನ್ನ್ ತರೊಕಾಗಿದ್ದರೆ ಏನ್ ಕಷ್ಟ ಬರೋಕ್. ನಾ ಹೇಂಗೆ ತಾದ್. ಎಲ್ಲಿಗೆ ನಾ ಹೋದ್. ಇಂತ ಕಷ್ಟಕ್ಕೆ ನನ್ನ ಅವ್ವ ಹಾಕಿ ಬುಡ್ತಿಲ್ಲೆ. ನೀ ಹೋದ್ ಬೇಡವ್ವ ಹತ್ತ್‌ದಿನ ನಿಲ್ಲ್‌ಂತ ಹೇಳ್ದಲ್ಲಿಗೆ. ಇಪ್ಪೊಂದ್ ದಾರಿ ಮಾಡಿ ಹಾಕಿತಲ್ಲಂತ ಅಲ್ಲಿಂದಲೇ ಹೊರಟ್ ಹೋತ್ ಅಂವ.

ಹೋಗಿ ಹೋಗಿ ಹೋಗಿ ಎಲ್ಲಿ ಅವರ ಮನೆ ಏನ್‌ಂತ ಗೊತ್ತಿಲ್ಲೆ. ದಾರಿಲಿ ಹೋಕನ ಬೀರಿಕಿಚ್ಚಿ ಕಾಡಿಗೆ ಬಿದ್ದ್‌ದ್ ಈ ಚವ್‌ಳಿಗ ಒಂದ್ ಕರೆಲಿ ಬೊಬ್ಬೆ ಹಾಕಿ ಕೊಂಡ್ ಒಳೊ. ಅಣ್ಣ ನಾವ್‌ಗ್ ಒಂದ್ ಮನೆ ತೋರ್ಸಿ. ನಾವ್‌ಗೆ ಎಲ್ಲಾರ್ ನಾಲ್ಕ್ ಸೊಪ್ಪಿದ್ದಲ್ಲಿ ತಕೊಂಡೋಗಿ ಬುಡಿ. ನಾವ್ ಬಾರಿ ಕಷ್ಟಲಿ ಒಳೊಂತ ಬೊಬ್ಬೆ ಹಾಕಿ ಕೊಂಡ್ ಒಳೊ. ಇಂವ ಒಂದ್ ಸೀರೆ ತುಂಡಿಗೆ ಆ ಚವ್‌ಳಿಗಳ ಎಲ್ಲ ಹಿಡ್ದ್ ಹಾಕಿದ್ ಕಟ್ಟಿ ತಕೊಂಡ್ ಹೋತ್. ತಕೊಂಡೊಗಿ ನಾಲ್ಕ್ ಸೊಪ್ಪಿದ್ದಲ್ಲಿ ಅವರ ಬುಟ್ಟತ್. ಮತ್ತೊಂದ್ ಕರೆಲಿ ಹೋಕನ ಬೀರಿ ಕಿಚ್ಚಿ ಬಂದ್ ಪಿಜಿನ್‌ಗಳಿಗೆ ಜಾಗ ಇಲ್ಲದೆ ಅವ್ ಬಿದ್ದ್ ಮರ್ಬ್ಟವೆ. ಅಣ್ಣ ನಾವ್ಗೆ ಒಂದ್ ದಾರಿ ತೋರ್ರ್ಸೊಕ್. ಎಲ್ಲಾರ್ ಕರ್ರೊಂಡ್ ಹೋಗಿ ನಮ್ಮ ಬುಡೊಕ್‌ಂತ. ಅವರ್ನೂ ಒಂದ್ ಕರೆಲಿ ತೆಕೊಂಡೋಗಿ ನಾಲ್ಕ್ ವರ್ಗ ಇದ್ದಲ್ಲಿ ಬುಟ್ಟತ್.

ಅದಕ್ಕಿಂದ ಮುಂದೆ ಹೋಕನ ಒಂದ್ ಕುಂಬ್ ಮರಲಿ ಅಡಿಂದಲೇ ಕಿಚ್ಚಿ ಹೋಗ್‌ಟ್ಟ್. ಮೇಲೆ ಚೂರ್ ಬಾಕಿ ಉಟ್ಟ್. ಅಲ್ಲಿ ಒಂದು ದುಂಬಿ ನಾಲ್ಕ್ ಮರಿಗಳ ಮಾಡಿ ಅದ್ ಮರ್ಬ್ಟದೆ. ಗೋಳಾಡ್ತೆ. ಇಂವ ಎಲ್ಲಿಂದಲೋ ನೀರ್ ತಂದ್ ಹಾಕಿ. ಆ ಕಿಚ್ಚಿನ ಕೆಡ್ಸಿ ಅವರ ಬೊದ್ಕ್‌ಸಿತ್. ಅಲ್ಲಿಂದ ಮುಂದೆ ಹೋತ್. ಅಲ್ಲಿಂದ ಮುಂದೆ ಹೋಕನ ಒಂದ್ ಪಳ್ಳಲಿ ಎರಡ್ ಗ್ಲಾಸ್‌ನಷ್ಟ್ ನೀರ್ ಉಟ್ಟ್. ಅಲ್ಲಿ ಒಂದ್ ಸೇರ್ ಕಪ್ಪೆಗ ಮರ್ಬ್ಟವೆ. ನೀರಿಲ್ಲದೆ. ಅಣ್ಣ ನೀವ್ ಎಲ್ಲಿಗೆ ಹೋಗೋವು. ನಮ್ಮ ಒಮ್ಮೆ ತಕೊಂಡೋಗಿ ನೀರಿದ್ದಲ್ಲಿ ಬುಟ್ಟ್ ಬುಡಿಂತ ಹೇಳ್ದೆ. ಈ ಸೀರೆ ತುಂಡ್‌ಲಿ ಕಪ್ಪೆಗಳ ಎಲ್ಲ ಹಾಕಿ ತಕಂಡೋಗಿ ನೀರಿದ್ದಲ್ಲಿ ಬುಟ್ಟತ್ ಅವರ. ಅದಕ್ಕಿಂತ ಆಚೆಗೆ ಹೋಕನ ಒಂದ್ ಪಳ್ಳಲಿ ನಾಲ್ಕ್ ಯಾಮೆಗ ಬಿದ್ದ್ ಮರ್ಬ್ಟವೆ. ನೀವ್ ಎಲ್ಲಿಗೆ ಹೋಗೋವ್ ಅಣ್ಣ. ನಾವ್‌ಗೆ ಒಂದ್ ದಾರಿ ತೋರ್ಸಿ ಬುಡಿ. ನೀರಿಲ್ಲೆ. ನಮ್ಮ ಒಮ್ಮೆ ನೀರಿದ್ದಲ್ಲಿ ತಕೊಂಡೋಗಿ ಬುಡಿ ಹಾಂಗೆಂತ. ಅದುಂತ ಹೇಳಿದ್ ಅವರ್ನೂ ನೀರಿದ್ದಲ್ಲಿ ತಕೊಂಡೋಗಿ ಬುಟ್ಟತ್. ಮತ್ತೆ ಅದಕ್ಕಿಂತ ಮುಂದೆ ಹೋಕನ ಒಂದ್ ಹೊಟ್ಟ್ ಬಾಮಿಗೆ ಹಂದಿಗ ಬಿದ್ದ್ ಬೊಬ್ಬೆ ಹಾಕ್‌ವೆ. ಅಣ್ಣಾ ನಮ್ಮ ಒಮ್ಮೆ ಮೇಲೆ ಎತ್ತಿ ಹಾಕಿ ಬುಡಿ. ನಾವ್ಗೆ ದಾರಿ ಇಲ್ಲೆಂತ. ಹೇಂಗೆ ಈ ಹಂದಿಗಳ ತೆಗ್ದ್ ಬಾಮಿಂದ ಹಾಕುದ್. ಅಂವ ಹೇಂಗೋ ಎಳ್ಳಿ ಜರ್ಸಿ ಎಳ್ಳಿ ಜರ್ಸಿ ಕಲ್ಲ್ ಕೊದಂಚಿ ಹಾಕಿದ್ ಅವರ ಹೇಂಗಾರ್ ಮೇಲಕ್ಕೆ ಹಾಕಿತ್ ಈ ಹಂದಿಗಳಎಲ್ಲ ಮೇಲೆ ಗುಡ್ಡೆಗೆ ಹತ್ತಿಸಿ ಬುಟ್ಟತ್ ಹತ್ತಿಸಿ ಬುಟ್ಟ್ ಇಂವ ಹೋತ್.

ಹೋಗಿ ಹೋಗಿ ದೇವತೆಗಳ ಅರಮನೆಗೆ ಹೋತ್. ಹೋಗಿ ಆಕನ ಈ ದೇವತೆಗ ಕೇಳ್ದ್ವೊ. ಹೋ... ನೀವ್ ಎಲ್ಲಿಂದ ಬಂದದ್. ನೀವ್ ಏನಾಗಿ ಬಂದ ದ್‌ಂತ. ನಾ ಬಂದದ್ ನನ್ನ ಗೂಡೆ ಇಲ್ಲಿಗೆ ಬಂದುಟ್ಟ್ ಹಾಂಗೆ. ನಿಮ್ಮ ಗೂಡೆ ಬಂದ್‌ಟ್ಟ ಇಲ್ಲಿಗೆ. ನಿಮ್ಮ ಗೂಡೆನ ನೀವ್‌ಗೆ ಕೊಡಕಾರೆ ಏಳ್ ಮುಡಿ ರಾಗಿ.

ಏಳ್ ಮುಡಿ ಸಾಸಿವೆ ಮಿಶ್ರ ಮಾಡಿ ಇಲ್ಲಿ ಈ ಕೋಣೆಲಿ ಇಸ್‌ವೊ. ಬೆಳಗಾಕನ ನೀವ್ ಅದರ ಬೇರೆ ಬೇರೆಮಾಡಿ ಕೊಡೊಕ್. ಅಲ್ಲಂದ್ರೆ ನೀವ್ ಈಗ ಬಸ್ಮ ಅವರಿಂತ ಹೇಳ್ದೊ. ಆದುಂತ ಹೇಳ್ತ್. ಕತ್ತಲೆ ಕೋಣೆಗೆ ಇಂವನ ಸೇರ್ಸಿ ಬಾಗಿಲ್ ಹಾಕಿ ಬುಟ್ಟೊ. ಈ ಏಳ್ ಮುಡಿ ರಾಗಿ, ಏಳ್ ಮುಡಿ ಸಾಸಿವೆನ ನಾಹೇಂಗೆ ಬೊಳ್ಪಾಕನ ಬೇರೆ ಬೇರೆ ಮಾಡ್ದ್. ನಾ ಬಾಕನ ಒಂದ್ ಉಪಕಾರ ಮಾಡಿ ಬಂದೊಳೆ. ಪಿಜಿನ್‌ಗಳಿಗೆ ಜಾಗೆ ಇಲ್ಲದೆ ನಾಲ್ಕ್ ವರ್ಗ್ ಇದ್ದಲ್ಲಿ ಬುಟ್ಟ್ ಬಂದೊಳೆ. ಅವ್ ಆದರೂ ಇಂದ್ ಸಹಾಯ ಆವೊ ನಂಗೆ. ಹಾಂಗೆಂತ ಇಂವ ಮನಸ್ಸ್‌ಲಿ ಗೇಣ ಮಾಡಿಕನ್ತ್. ಒಂದ್ ಕಾಲ್ ಗಂಟೆ ಕಳಿಯುಕನ ಎಷ್ಟೋ ಪಿಜಿನ್‌ಗೆ ಬಂದ್ ಇದ್ಕೆ ಸೇರ್ದೊ. ಸೇರಿದ್ ರಾಗಿ ಬೇರೆ ಸಾಸ್‌ವೆ ಬೇರೆಂತ ಬೊಳ್ವಾಕನ ಈ ಏಳ್ ಮುಡಿ ರಾಗಿನೂ ಸಾಸ್‌ವೆನೂ ಬೇರೆ ಬೇರೆ ಮಡ್ದೊ. ಅವು ಬಾಗಿಲ್ ತೆಗ್ದ್ ನೋಡ್ವೆ. ದೇವತೆಗ. ನೋಡ್ರೆ ಎರಡೂ ಬೇರೆ ಬೇರೆ ಉಟ್ಟ್. ಹೋ.... ಇಂವ ಜನ ಮೋಸ ಇಲ್ಲೆ.

ಆದರೂ ನಿನ್ನ ಗೂಡೆನ ನಿಂಗೆ ಕಳ್ಸೊಕ್‌ಂತಿದ್ದರ ಏಳ್ ಮುಡಿ ಗದ್ದೆ ಗೋರಿಕೆ ಉಟ್ಟ್. ಇಂದ್ ಕತ್ತಲೆಂದ ನಾಳೆ ಬೊಳ್ಪಾಕ್ಕೆ ಮುಂದೆ ಗೋರಿದ್ ಬಿತ್ತಿ ಅಕ್ಕ್. ಹಾಂಗೆಂತಿದ್ದರೆ ನಿನ್ನ ಗೂಡೆನ ಕಳ್ಸವೊ ನಾವ್. ಕತ್ತಲೆಆಕನ ಗದ್ದೆ ಪುಣೆಲಿ ನಿಂತ್‌ದ್ ಆಲೋಚನೆ ಮಾಡ್ತ್. ಈ ಏಳ್ ಮುಡಿ ಗದ್ದೆನ ಹೇಂಗೆ ಇಂದ್ ಗೋರಿದ್ ನಿತ್ತಿ ಬೊಳ್ಪಾಕನ ಆದ್. ಆಕಿಲ್ಲೆ ಇದ್. ನಾ ಬಾಕನ ದಾರಿಲಿ ಕೆಲವ್ ಜೀವಾದಿಗಳಿಗೆ ಸಹಾಯ ಮಾಡ್ತಾ ಬಂದೊಳೆ. ನಂಗೂ ಒಂದ್ ಉಪಕಾರ ಅವ್ ಆವೊಂತ ಗೇಣ ಮಾಡಿ ಸುಮ್ಮನೇ ಕುದ್ದತ್ ಗದ್ದೆ ಪುಣೆಲಿ. ಹಂಗಾ ಹೊತ್ತಿಗೆ ಪತ್ತ್ ಐನೂರ್ ಹಂದಿಗಳೂ, ಹತ್ತೈವತ್ ಯಾಮೆಗಳೂ ಬಂದ್ ಕೆಲ್ಸ ಮಾಡ್ದೊ. ಪೂಟೆ ಕೆಲ್ಸ ಮಾಡಿದ್. ಪುಣೆ ಹಾಕಿದ್ ಗದ್ದೆ ಗೋರಿದ್ ಎಲ್ಲ ಕೆಲ್ಸ ಮಾಡಿದ್. ಬೊಳ್ವಾಕನ ಗದ್ದೆ ಕೆಲ್ಸ ಎಲ್ಲಾ ಆತ್.

ದೇವತೆಗ ಬಂದ್ ನೋಡ್ದೊ. ಗದ್ದೆ ಕೆಲಸ ಎಲ್ಲ ಆಗುಟ್ಟ್. ಇಂವ ಜನ ಮೋಸ ಇಲ್ಲೆ. ಹಾಗೆಂತ ಹೇಳ್ದೊ. ಇನ್ನಾದರೂ ನಾವ್ ಕಳ್ಸಿಕಿಲ್ಲೆ. ನೀವ್‌ಗೆ ಕಳ್ಸಿಕೆ ನಾವ್ಗೆ ಇನ್ನೂಕ್ಕ ಕೆಲ್ಸ ಉಟ್ಟ್. ನಮ್ಮ ಓ ಅದೊಂದ್ ಎಲೆ ಬೋಳ್ಳಿಲಿ ಎಲೆ ಉಟ್ಟ್. ಒಂದ್ ಇಪ್ಪತ್ತೈದ್ ಸೂಡಿ ತಂದ್ ಕೊಡೊಕ್ ಈಗಂತ ಹೇಳ್ದೊ. ನೆಟ್ಟ ಮೇಲೆ ಅದರಂದ ಎಲೆ ಕ್ಕೊಯ್ದಂವ ಇಲ್ಲೆ. ಅಲ್ಲಿಗೆ ಮೊನ್ನ ಆದಂವ ಹೋಗಂವನೂ ಇಲ್ಲೆ. ಹತ್ತ್ ಮಾರ್ ಹಿಂದೆ ಹೋಕನ ಚವ್‌ಳಿಗ ಬಂದ್ ಕಚ್ಚ್‌ವೆ. ಹೋಗಿ ನಿಂತ್ ನೋಡ್ರೆ ಎಲೆ ಬೊಳ್ಳಿಗೆ ಹೋಕ್ಕೆ ಸಾಧ್ಯನೇ ಇಲ್ಲೆ. ನಾ ಹೇಂಗೆ ಇಪ್ಪತ್ತೈದ್ ಸೂಡಿ ಎಲೆ ತಂದ್ ಕೊಡ್ದ್. ಯಾರಾರ್ ಉಪಕಾರ ಆವೊ ನಂಗೆ ಹಾಂಗೆಂತ ಹೇಳಿ ಎಲೆಬೊಳ್ಳಿ ಬುಡಕ್ಕೆ ಹೋಗಿ ಆಕನ ಈ ಚವ್‌ಳಿಗ ಎಲ್ಲ ಕರೆಗೆ ನಿಂತೊ. ಬೇಕಾದಷ್ಟ್ ಎಲೆ ಕೊಯ್ಕನ್ತ್. ಎಲೆ ಕೊಯ್ದ್ ತಕೊಂಡ್ ಬಂದ್ ಕೊಟ್ಟತ್ ಮನೆಗೆ.

ಇಪ್ಪತ್ತೈದ' ಸೂಡಿನೂ ಅಲ್ಲ. ಮೂವತ್ತ್ ಸೂಡಿ ಎಲೆ ತಂದ' ಕೊಟ್ಟತ'. ಜನ ಇಂವ ಆದ'. ನಾವ' ಹೇಳ್ದಕ್ಕೆಲ್ಲ ಇಂವ ಕೆಲ್ಸಮಾಡಿ ಕೊಟ್ಟತ'. ಹಾಂಗೆಂತ ಹೇಳ್ದೊ ಏಳ್ ಸೀರೆನ ಬುಳ್ಗಿದೊ. ಬುಳ್ಗಿದ್ ಈ ಗೂಡೆಗಳ ಸಾಲಿಗೆ ಕುದ್ರ್‍ಸಿದೊ. ಕುದ್ರ್‍ಸಿ ಏಳ್ ಸೀರೆನ ಮುಚ್ಚಿ ಇಸಿದೊ. ಮುಚ್ಚಿ ಇಸಿ ಇದರ್‍ಲಿ ನಿನ್ನ ಗೂಡೆ ಯಾದ್‌ಂತ ಹೇಳಿ ನೀ ಮುಟ್ಬೊಕ್. ಬೇರೆ ಗೂಡೆಗಳ ನೀ ಮುಟ್ಟಕೆಬೊತ್ತ್. ಬೇರೆ ಗೂಡೆನ ನೀ ಮುಟ್ರೆ ನೀ ಇಲ್ಲೆ ಬಸ್ಮ ಆವೊ. ನಿನ್ನ ಗೂಡೆನ ನೀ ಮುಟ್ಬೊಕ್. ಹಾಂಗೆಂತ ಏಳ್ ಸೀರೆನ ಮೇಲೆ ಮೇಲೆ ಮೇಲೆ ಮುಚ್ಚಿಸಿದೊ. ಯಾವ ಗೂಡೆಂತ ನಾ ಹೋಗಿ ಮುಟ್ಟ್‌ದ್. ಯಾರಾರ' ಒಬ್ಬ ನಂಗೆ ಉಪಕಾರ ಮಾಡ್‌ವವ' ಇರುವೊ. ಇಷ್ಟೆಲ್ಲ ಕಷ್ಟಪಟ್ಟೆ ನಾ. ಅಪ್ಪಾಕನ ಈ ದುಂಬಿ ಉಟ್ಟಲ್ಲ. ಅದೇ ಗೂಡೆನ ತಲೆ ಸುತ್ತಿ ಬಂದ್ ಹಾರಾಡ್‌ತಾ ಉಟ್ಟ್. ಅಲ್ಲೇ ಕೈಹಾಕಿತ' ಅಂವ. ಕೈ ಹಾಕಿ ಎತ್ತಿ ಮೇಲೆ ತೆಕನ್ತ್. ಇದೇ ನನ್ನ ಗೂಡೆಂತ. ಸರಿ. ನಿನ್ನ ಗೂಡೆ ಹೌದ್‌ಂತ ಹೇಳ್ದೊ. ಗೂಡೆನ ಕರ್‍ಕನ್ತ್ ಇಂವ ಬಾತ' ಮನೆಗ. ಮನೆಗೆ ಬಂದ್ ಆವ್ ಪೊರ್‍ಲ್ಲಿ ಒಳೊ.

—ನೀವ್ ಹೋಗಿ ನೋಡಿ ಬನ್ನಿ.

೧.೮ ಜಾಣ ಅಳಿಲು – ಮುರಿದ ಬಾಲ : ಬಾಲದ ನೆಪದಲ್ಲಿ ಕತ್ತಿ, ಗಡಿಗೆ, ಸೌತೆಕಾಯಿ, ಗಾಣದೆತ್ತು ಮತ್ತು ಡೋಲನ್ನು ಪಡೆಯುವುದು.

[(ಗೌಕಜಕ – ೧೬) (ವರ್ಗ – ೧೭೦A)]

ಒಂದ' ಕುಂಡತ ಬೇಲಿ ಕರೇಲಿ ಹೋಕನ ಒಬ್ಬ ಬೇಲಿ ಹಾಕಿಕಂಡ್‌ಟ್ಟ್. ಅಪ್ಪಾಕನ ಕುಂಡತನ ಬೀಲಕ್ಕೆ ಮುಳ್ಳ್ ಹೆಟ್ಟಿತ್. ಮುಳ್ಹೆಟ್ಟಿಕನ ಹೇಳ್ತ್, ಅಣ್ಣಣ್ಣಾ ನನ್ನ ಬೀಲಕ್ಕೆ ಮುಳ್ಳ್ ಹೆಟ್ಟಿತಲ್ಲೇಂತ. ನೀವ' ಒಮ್ಮೆ ತೆಗಿನಿ ಅಣ್ಣಾಂತ. ಏ ನಿನ್ನ ಬೀಲ ಮುರ್‍ದ್ ಹೋದರೆ ನನ್ನ ಕತ್ತಿ ಕೇಳ್ವಂತ ಹೇಳ್ತ್. ನಾ ಕೇಳಿಕಿಲ್ಲೆ ಅಣ್ಣಾಂತ ಹೇಳ್ತ್. ಹೇಳಿ ತೆಗ್ತ್ ಮುಳ್ಳ್. ತೆಗಿಯುಕನ ಬೀಲ ಮುರ್‍ದ್ ಹೋತ'. ಅಣ್ಣಾಣ್ಣ ನನ್ನ ಬೀಲ ಕೊಟ್ಟಿಯಾ, ನಿನ್ನ ಕತ್ತಿ ಕೊಟ್ಟಿಯಾಂತ ಕೇಳ್ತ್. ಕತ್ತಿ ಕೊಟ್ಟತ'. ಕತ್ತಿ ತಕಂಡ್ ಹೋತ'. ಹೋಕನ ಒಬ್ಬ ಕುಂಬಾರ ಮೊಣ್ಣ್ ಮಾಂದಿದೆ. ಏ ಅಣ್ಣಣ್ಣ ನೀ ಎಷ್ಟ್ ಕೈಲಿ ಮೊಣ್ಣ್ ಮಾಂದುದ್. ಇಂದ ನನ್ನ ಕತ್ತಿಂತ ಹೇಳ್ತ್. ಕತ್ತಿ ಮುರ್‍ದ್ ಹೋದರೆ ನನ್ನ ಗಡ್ಗೆ ಕೇಳ್ವಂತ ಹೇಳ್ತ್. ನಾ ಕೇಳಿಕೆ ಇಲ್ಲೆಂತ ಹೇಳ್ತ್. ಹಾಂಗೆ ಮೊಣ್ಣ್ ಹೊಡ್ತ್, ಅಪ್ಪಾಕನ ಕತ್ತಿ ಮುರ್‍ದ್ ಹೋತ್. ಹ್ಞಾ. ನನ್ನ ಕತ್ತಿ ಕೊಟ್ಟಿಯಾ, ನಿನ್ನ ಗಡಿಗೆ ಕೊಟ್ಟಿಯಾಂತ ಕೇಳ್ತ್. ಗಡಿಗೆ ಕೊಟ್ಟತ್. ಗಡಿಗೆ ತಕಂಡ್ ಹೋತ್, ಹೋಗಿ ಆಕನ ಒಬ್ಬ ಸೋಂತೆಗೆ ಕೈಲೇ ನೀರ್ ಹೊಯ್ಯುದ್.

ಅಣ್ಣಾಣ್ಣ ನೀ ಕೈಲೆ ಎಷ್ಟ್ ನೀರ್ ಹೊಯಿವೊ. ಇಂದಣ್ಣ ನನ್ನ ಗಡ್ಗೆಂತ ಹೇಳ್ತ್. ನಿನ್ನ ಗಡ್ಗೆ ಒಡ್ದರೆ ನೀ ಸೋಂತೆಕಾಯಿ ಕೇಳ್ವೊ. ನಾ ಕೇಳಿಕಿಲ್ಲೆಂತ ಹೇಳ್ತ್ ಇಂವ. ನೀರ್ ಹ್ಯೊತ್. ಎರಡ್ ಸರ್ತಿಗೆ ಗಡಿಗೆ ಒಡ್ದ್ ಹೋತ್. ನನ್ನ ಗಡಿಗೆ ಕೊಟ್ಟಿಯಾ, ಸೋಂತೆಕಾಯಿ ಕೊಟ್ಟ್ಯಾಂತ ಕೇಳ್ತ್. ಇಂವ ಸೋಂತೆಕಾಯಿ ಕೊಟ್ಟತ್. ಹೋತ್ ತಕಂಡ್ ಹೋಗಿ ಹೋಗಿ ಒಂದ್ ಅಡ್ಕಕೆ ಎತ್ತಿಕನ ಅಲ್ಲಿ ತುಂಬ ದನ ಮಕ್ಕ. ದನ ಮೇಸಿಕಂಡ್ ಒಳೊ. ಅಣ್ಣಾಣ್ಣ ನಂಗೆ ಕುಡಿಯುಕ್ಯಾಗಿ ಬೊತ್ತ್‌ಲೆಂತ ಹೇಳ್ತ್. ನಿಂಗೆ ಕುಡಿಯುಕೆ ಆದರೆ ಈ ಗುಡ್ಡೆ ಮೊಗ್ದ್ ಆಚೆ ಗುಡ್ಡೆಗೆ ಹೋಕ್ಕ್ಯಂತ ಹೇಳ್ದೊ. ಇಂವ ಗುಡ್ಡೆಗೆ ಹೋತ್. ಸೋಂತೆಕಾಯಿನ ಇಸಿದ್ ಇಂವ ನೀರ್ ಎಲ್ಲ ಕುಡ್ದ್ ಬಾತ್. ಬಂದಾಕನ ಈ ಮಕ್ಕ ಸೋಂತೆಕಾಯಿನ ತಿಂದ್ ಇವರ ಜಿತ್ತ್ ಜೋಲಿನ ದನಂಗಳಿಗೆ ಕೊಟ್ಟೊಳೊ. ಏ ನನ್ನ ಸೋಂತೆಕಾಯಿ ಎಲ್ಲಿಉಟ್ಟ್ ಅಣ್ಣ. ಉಮ್ಮ. ನಾವ್‌ಗೆ ಗೊತ್ತಿಲೆ. ನಾವ್‌ಗೆ ಗೊತ್ತಿಲೆ. ನೀವ್ ತಿಂದೊಳರಿ. ನಿಮ್ಮ ದನಂಗಳ ಎಲ್ಲ ಕರಿನಿಂತ ಹೇಳ್ತ್. ದನಂಗಳ ಎಲ್ಲ ಬಂದ್ ನಿಲ್ಸಿದೊ. ಇಂವ ಬಾಯಿ ಬುಡ್ಸಿ ನೋಡ್ತ್. ನೋಡ್ಕನ ಒಂದ್ ಎತ್ತ್‌ನ ಬಾಯ್ಲಿ ಉಟ್ಟ್. ಆಗ ನಿನ್ನ ಎತ್ತ್ ಕೊಟ್ಟ್ಯಾ. ನನ್ನ ಸೋಂತೆಕಾಯಿ ಕೊಟ್ಟ್ಯಾ. ಎತ್ತ್‌ನ ಕೊಟ್ಟೊ ಮತ್ತೆ ಹೊಡ್ಕ್ಯಂಡ್ ಹೋತ್ ಹೋತ್, ಹೋಕನ ಒಬ್ಬ ಗಾನಿಗ ಎತ್ತ್‌ನ ಕಟ್ಟಿ ಗಾನ ಮಾಡ್ದೆ.

ಅಣ್ಣಣ್ಣಾ ನಿನ್ನ ಗಾನದ ಎತ್ತ್‌ನೊಟ್ಟಿಗೆ ನನ್ನದೊಂದ್ ಎತ್ತ್. ಗಾನಮಾಡಿಕೆಂತ. ನಿನ್ನ ಎತ್ತ್ ಸತ್ತ್ರೋದರೆ ನನ್ನ ಗಾನದ ಎತ್ತ್‌ನ ಕೇಳ್ವಾಂತ ಹೇಳ್ತ್. ನಾ ಕೇಳಿಕಿಲ್ಲೆಂತ ಹೇಳ್ತ್. ಕುಂಡತ. ಎರಡ್ ಸುತ್ತ್ ಬಾಕನ ಎತ್ತ್ ಸತ್ತ್ರೋತ್. ಗಾನದೆತ್ತ್‌ನ ಕೊಟ್ಟ್ಯಾ. ನನ್ನ ಎತ್ತ್‌ನ ಕೊಟ್ಟಿಯಾಂತ ಕೇಳ್ತ್. ಇಂವ ಗಾನದೆತ್ತ್‌ನ ಕೊಟ್ಟತ್. ಅತ್ತ ಹೋಕನ ಒಬ್ಬ ಡೋಲುಗಗ್ಗರ ಬೊಟ್ಟಿಕೊಂಡ್‌ಟ್ಟ್. ಪಾಡ್ತ್‌ನ ಹೇಳಿಕೊಂಡುಟ್ಟ್ ಒಬ್ಬ ದಿಕ್ಕ. ಅಣ್ಣಾಣ್ಣ ನೀ ಒಬ್ಬನೇ ಪಾಡ್ತ್‌ನ ಹೇಳಿಕೊಣೊಕ್ ಡೋಲ್ ಬೊಟ್ಟಿಕನಕ್ ಗಗ್ಗರ ಆಡಿಸಿಕೊಣೊಕ್. ನನ್ನ ಗಾನದೆತ್ತ್‌ನ ಕೊಟ್ಟನೆಂತ ಹೇಳ್ತ್. ಬೇಡ ಡೋಲ್ ಬೊಟ್ಟಿ ಬೊಟ್ಟಿ ಗಾನದೆತ್ತ್ ಸತ್ತರೆ. ಡೋಲ್ ಗಗ್ಗರ ಕೇಳ್ವಂತ ಹೇಳ್ತ್. ನಾ ಕೇಳಿಕಿಲ್ಲೆಣ್ಣಾಂತ ಹೇಳ್ತ್. ಹಾಂಗೆ ಕೊಟ್ಟತ್. ಇದ್ ಡೋಲ್ ಬೊಟ್ಟಿ ಬೊಟ್ಟಿ ಸತ್ತ್ರೊತ್. ನೀ ಡೋಲ್‌ಗಗ್ಗರ ಕೊಟ್ಟ್ಯಾ. ಅಲ್ಲ ನನ್ನ ಗಾನದೆತ್ತ್‌ನ ಕೊಟ್ಟ್ಯಾಂತ ಕೇಳ್ತ್. ಇಂವ ಡೋಲ್‌ಗಗ್ಗರ ಎಲ್ಲ ಕೊಟ್ಟತ್. ಕುಂಡತ ತಕನ್ತ್ ಬಾತ್. ಬೇಲಿಕರೆಲಿ ನಿಂತ್‌ಕಂಡ್ ನಾ ಕತ್ತಿಲಿ ಗೆದ್ದೆ ಥೈ ಥಕ ಥೈ. ಗಡಿಗೆಲಿ ಗೆದ್ದೆ ಥೈ ಥಕ್ಕ ಥೈ. ಸೋಂತೆಕಾಯಿಲಿ ಗೆದ್ದೆ ಥೈ ಥಕ್ಕ ಥೈಂತ ಹೇಳಿ ಕುಣಿದು. ಎತ್ತ್‌ಲಿ ಗೆದ್ದೆ ಥೈ ಥಕ್ಕ ಥೈ. ಗಾನದೆತ್ತಿಲಿ ಗೆದ್ದೆ ಥೈ ಥಕ್ಕ ಥೈ. ಡೋಲ್‌ಗಗ್ಗರಲಿ ಗೆದ್ದೆ ಥೈ ಥಕ್ಕ ಥೈಂತ ಹೇಳಿ ಕುಣ್ದತ್. ಆತ್.

## ೧.೯ ನಂಬಲರ್ಹ ಸ್ನೇಹಿತರು
[(ಗೌಕಜಕ – ೮೦) (ವರ್ಗ – ೮೯೩)]

ಒಂದ್ ರಾಜ್ಯಲಿ ಒಂದ್ ಮನೆಲಿ ಒಂದ್ ಅಯ್ಯೆ ಮಂಜ ಇಬ್ಬರೇ ಗಡ. ಈ ಮಂಜಂಗೆ ಬಾರೀ ಸ್ನೇಹಿತರೇ. ಎಲ್ಲಿ ಪೋದರ್ ಸ್ನೇಹಿತರೇ. ಮನೆಗೆ ಹೋಕನ ಮನೆ ತುಂಬ ಜನ. ಈ ಅವ್ವ ಗಂಜಿ ಮಾಡಿ ಎಷ್ಟ್ ಕೊಟ್ಟರೂ ಅವ್‌ಕೆ ಸಾಕಾಕಿಲ್ಲೆ. ಹಾಂಗೆ ಕೊಟ್ಟ್ ಕೊಟ್ಟ್ ಕಡೆಗೆ ಆಕನ ಅಯ್ಯೆಗೆ ಬೊಚ್ಚಿ ಹೋತ್ ಗಡ. ಹೌದ ಮಂಜ ನೀ ಹೀಂಗೆ ಸ್ನೇಹಿತರ ಜೋಸ್ತಿಮಾಡಿ ತಂದರೆ ನಾವ್ ಏನ್ ಆಕ್ಕ್. ಅಯ್ಯೋ ಅವ್ವ ನಾವ್ಗೆ ಎಷ್ಟ್ ಅವರಿಂದ ಉಪಕಾರ ಉಟ್ಟ್. ಅವ್ ಏನೂ ಸಹಾಯ ಕೊಟ್ಟವೆಂತ. ಏನ್ ಸಹಾಯ ಕೊಟ್ಟವೆ ಮಂಜ ಹೇಳ್. ನಾ ಬಿದ್ದರೆ ಎದ್ರ್‌ಸಿವೆ. ಮುಳ್ಳ್ ಕಂತಿರೆ ತೆಗ್ದವೆ. ಏನ್ ಬೇಕರೂ ಮಾಡ್ವೆ. ಎಲ್ಲಿ ಬೇಕರ್ ಹೋಗ್‌ಂತ ಹೇಳ್ದ್ರೆ ಹೋದವೆ. ಅಂದರೆ ನಿಂಗೆ ನಾ ಒಂದ್ ಕಥೆ ಹೇಳ್ನೆ.

ನಾಳೆ ನಾ ಸತ್ತನೆ. ಆಗ ನೀ ಬಂದ್‌ದ್ ಒಳ್ಳೊ ಮರ್ಲ್ಡಕ್. ಮರ್ಲ್ದ ಕಡೆಗೆ ನಿನ್ನ ಸ್ನೇಹಿತರೆಲ್ಲ ಬಾವೊ. ಬಂದಾಕನ ನೀ ಹೇಳೋಕ. ನನ್ನ ಅವ್ವ ಸತ್ತೊತ್‌ಂತ. ಆಗ ಎಲ್ಲವೂ ಬಂದವೆ. ಬಂದಾಕನ ಇನ್ನೇನ್ ಮಾಡ್ದ್. ಸೌದೆ ಮಾಡೋಣ. ಸುಡೋಣಂತ ಹೇಳ್ವೊ. ಅದ್ ಬೊತ್ತ್. ಸುಟ್ರೆ ನನ್ನ ಅವ್ವ ಕರಿ ಆದವೆ. ಬೇನೆ ಆದೆ. ಮತ್ತೆ ಏನ್ ಮಾಡೋಕ'ಂತ್ ಹೇಳ್ವೊ. ಗುಂಡಿಗೆ ಹಾಕೊಣಂತ ಹೇಳ್ವೊ. ಗುಂಡಿಗೆ ಹಾಕಿರೆ ನನ್ನ ಅವ್ವಂಗೆ ಉಬ್ಬೆಸ ಆದ್. ಬೊಚ್ಚುದ್. ಅದ್ ಬೊತ್ತ್. ಇನ್ನೇನ್ ಮಾಡೊಕ'ಂತ ಕೇಳ್ವೊ. ನನ್ನವ್ವನ ನಾ ತಲೆ ಕಡೆಂದ ತಿಂದನೆ. ನೀವ್ ಕಾಲ್ ಕಡೆಂದ ತಿನ್ನೋಕ್‌ಂತ ಹೇಳೋಕ್‌ಂತ ಹೇಳ್ತ ಗಡ. ಆತ್‌ಂತ್ ಹೇಳ್ತ್. ಅವ್ವ ಒಂದ್ ಮುಡಿ ಔಲಕ್ಕಿ ಬಾಳೆಹಣ್ಣ್ ಎಲ್ಲ ಕಳ್ಸಿ, ಅವ್ವಸಷ್ಟೇ ಉದ್ದ ತೋರ ಮಾಡಿ ಗುಡಿಂಗೆ ಹಾಕಿ ಅವ್ವ ಅಡಂಗಿತ್. ಅದರ ಮಾರನೆ ದಿನ ಇಂವ ಒಳ್ಳೊ ಗೋಳೊಂತ ಮರ್ಲ್ತ್. ಸ್ನೇಹಿತರೆಲ್ಲಾ ಏನ್ ಬಾತ್ಲೆಂತ ಹುಡ್ಕಿಕೊಂಡ್ ಬಂದೊ. ಬಂದಾಕನ ನನ್ನ ಅವ್ವ ಸತ್ತೊತ'ಂತ ಮರ್ಲ್ತ್. ಎಲ್ಲವ್ ಬಂದೊ. ಬಾಯಿಗೆ ನೀರ್ ಕೊಡೊಂಬನ. ಬಾಯಿಗೆ ನೀರ್ ಕೊಡಿಕೆ ಬೊತ್ತ್. ನನ್ನವ್ವನಂತ ಹೇಳ್ತ್. ಕುದ್ದ್ ಕಂಡ್ ಎಲ್ಲವ್ ಮರ್ಲ್ಲೊ. ಕಡೆಗೆ ಇನ್ನ್ ಏನ್ ಮಾಡ್ದ್. ಇನ್ನ್ ಸುಡೋಣ. ಸೌದೆ ಮಾಡೋಣ. ಅಯ್ಯೋ ಸುಡಿಕೆ ಬೊತ್ತ್. ಮತ್ತೇನ್ ಮಾಡ್ದ್. ಅಂದರೆ ಗುಂಡಿಗೆ ಹಾಕೊಂಬಂತ ಕೊಟ್ಟು ಪಿಕ್ಕಾಸಿಗೆ ಹೋದೊ. ಗುಂಡಿಗೆ ಹಾಕಿಕೂ ಬೊತ್ತ್. ಅವ್ವನ ಗುಂಡಿಗೆ ಹಾಕಿರೆ ಉಬ್ಬೆಸ ಆದೆ. ಇನ್ನೇನ್ ಮಾಡ್ದ್. ನನ್ನ ಸೇಹಿತರ್ ನೀವ್ ಆದರೆ ನಾ ತಲೆ ಕಡೆಂದ ತಿಂದನೆ. ನೀವ್ ಕಾಲ್ ಕಡೆಂದ ತಿನ್ನೊಕ್‌ಂತ ಹೇಳ್ತ್. ಕೆಲವ್ ಜನ ಅಂವಂಗೆ ಬೊಡಿಯಕೆ ಬಂದೊ. ಎಳ್ದ್ ಹೊರಗೆ ಹಾಕೊಣಾಂತ ಬಂದೊ. ಏನೆಲ್ಲಾ ಅವನ ಕಷ್ಟಕೆ ಬಂದೊ. ಕೆಲವು ಜನ ಅಂವ ಯಾಕೆ ಹೀಂಗೆ

ಹೇಳ್ದಿಂತ. ಒಬ್ಬ ಮಾತಾಡದೆ ಕುದ್ದತ್ ಗಡ. ನಿಂಗೆ ಏನೋ ಹುಚ್ಚ್. ನಿನ್ನ ಅವ್ವ ಸತ್ತ್ರೆ ನೀನ್ ಸಾಯಿ. ನಿನ್ನ ಅವ್ವನ ನಾವ್ ತಿಂಬಕೆ ಕುದ್ದವ್ವಂತ ಎಲ್ಲವ್ ಬಯ್ಕೊಂಡ್ ಹೊರ್ಟ್ ಹೋದೊ. ಒಬ್ಬ ಸುಮ್ಮನೆ ಕುದ್ದತ್' ಏನ್' ಮಾಡ್ದುಂತ. ಸ್ನೇಹಿತಂತ ಆಕನ ನೀ ಹೇಳ್ದಂಗೆ ಕೇಳೋಕಲ್ಲೆಂತ ಹೇಳ್ತ್. ಅಂವ ಕಾಲ್' ಕಡೆಂದ ತಿಂಬಕೆ ಸುರ್ ಮಾಡ್ತ್. ಇಂವ ತಲೆಕಡೆಂದ ತಿಂಬಕೆ ಸುರ್ ಮಾಡ್ತ್. ಇವ್ಕೆ ತಿಂದ್' ತಿಂದ್ ಬಿಡಿಯುಕನ ಏನ್ ತಿಂದವೆ ನೋಡೋಣಾಂತ ಎಲ್ಲವ್ ಬಂದೊ. ಆಗ ಅವ್ವ ಹೊರಗೆ ಬಂದ್ ಹೇಳ್ತ್ ಗಡ. ಮುಂಜ ನಿನ್ನ ಸ್ನೇಹಿತರ ಬುದ್ಧಿ ಗೊತ್ತಾತ ನಿಂಗೇಂತ. ಏನ್ ಉಪಕಾರ ಮಾಡ್ದ್ರೊ ನಿನ್ನ ಸ್ನೇಹಿತರ್'. ಸರಿ ಅವ್ವ. ಆಗ ಒಬ್ಬಂಗೆ ಒಬ್ಬನೇ ಸ್ನೇಹಿತ. ಒಬ್ಬಂಗೆ ಒಂದೇ ಸ್ನೇಹಿತಾಂತ ನೆಸ್ಸಿಕ. ಎಲ್ಲಿಯಾರ್ ಹುಡ್ಕಿದ್ ಒಂದೇ ಹೆಣ್ಣ್‌ನ ತಂಬ. ಸಾವಿರಾರ್ ಹೆಣ್ಣ್‌ಗ ಇರ್‌ವೊ ಒಂದೇ ಹೆಣ್ಣ್ ನಿಂಗೆ ಇರ್‌ವಂತದ್. ಹಾಂಗೇ ಸಾವಿರ ಸ್ನೇಹಿತರ್ ನಿಂಗೆ ಬೇಡ ಮುಂಜಂತ ಹೇಳ್ತ್ ಗಡ. ಹಾಂಗೊಂದ್ ಕಥೆ.

### ೧.೧೦ ಅಣ್ಣನು ಮರವಾಗಿ ಪರಿವರ್ತನೆಯಾಗುವುದು. ತಂಗಿಯನ್ನು ಶಿಕ್ಷಿಸಿದ ಅಣ್ಣನನ್ನು ಅಪ್ಪ ಕೊಂದಾಗ ಮರವಾಗಿ ಪರಿವರ್ತನೆಯಾಗುವುದು.

[(ಗೌಕಜಕ–೪೦) (ವರ್ಗ–೪೫೦B)]

ಒಂದ್' ಊರ್‌ಲಿ ಒಬ್ಬ ಗಂಡ ಹೆಣ್ಣ್ ಮತ್ತ್ ಎರಡ್' ಮಕ್ಕ ಇದ್ದೊ. ಒಂದ್' ಹೆಣ್ಣ್. ಮತ್ತೊಂದ್' ಗಂಡ್'. ಅವ್' ಹಿಂಗೇ ಇರ್ಕನ ಕೃಷಿ ಮಾಡ್ದೊ. ಹೈದ ಯಾಗೋಳ್' ಗದ್ದೆ ಹೂಡ್ದ. ಗೂಡೆ ಯಾಗೋಳ್' ಹೈದಂಗೆ ಬುತ್ತಿ ತಂದ್ ಕೊಡ್ದ. ಒಂದ್' ದಿನ ಹೈದ ಗದ್ದೆ ಹೂಡಿಕೆ ಹೋತ್. ಅಂದ್' ಗೂಡೆ ಬುತ್ತಿ ತಕಂಡ್' ಹೋಕನ ಹೊತ್ತ್ ಆತ್'. ಹೈದ ಸಿಟ್ಟ್ ಬಂದ್' ಗೂಡೆ ಬಾಕನ ಏನ್' ಇಷ್ಟ್‌ಹೊತ್ತ್ಂತ ಕಲ್ಲ್'ಲಿ ಗುದ್ದಿತ್'. ಮುಳ್ಳ್'ಲಿ ಪರಂಕಿತ. ಗೂಡೆ ಮರ್'ಡ್'ತಾ ಸಿದಾ ಮನೆಗೆ ಬಾತ್'. ಆಗ ಅವ್ವ ಅಪ್ಪ ಕೇಳ್ದ್ರು. ಎಂತ ಆತ್' ಮಗಳೆಂತ. ಆಗ ಗೂಡೆ ನಂಗೆ ಅಣ್ಣ ಕಲ್ಲ್'ಲಿ ಗುದ್ದಿತ್'. ಮುಳ್ಳ್'ಲಿ ಪರಂಕಿತ್'ಂತ ಹೇಳ್ತ್. ಹಿಂಬೊತ್ತ್'ಲಿ ಹೈದ ದನಂಗಳ ಕೂಡಿಕೆ ಹೊಡ'ಕಂಡ್' ಬಾತ್. ಅಪ್ಪ ಗೂಡೆನ ಹೊಡ್ದ ಸಿಟ್ಟ್'ಲಿ ಹಟ್ಟಿನ ಬಾಗಿಲ್'ಲಿ ಒಂದ್' ನಾಗರ ಹಾವ್'ನ ಇಸಿತ್. ಹೈದ ದನ ಹೊಡ'ಕಂಡ್' ಬಂದ್ ಹಟ್ಟಿಗೆ ಕೂಡ್‌ಕನ ಹಾವ್ ಅಂವನ ಕಚ್ಚಿ ಕೊಂದತ್'. ಅಂವ ಅಲ್ಲೆ ಸತ್ತತ್. ಅಂವನ ಅಲ್ಲೆ ಗುಂಡಿಗೆ ಹಾಕಿದೊ. ಅಲ್ಲೆ ಒಂದ್ ಒಳ್ಳ ಕೆಂಡ ಸಂಪಿಗೆ ಮರ ಆತ್'. ಹೂವು ಆತ್'. ಒಂದ್ ದಿನ ಗೂಡೆನ ಮಾತಾಡಿಕೆ ನಂಟ್ರ ಬಂದೊ. ಆಗ ಗೂಡೆ ಲಾಯಿಕ್' ಸೀರೆ ಉಟ್ಟ್ ಜಡೆ ಹಾಕಿ ಹೂವ್'ಗಾಗಿ ಸಂಪಿಗೆ ಮರದ ಪಕ್ಕಲೆ ಬಂದ್ ಅಣ್ಣಾಣ್ಣಾ ನಂಗೊಂದ್ ಸಂಪಿಗೆ ಕೊಡ್'ಂತ ಕೇಳ್ತ್. ಆಗ ಸಂಪಿಗೆ ಮರ ಹಿಂಗೆ ಹೇಳ್ತ್. ಕಲ್ಲ್'ಲಿ ಗುದ್ದಿ ಮುಳ್ಳ್'ಲಿ ಪರಂಕಿ ಈಗ ಸಂಪಿಗೆ ಬೇಕಾ

ಮುಂಡೆ. ಎಂದ್ ಕೆಳಗೆ ಹೋಗಿ ರಾಜಿ ಆತ್. ಗೂಡೆ ಸಿದಾ ಮನೆಗೆ ಹೋತ್. ಮತ್ತೆ ಮರ ಬೆಳ್ದ್ ನಿಂತತ್. ಮತ್ತೆ ಹೋಗಿ ಗಳೆ ತಕಂಡ್ ಕೊಯ್ಯಕೆ ಹೋತ್. ಮರ ಎತ್ತರಕ್ಕೆ ಹೋಗಿ ಕಲ್ಲ್‌ಲಿ ಗುದ್ದಿ ಮುಳ್ಳ್‌ಲಿ ಪರಂಕಿ ಈಗ ಸಂಪಿಗೆ ಬೇಕಾ ಮುಂಡೆ ಎಂದ್ ಹಂಗಿಸಿತ್. ಆಕೇರಿಗೆ ಅಪ್ಪ ಬಂದ್ ಮಗ ಮಗ ನಂಗೊಂದ್ ಸಂಪಿಗೆ ಕೊಡ್ ಎಂದತ್. ಆಗ ಕಲ್ಲ್‌ಲಿ ಗುದ್ದಿತ್, ಮುಳ್ಳ್‌ಲಿ ಪರಂಕಿತ್. ಮಗಳ್ ಚಾಡಿ ಹೇಳ್‌ಕನಾ ಹಾವ್ ತಂದ್ ಪಟ್ಟಿಲಿ ಇಸಿದ್ ನನ್ನ ಕೊಂದ ಬೇವರ್ಸಿ. ಈಗ ಸಂಪಿಗೆ ಬೇಕಾ ಎಂದತ್. ಆಗ ಸಿಟ್ಟ್‌ಲಿ ಆ ಸಂಪಿಗೆ ಮರಸ ಕಡ್ದ್ ಹಾಕಿತ್. ಆ ಕಡ್ಪ ಗುತ್ತಿ ಕರ್ದ್ ಕರ್ದ್ ಹೇಳ್ದೆ.

—ಅದರ ನಾವ್ ನೋಡಿಕಂಡ್ ಬರಕಡ

**೧.೧೧ ಪರಸ್ಪರ ಕಚ್ಚುವ ಪ್ರಾಣಿಗಳು ಅಡಗಿಸಿಟ್ಟ ವಸ್ತು ಹುಡುಕಲು ಮನುಷ್ಯನಿಗೆ ಸಹಾಯಕವಾಗುವುದು,**

[(ಗೌಕಜಕ–೯೮) (ವರ್ಗ–೨೦೩೪D)]

ಒಂದ್ ಊರಲಿ ಒಬ್ಬ ದಾರಿಲಿ ಹೋಕನ ೧೦ ಪೈಸೆ ಸಿಕ್ಕಿತ್. ಅದರ ಅಂಗಡಿಗೆ ತಕಂಡ್ ಹೋಗಿ ಎರಡ್ ಬಾಳೆಹಣ್ಣ್ ತಾತ್. ಒಂದರ ತಿಂದತ್. ಮತ್ತೊಂದರ ಗೊಬ್ಬರ ಗುಡ್ಡೆದೊಳಗೆ ಹುಗ್ಗ್‌ಸಿ ಇಸಿತ್. ಹಂಞ ದಿನ ಕಳ್ದ್ ಹೋತ್. ಆ ಹಣ್ಣ್‌ನ ಅಂವಂಗೆ ತೆಗೆಕೆ ಆತ್ಲೆ. ಆಗ ಅಂವ ಸಿದಾ ಆಚಾರಿನ ಹಕ್ಕಲೆ ಬಂದ್ ಹೇಳ್ತ್. ಆಚಾರಿ ಆಚಾರಿ ನಿನ್ನ ಉಳಿಬಾಜ ಕೊಡ್‌ವನಾಂತ. ಆಗ ಆಚಾರಿ ನನ್ನ ಉಳಿಬಾಜ ಕೊಟ್ರೆ ತುಂಡ್ ಆದ್. ನಾ ಕೊಡಿಕಿಲ್ಲೇಂತ ಹೇಳ್ತ್. ಅಲ್ಲಿಂದ ಸಿದಾ ದಾರಿಲಿ ಆಲೋಚಿಸ್‌ತ್ತಾ ಬಾಕನ ಜೇನ್‌ಗೂಡ್ ಸಿಕ್ಕಿತ್. ಆ ಜೇನ್ ಗೂಡ್‌ಗೆ ಒಂದ್ ಕಲ್ಲ್ ಹೊಡ್ತ್. ಆಗ ಜೇನ್ ಬಂದ್ ನಾಯಿಗೆ ಕುಟ್ಟಿತ್. ನಾಯಿ ಹೋಗಿ ದನಕೆ ಕಚ್ಚಿತ್. ದನ ಹೋಗಿ ಒಬ್ಬ ಮೊನ್ನಂಗೆ ಕುತ್ತಿತ್. ಮೊನ್ನ ಹೋಗಿ ಆ ಬಾಳೆ ಹಣ್ಣ್‌ನ ತೆಗ್ತ್.

—ಅದರ ತಿಂಬಕೆ ಈಗ ಪ್ಲೆಯ್.

**೧.೧೨ ಹಕ್ಕಿಯ ಮೊಟ್ಟೆಗಳು : ಮೊಟ್ಟೆ ತಿಂದವರ ಹೊಟ್ಟೆಯಿಂದ ಅದನ್ನು ಮತ್ತೆ ಪಡೆಯುವುದು.**

[(ಗೌಕಜಕ–೯) (ವರ್ಗ–೧೨೩)]

ಒಂದ್ ಚೋರೆಕ್ಕಿ ಗಡ. ಅದ್ ಕೇರಿ ಮೂರ್ ಕೊಕ್ಕ್ ಹಾಕಿತ್‌ಗಡ. ಕೊಕ್ಕ್ ಮೇಲೆ ಮೂರ್ ಮೊಟ್ಟೆ ಇಸಿತ್ ಗಡ. ಮೊಟ್ಟೆಮೇಲೆ ಅದ್ ಕುದ್ದತ್‌ಗಡ. ಈ ಮಧ್ಯರಾತ್ರಿ ಆಕನ ಸಂತಗೆ ಹೋದ ಕಡ್ಡೆ ಬಾತ್‌ಗಡ. ಅದ್ಕೆ ಬಂದಾಕನ ಸಳಿ

ಹಿಡ್ತ್‌ಗಡ. ಚೋರೆಕ್ಕ ಚೋರೆಕ್ಕ ನಂಗೆ ಸಳಿ ಒಡ್ದದೆ. ಸಳಿ ಕಾಯುಕೆ ಜಾಗ ಕೊಡ್‌ವನಾಂತ ಕೇಳ್ತ್‌ಗಡ. ಆ್ಞ.... ಕೊಡೇಕ್‌ಂತ ಹೇಳಿ ಕಿಚ್ಚಿ ಎಲ್ಲ ಹಾಕಿ ಸಳಿ ಕಾಯುಕೆ ಜಾಗೆ ಕೊಟ್ಟತ್‌ಗಡ. ಆ ಸಳಿಕಾದ್ ಎದ್ದತ್ ನಾ ಹೋನೆ ಚೊರೆಕ್ಕಾಂತ ಹೇಳ್ತ್. ಆದ್ ಅಣ್ಣಂತ ಹೇಳ್ತ್. ಅಂವ ಹೋತ್. ಹೋಗಿ ಹಂಞ ಹೊತ್ತಾಗಿ ಆಕನ ಪೊಲಣ್ಣ ಬಾತ್‌ಗಡ. ಪೊಲಣ್ಣನೂ ಬಂದ್ ಚೊರೆಕ್ಕ ಚೊರೆಕ್ಕ ಸಳಿಯಾದೆ ಹನೀಸ್ ಜಾಗೆ ಕೊಡ್‌ವನಾಂತ ಕೇಳ್ತ್‌ಗಡ. ಹಾಂಗೆ ಕಿಚ್ಚಿ ಎಲ್ಲ ಒಟ್ಟ್‌ತ್‌ಗಡ. ಅಂವಂಗೆ ಸಳಿ ಕಾಯುಕೆ ಜಾಗ ಕೊಟ್ಟತ್‌ಗಡ. ಅಂವ ಸಳಿಕಾದ್ ನಾ ಹೋನೆ ಚೊರೆಕ್ಕಾಂತ ಹೇಳ್ತ್. ಅಂವನೂ ಹೋತ್. ಕಡೆಗೆ ಈ ಕುದ್ಕಣ್ಣ ಬಾತ್‌ಗಡ. ಕುದ್ಕಣ್ಣ ಬಂದ್‌ದ್ ಚೋರೆಕ್ಕ ಚೋರೆಕ್ಕ ನಂಗೆ ಸಳಿ ಕಾಯುಕೆ ಜಾಗ ಕೊಡ್‌ವನಾಂತ ಕೇಳ್ತ್‌ಗಡ. ಕೊಡಕ್‌ಂತ ಹೇಳ್ತ್‌ಗಡ. ಹಾಂಗೆ ಕಿಚ್ಚಿ ಎಲ್ಲ ಒಳ್ಳೊ ಒಟ್ಟ್‌ತ್‌ಗಡ ಸಳಿಕಾಯುಕೆ ಜಾಗೆ ಕೊಟ್ಟತ್‌ಗಡ. ಇಂವ ಸಳಿಕಾದ್‌ಕೊಂಡ್ ಇರ್‌ಕನ್ ಇದ್ ಹೋಗಿ ಭತ್ತ ಮಿಜಿಯುಕೆ ಹೋತ್‌ಗಡ.

ಭತ್ತ ಮಿಜಿಯುಕೆ ಹೋಗಿ ಭತ್ತ ಮಿಜಿಯುಕೆ ಹಾಕಿತ್. ಭತ್ತ ಊಂಹ್ಞ... ಊಂಹ್ಞಂ...ತ ಹೇಳ್ಕನ ಕಟ್‌ಕುಟ್‌ಂತ ಕೇಳ್ತ್‌ಗಡ. ಏನ್ ಕುದ್ಕಣ್ಣ ಬಾರೀ ಜಗಿಯೊದೂಂತ ಹೇಳ್ತ್‌ಗಡ. ಸಂತೆಗೆ ಹೋಗಿ ಬರುವಾಗ ಮೂರು ಜಿಬ್ಬುಡಿಕೆ ಹೂಳ್ (ಹೋಳ್) ತಂದಿದ್ದೇನೆ ಅವರಲ್ಲಿ ಒಂದು ತಿಂದಾಯ್ತು. ಇನ್ನು ಎರಡು ಉಂಟು" ಅಂತ ಹೇಳ್ತ್‌ಗಡ. ಹಾಂಗೆ ವಾಪಾಸ್ ಇದ್ ಹಿಂದಕೆ ಭತ್ತ ಮಿದ್ದ್‌ತ್‌ಗಡ. ಊಂಹ್ಞ.. ಊಂಹ್ಞಂ....ತ ಹಾಂಗೆ ಹಿಂದಕ್ಕೊಮ್ಮೆ ಕಟ್‌ಕುಟ್‌ಂತ ಹೇಳ್ತ್‌ಗಡ, ಏನ್ ಕುದ್ಕಣ್ಣ ಬಾರೀ ಜಗೀತೀಂತ ಹೇಳ್ತ್‌ಗಡ. "ಸಂತೆಹೋಗಿ ಬರುವಾಗ ಮೂರು ಜಿಬ್ಬುಡಿಕೆ ತಂದಿದ್ದೇನೆ. ಎರಡು ತಿಂದಾಯ್ತು. ಇನ್ನು ಒಂದುಂಟುಂತ" ಹೇಳ್ತ್‌ಗಡ. ಹಿಂದಕ್ಕೆ ಇದ್ ಭತ್ತ ಮಿದ್ದತ್. ಹಿಂದಕ್ಕೆ ಕಟ್‌ಕುಟ್‌ಂತ ಹೇಳ್ತ್‌ಗಡ. ಹಿಂದಕ್ಕೆ ಕೇಳ್ತ್. "ಏನು ಕುದ್ಕಣ್ಣ ಬಾರೀ ಜಗಿಯುತ್ತೀಂತ, ಸಂತೆಗೆ ಹೋಗಿ ಬರುವಾಗ ಮೂರು ಜಿಬ್ಬುಡಿಕೆ ತಂದಿದ್ದೇನೆ. ಮೂರೂ ತಿಂದಾಯ್ತುಂತ". ಹೇಳ್ತ್‌ಗಡ. ಅಷ್ಟಾಕನ ನಾ ಇನ್ನ್ ಹೋನೆ ಚೋರೆಕ್ಕ ಬಳಾಂತ ಹೇಳ್ತ್‌ಗಡ. ಆಕ್‌ಂತ ಹೇಳ್ತ್‌ಗಡ. ಇದ್ ಹೋತ್ ಕುದ್ಕ. ಇದ್ ಇದರ ಕೆಲ್ಸ ಎಲ್ಲ ಮಾಡಿ ಇಸಿತ್‌ಗಡ. ಬಂದ್‌ದ್ ಇದರ ಮಕ್ಕಳ ನೋಡಿಕೆ ಆಕನ ಮಕ್ಕ ಇಲ್ಲೆ ಅಲ್ಲ. ಇನ್ನೇನ್ ಮಾಡ್ದುಂತ ಹೇಳ್ತ್‌ಗಡ. ಮುಂದೆ ಕಡ್ಡೆಣ್ಣ ಬಂದದಲ್ಲ. ಅಲ್ಲಿಗೆ ಹೋತ್‌ಗಡ ಇದ್. ಅಲ್ಲಿಗೆ ಹೋಗಿ ಆಕನ–

ಹೊಸ್ತೂಂತ ಬಾರ
ಹಬ್ಬಾಂತ ಬಾರ
ಇಂದೇಕೆ ಬಂದೆ ನೀರ್ ಚಾಪೆ ತನ್ನಿರೋ
ಮಕ್ಕಳಿರಾಂತ ಹೇಳ್ತ್‌ಗಡ.

ನಿನ್ನ ನೀರ್ ಚಾಪೆ ತೆಗ್ದ್ ಬೆಂಕಿಗೆ ಇಟ್ಟ್ ನನ್ನ ಮಕ್ಕಳ ತಿಂದ್‌ದರ ಇಚಾರ್ಸಿ ಕೊಡ್‌ಂತ ಹೇಳ್ತ್‌ಗಡ.

ಬಾಳೆಪಾಪಾಕ್
ನೂಲ್ ಕೈತಾಂಗ್ ಕೂಡ್
ಆಳೆತ್ತರ ಕೆಂಡಕೂಡ್
ಅಲ್ಲಿಗೊಂದ್ ಸತ್ಯ ಇಡ್‌ಂತ ಹೇಳ್ತ್‌ಗಡ.

ಅಲ್ಲಿಂದ ಮತ್ತೆ ಮೊಲಣ್ಣನ ಮನೆಗೆ ಹೋತ್‌ಗಡ. ಅಲ್ಲಿ ಹೋಕನನೂ,

ಹಬ್ಬಾಂತ ಬಾರ
ಹೊಸ್ತೂಂತ ಬಾರ
ನೀರ್‌ಚಾಪೆ ತನ್ನಿರೋ ಮಕ್ಕಳಿರಾಂತ ಹೇಳ್ತ್‌ಗಡ.

ನಿನ್ನ ನೀರ್ ಚಾಪೆ ತೆಗ್ದ್ ಬೆಂಕಿಗೆ ಇಡ್. ನನ್ನ ಮಕ್ಕಳ ತಿಂದ್‌ದರ ಇಚಾರ್ಸಿ ಕೊಡ್‌ಂತ ಹೇಳ್ತ್‌ಗಡ.

ಬಾಳೆ ಪಾಪಾಕ್
ನೂಲ ಕೈತಾಂಗಾಕ್
ಆಳೆತ್ತರ ಕೆಂಡಕೂಡ್ ಅಲ್ಲಿ ಒಂದ್
ಸತ್ಯ ಹೇಳ್ನೆಂತ ಹೇಳ್ತ್‌ಗಡ.

ಅಲ್ಲಿಂದ ಸೀದ ಕುದ್ಕಣ್ಣನ ಮನೆಗೆ ಹೋತ್‌ಗಡ. ಅಲ್ಲಿ ಹೋಕನ–

ಹಬ್ಬಾಂತ ಬಾರ
ಹೊಸ್ತೂಂತ ಬಾರ
ಇಂದೇಕೆ ಬಂದ ಚೋರೆಕ್ಕಾ
ನೀರ್ ಚಾಪೆ ತನ್ನಿರೋ ಮಕ್ಕಳಿರಾಂತ ಹೇಳ್ತ್‌ಗಡ.

ನಿನ್ನ ನೀರ್ ಚಾಪೆ ತೆಗ್ದ್ ಬೆಂಕಿಗೆ ಇಟ್ಟ್ ನನ್ನ ಮಕ್ಕಳ ತಿಂದ್‌ದರ ವಿಚಾರಿಸಿ ಕೊಡ್‌ಂತ ಹೇಳ್ತ್‌ಗಡ.

ಬಾಳೆ ಪಾಪಾಕ್
ನೂಲ ಕೈತಾಂಗ್‌ಕಟ್ಟ್
ಆಳೆತ್ತರ ಕೆಂಡ ಕೂಡ್
ಅಲ್ಲಿ ಒಂದ್ ಸತ್ಯ ಹೇಳ್ನೇಂತ ಹೇಳ್ತ್‌ಗಡ.

ಹಾಂಗೆ ಮತ್ತೆ ಇದ್ ಬಾತ್‌ಗಡ ಸೀದ. ಬಂದ್ ಆಳೆತ್ತರ ಕೆಂಡ ಕೂಡ್ತ್‌ಗಡ. ಬಾಳೆ ಪಾಪ್ ಹಾಕಿತ್‌ಗಡ, ನೂಲ ಕೈತಾಂಗ್ ಕಟ್ಟಿತ್ ಗಡ. ಮತ್ತೆ ಇವರೆಲ್ಲರ ಬಾಕೆ ಮಾಡ್ತ್‌ಗಡ. ಇವ್ ಒಬ್ಬೊಬ್ಬನೇ ಬಂದ್

ಬಾಳೆ ಪಾಪ'
ನೂಲ ಕೈತಂಗ'
ಆಳೆತ್ತರ ಕೆಂಡಂತ ತೆಗ್'ದ್ ಹಾರ್ದೊಗಡ.

ಹಾರಿದ' ಕಡ್ಡೆಣ್ಣ. ಮೇಲಣ್ಣ ಅವೆಲ್ಲ ಹೋದೊ. ಆಕೇರಿಗೆ ಕುದ್ದಣ್ಣ ಬಾತ'ಗಡ. ಬಂದ'

ಬಾಲೆ ಪಾಪೊ
ನೂಲ ಕೈತಂಗೋ
ಆಳೆತ್ತರ ಕೆಂಡೊಂತ ತೆಗ್'ದ್ ಹಾರ್'ತ್ ಗಡ.

ಹಾರಿ ಕೆಂಡದ ನಡೂವಿಗೆ ಬೀತ'. ಇದ' ಸತ್ತುತ್ ಕುದ್ಕ. ಅದರ ಮತ್ತೆ ತೆಗ್'ದ್ದದ' ಹೊಂಡಲಿ ಹಾಕಿತ'ಗಡ.

—ಅದರ ನೋಡಿಕೆ ಹೋಕಡ.



## ಅನುಬಂಧ : ೨

**ಪದಸೂಚಿ :**

ಅಂಡ್=ಅಂಟಿಕೊಂಡು, ತಾಗಿಕೊಂಡು
ಅಂಬೆಲಿ=ಅಂಬಲಿ, ರಾಗಿಗಂಜಿ
ಅಕ್ಕ್=ಆದೀತು
ಅಕೇರಿ=ಕೊನೆ
ಅಗ್ಗ್‌ಟೆ=ಅಗ್ಗಿಷ್ಟಿಕೆ, ಚಳಿಗಾಲದಲ್ಲಿ ಬೆಂಕಿಯ ರಾಶಿ ಮಾಡುವುದು
ಅಜಕಳ=ಹಸನು ಮಾಡುವುದು, ಪ್ರಾಣಿಯನ್ನು ಮಾಂಸ ಮಾಡಿ
ವಿಂಗಡಿಸುವುದು
ಅದ್=ಅದು, ಅವನು, ಅವಳು
ಅಪ್ರೂಪ=ಅಪರೂಪ
ಅಯ್ಯೆ=ಅಮ್ಮ
ಅರ್ಕಿಲ್‌=ಬೇಸಗೆಕಾಲ
ಅರ್ಸ್=ಅರಸು
ಅವ್ವ=ತಾಯಿ, ಅಜ್ಜಿ

ಆಕಿಲ್ಲೆ=ಆಗುವುದಿಲ್ಲ, ಆಗದು
ಆಟಿಕುದ್ದ್‌ರುದ್‌=ಮದುವೆಯ ವರುಷ ಆಟಿ ತಿಂಗಳಲ್ಲಿ ತವರುಮನೆಗೆ ಮಗಳು
ಬಂದು ಇರುವುದು
ಆತ್‌=ಆಯಿತು

ಇಕ್ಕ್=ಬಡಿಸು
ಇಟ್ಟ್‌ತ್‌=ಬಿಸಾಡಿದನು, ಬಿಸಾಡಿದಳು, ಬಿಸಾಡಿತು
ಇತ್ತ್=ಇತ್ತು
ಇತ್ತ್‌ಲೆ=ಇರಲಿಲ್ಲ
ಇದ್ದೊ=ಇದ್ದರು, ಇದ್ದವು, ಇದ್ದಿತು
ಇಲ್ಲೆ=ಇಲ್ಲ
ಇರ್ಲ್ = ರಾತ್ರಿ
ಇವ್‌ಕ್ಕೆ=ಇವರಿಗೆ, ಇವುಗಳಿಗೆ

ಇಸ್ = ಇಡು
ಇಸಿತ್ = ಇಟ್ಟನು, ಇಟ್ಟಳು, ಇಟ್ಟಿತು
ಇಸಿದೊ=ಇಟ್ಟರು, ಇಟ್ಟವು

ಉಂಬಕ್ಕೆ=ಉಣ್ಣುವುದಕ್ಕೆ. ಊಟ ಮಾಡುವುದಕ್ಕೆ
ಉಡ್‌ಗ್‌ರೆ=ಉಡುಗೋರೆ, ಬಹುಮಾನ
ಉಡ್ಸದ್=ಉಡಿಸುವುದು
ಉಟ್ಟ್=ಉಂಟು, ಇದೆ
ಉಣ್=ಊಟಮಾಡು. ಉಣ್ಣು
ಉಬರ್=ಮಳೆಗಾಲದಲ್ಲಿ ನೀರು ಉಕ್ಕೇರಿದಾಗ ನದಿಯಿಂದ ಮೀನುಗಳು ನೀರಿನ ಇತರ ಮೂಲಗಳ ಮೂಲಕ ಮೇಲಕ್ಕೆ ಹತ್ತುವುದು
ಉರ್ಗ್=ಊದು, ಬೆಂಕಿ ಹೊತ್ತಿಸಲು ಊದು

ಎತ್ತಿತ್=ತಲುಪಿತು
ಎದ್ದ್‌ರ್ = ಎದ್ದೇಳು, ಎದ್ದುನಿಲ್ಲು
ಎಲಿ = ಇಲಿ
ಎಲೆಬೊಳ್ಳಿ=ವೀಳ್ಯದ ಎಲೆ ಬಳ್ಳಿ
ಎಸ್‌ಂಡ್ = ಏಡಿ
ಎಳ್ಳ್ = ಅಗೆಯು

ಒಗ್ಗ್ = ಗೊಬ್ಬರ
ಒಡ್ಡುಟ್ಟ್ = ಒಡೆದಿದೆ
ಒಟ್ಟ್ = ಒಟ್ಟುಮಾಡು, ಸೇರಿಸು
ಒಟ್ಟೆ = ತೂತು
ಒಲ್ಲಿ = ಹೊದಿಕೆ
ಒಳೋ = ಇದ್ದಾರೆ, ಇದ್ದಾವೆ
ಓಂತಿ = ಓತಿಕೇತ
ಓಡ್ತ್ = ಓಡಿತು

ಕಂಕಣ = ಅಂಗಾತ, ಮುಖ ಕೆಳಗಾಗಿ
ಕಂತ್ರಾಟ್=ಕಾಂಟ್ರೆಕ್ಟ್
ಕಾಂಬಾಕೆ=ಕಾಣುವುದಕ್ಕೆ
ಕಾಂಬೊದ್=ಕಾಣುವುದು

ಕಾಂಬೊದ್ದೆ=ಕಾಣುವುದಿಲ್ಲ
ಕಂಬುಳಿ=ಕಂಬಳಿ
ಕಡ್ಕಲ್ಲ್=ಕಡೆಯುವ ಕಲ್ಲು, ರುಬ್ಬೊ ಕಲ್ಲು, ಅರೆಯುವ ಕಲ್ಲು
ಕಡ್ಡೆ=ಕಡವೆ
ಕತ್ತಿ=ಕುಡುಗೋಲು
ಕಬೆ=ಕಂಬ
ಕಬುಳ್ಚಿ=ಕಬಿಲೆಹಸು
ಕರ್ಬುಡ್=ಹಾಲು ಕರೆಯುವುದು
ಕರಿ=ಕರೆಯು
ಕಂಡ್ರುಕುಟ್ಟಿ=ಬೈಗುಳ, ಹಾದರಕ್ಕೆ ಹುಟ್ಟಿದ
ಕಾಸ್=ಕಾಯಿಸು
ಕಿಂಕ್ಣಿಕೆ ಬೆರ್ಲ್=ಕಿರುಬೆರಳು
ಕಿಚ್ಚಿ=ಬೆಂಕಿ
ಕಿಳ್ಳಿ=ಹಾಳೆಯಿಂದ ಮಾಡಿದ ಪಾತ್ರೆ. ಹಾಳೆಯ ಎರಡು ತುದಿಗಳನ್ನು ಕಟ್ಟಿದಾಗ ಕಿಳ್ಳಿ ಆಗುತ್ತದೆ. ತೋಟಕ್ಕೆ ನೀರು ಹಾಯಿಸಲು ಕಿಳ್ಳಿ ಉಪಯೋಗ
ಕುಂಞಿ=ಸಣ್ಣ
ಕುಂಬ್=ತ್ರುಟಿತ, ಸವೆದ, ಕೊಳೆತ
ಕುಡ್ಪ=ಕೊಡಹು, ಗಂಜಿ ಬಸಿಯುವ ಬಿದಿರಿನ ಅಥವಾ ಬೆತ್ತದ ತಟ್ಟೆಯಾಕಾರದ ಪಾತ್ರೆ
ಕುಡೆ=ಬಿಲ, ಇಲಿಯ ವಾಸಸ್ಥಳ
ಕುಡಿಯಕೆ ಆಗ್=ಬಾಯಾರಿಕೆಯಾಗು
ಕುತ್ರಿ=ಪುಣುಗುಬೆಕ್ಕು
ಕುದ್ಕ=ನರಿ
ಕುದ್ದ್ರ್=ಕುಳಿತುಕೋ
ಕುದ್ದತ್=ಕುಳಿತನು, ಕುಳಿತಳು, ಕುಳಿತಿತು
ಕುರೆ=ಮಂಗ
ಕುರ್ಸ್=ಕುರ್ಚಿ
ಕೆಪ್ಪಟೆ=ಕೆನ್ನೆ
ಕೆಬಿ=ಕಿವಿ
ಕೇಡ್=ಕೆಡುಕು

ಕೊಂಬಚೋಳ್‌=ಚೇಳು
ಕೊಟ್ಟನೆ=ಕೊಡುತ್ತೇನೆ
ಕೊಟ್ಟಿಯಾ=ಕೊಡುತ್ತಿಯಾ
ಕೊಟ್ಟು=ಹಾರೆ, ಗುದ್ದಲಿ
ಕೊಣೆ=ಕುಣಿ, ಕುಣಿಯು
ಕೊಡಿ=ತುದಿ
ಕೊತ್ತಿ=ಬೆಕ್ಕು
ಕೊಟಗೆ=ಕೊಟ್ಟಿಗೆ
ಕೋಸಿಕನ್ತ್‌=ಸಿಕ್ಕಿಕೊಂಡಿತು

ಗಡ=ಅಂತೆ
ಗದ್ದೆಪುಣಿ=ಗದ್ದೆಯ ಹುಣಿ
ಗುಂಡಿ=ಹೊಂಡ, ಆಳ
ಗುಡಿಂಗೆ= ಮುಸುಕು
ಗುಡ್ಡೆ=ರಾಶಿ, ದಿಬ್ಬ
ಗೂಡೆ=ಹುಡುಗಿ
ಗೋರ್‌=ಅನುಕರಣೆ ಶಬ್ದ (ಎತ್ತಿ ಕುಡಿಯುವುದು) ಬಾಚಿಕೊಳ್ಳುವುದು,
ಒಟ್ಟು ಸೇರಿಸುವುದು
ಗೈಪು=ಮಾಂಸ ಅಥವಾ ಸಸ್ಯಾಹಾರಿ ಸಾರು, ಪದಾರ್ಥ, ಸಾಂಬಾರು
ಗ್ಯಾನ=ಜ್ಞಾನ, ನೆನಪು

ಚವ್‌ಳಿ= ಕೆಂಜಿಗ
ಚಿಟ್ಟೆಕ್ಕಿ= ಚಿಟ್ಟೆಯ ತರಹದ ಹಕ್ಕಿ
ಚಿರ್‌ಂಬ್‌ = ಹಿಸುಕು
ಚೆಂಡಿ= ಒದ್ದೆ, ಹಸಿ
ಚುರ್‌ತ್= ಪೋಣಿಸಿದನು, ಪೋಣಿಸಿದಳು
ಚೊಂಬು = ತಂಬಿಗೆ
ಚೋಲಿ= ತೊಗಲು
ಚೋಳ್‌ = ಕೆಸರು

ಜಾಲ್‌ = ಅಂಗಳ
ಜುವ್ವ= ಜೀವ
ಜೋಬು = ಜೇಬು

ತಂಬ = ತೆಗೆದುಕೊಂಡು ಬಾ
ತಡ್ಮೆ = ಬೇಲಿಯ ನಡುವೆ ದಾಟುವುದಕ್ಕೆ ಇರುವ ತಡೆ
ತಣ್ಣೆನ = ತಂಗಳು
ತಬ್ಬ್‌ರಿ = ತಬ್ಬಲಿ
ತಾತ' = ತಂದನು, ತಂದಳು, ತಂದಿತು
ತಿಂಗ = ತಿಂಗಳು
ತಿಂಬಂಕೆ = ತಿನ್ನುವುದಕ್ಕೆ
ತಿನ'ಸ' = ತಿನ್ನಿಸು
ತೀನ್'ತ = ತಿಂದನು, ತಿಂದಳು, ತಿಂದಿತು
ತೀರ್'ತ = ಮುಗಿಯಿತು, ಸತ್ತನು
ತೂರ' = ಮಲ ವಿಸರ್ಜನೆ ಮಾಡು
ತೆನಸ' = ತಿನಿಸು, ಆಹಾರ
ತೆಳಿ = ಗಂಜಿ ತೆಳಿ
ತೊಪ್ಪಿ = ತಪ್ಪಿ
ತೋರ್'ಸ = ತುರಿಸು
ತೋರ = ದಪ್ಪ

ದರ್'ಗ = ತರಗೆಲೆ
ದಾರಂದ = ಮನೆಯ ಮುಖದ್ವಾರದ ಮೇಲ್ಭಾಗ
ದಿಕ್ಕ = ಹೊಲೆಯ, ಹರಿಜನ, ಮೇರ, ಮುಗೇರ
ದೊಡ್ಡಿತ = ದೊಡ್ಡ

ನಡ'ವಣ = ಮಧ್ಯದವ, ನಡುವಿನವ
ನಿಲ್'ಗ = ಮಲಗು, ನಿದ್ದೆಮಾಡು
ನೂಕ' = ದೂಡು
ನೆಳ = ನೊಣ

ಪಣೆ = ತಾಳೆಮರದ ಒಂದು ಜಾತಿ
ಪರಂಕ್ = ಪರಚು
ಪಳ್ಳ = ನೀರಿನ ಹೊಂಡ, ಮಳೆಗಾಲದಲ್ಲಿ ನೀರು ನಿಲ್ಲುವ ಸ್ಥಳ
ಪಾರ್ತನ = ಪ್ರಾರ್ಥನ
ಪಾರೆ = ಬಂಡೆಕಲ್ಲು, ಬಂಡೆ

ಪಿಜಿನ್ = ಇರುವೆ
ಪಿಣ್‌ಚ್ = ಹಿಚುಕು, ಕಿವುಚು
ಪುಕ್ಕ್‌ಳಿ = ಕರಂಡೆ, ತಿಕ
ಪುಳ್ಳಿ = ಮೊಮ್ಮಗ
ಪೂರಾ = ಎಲ್ಲಾ
ಪೆಟ್ಟ್ = ಏಟು
ಪೊಡಿ = ಹುಡಿ
ಪೊರ್ಲ್ = ಚಂದ, ಚೆಲುವಾದ
ಪೊಲ್ಲಿ = ಹಲ್ಲಿ
ಪೋಯಿ = ಹೋಗೋಣ

ಬನ್ನೆ = ಬರುತ್ತೇನೆ
ಬಗಾಲ್ = ಇಬ್ಭಾಗವಾಗು
ಬದಿ (ಬೊದಿ) = ವರದಕ್ಷಿಣೆ
ಬರೆಂಗೋಲ್ = ಕೆಂಪಾಗಿ ಕಾದ ಕಬ್ಬಿಣದ ಸಲಾಕೆ
ಬರೋಕಡ = ಬರಬೇಕಂತೆ
ಬರ‘ಂಬಿ = ಕೈಗಳಲ್ಲಿ ಗೋರುವುದು
ಬಲ್ಲೆ = ದಟ್ಟವಾಗಿ ಹೆಣೆದಂತಿರುವ ಕಾಡು, ದೊಡ್ಡ ಪೊದರು
ಬಳ್ಸ್ = ಬಡಿಸು
ಬಾಂಜಾರ‘ = ಗುಹೆ
ಬಾಂವ = ಬರುವವ
ಬಾಕೆ = ಬರಲಿಕ್ಕೆ
ಬಾತ‘ಲೆ = ಬರಲಿಲ್ಲ
ಬಾತ‘ = ಬಂದನು, ಬಂದಳು, ಬಂದಿತು
ಬಾತಿದ್ದೊ = ಬರುತ್ತಿದ್ದರು
ಬಾದ್ಲೆ = ಬರುವುದಿಲ್ಲ, (ಬಾದು+ಇಲ್ಲೆ)
ಬಾನೆ = ಬಾರೆ (ಹುಡುಗಿಯನ್ನು ಕರೆಯುವ ಧಾಟಿ)
ಬಾಮಿ = ಬಾವಿ
ಭತ್ತಮಿಜ‘ = ಭತ್ತಕುಟ್ಟು
ಬಿತ್ತ್ = ಬೀಜ
ಬಿದ್ದುಟ್ಟ್ = ಬಿದ್ದಿದೆ, ಬಿದ್ದಿದ್ದಾಳೆ
ಬೀತ‘ = ಬೀಳು

ಬುಟ್ಟತ್ = ಬಿಟ್ಟನು, ಬಿಟ್ಟಳು, ಬಿಟ್ಟಿತು, ಬಿಟ್ಟಿದೆ

ಬುಟ್ಟೊಳೊ = ಬಿಟ್ಟಿದ್ದಾರೆ, ಬಿಟ್ಟಿದ್ದಾವೆ

ಬುಳ್ಗ್ = ಬಿಡಿಸು, ಹರಡು

ಬೆಡಿ = ಕೋವಿ, ಗನ್

ಬೆದ್ರ್ = ಬಿದಿರು

ಬೆರ್ಸ್ = ಓಡಿಸು

ಬೆಳ್ಳಿಹೂಂಜ = ಬಿಳಿಹುಂಜ

ಬೇಡ್ = ಬೇಡು

ಬೇನೆ = ನೋವು

ಬೊಚ್ಚ್ = ಸುಸ್ತಾಗು

ಬೊಚ್ಚಿಕಂಡ್ = ನಿತ್ರಾಣವಾಗುತ್ತಾ

ಬೊಟ್ಟ್ = ಹಣೆಬೊಟ್ಟ್

ಬೊಡಿ = ಬಡಿ, ಹೊಡೆ

ಬೊಷ್ಮ = ಬೂದಿ (ಮಂತ್ರಮಾಡಿದ ಬೂದಿ)

ಬೊತ್ತ್ = ಕೂಡದು

ಬೊದ್ಕ್=ಬದುಕು

ಬೊನ್ನಿ=ಬನ್ನಿ

ಬೊಯಪ್=ಬೆಳಕು, (ಮುಗಿಲು ಕವಿದಿರದ ಹಗಲು)

ಬೊಸ್‌ರ್=ಬಸುರಿ

ಬೊಳ್ಕಿರಿ=ಮಳೆಗಾಲದಲ್ಲಿ ಮಳೆ ಇಲ್ಲದ ದಿನಕ್ಕೆ ಹೇಳುತ್ತಾರೆ, ಬಿಸಿಲು, ವಿಶೇಷವಾಗಿ ಮಳೆಗಾಲದಲ್ಲಿ ಮೋಡದ ಮರೆಯಿಂದ ಬರುವ ಬಿಸಿಲು

ಬೊಳ್ಳಿ=ಹಗ್ಗ

ಬೊಳ್ಪ್=ಬೆಳಕು

ಬೊಳ್ಪಿಗೆ=ಬೆಳಿಗ್ಗೆ

ಮಂಜ= ಗಂಡು ಮಗು

ಮಾಂದ್ = ಹದಮಾಡು

ಮೊಂತ್ರಿ = ಮಂತ್ರಿ

ಮುಕ್ಕ= ಮಕ್ಕಳು

ಮುಗ= ಮಗಳು

ಮುಡೆ= ಎಂಜಲು

ಮರ್ತ್= ಮರೆತು
ಮಾಡ಼ಕೋಲ಼= ಹೊಲ ಕಾಯಲು ಇರುವ ತಾತ್ಕಾಲಿಕ ಸೂರು
ಮಾಸ= ಮಾಂಸ
ಮಾಳಿ= ಬಿಲ
ಮೀಯ಼= ಸ್ನಾನಮಾಡು
ಮೂಕ್=ಮೂಗು
ಮೇಪು=ದನಕಾಯುವುದು
ಮೊಂದ್ರಿ=ಚಾಪೆ
ಮೊಕ್ಕೊಂಡ್=ಮಗುಚಿಕೊಂಡು
ಮೊಗ್ಚ್=ಅಡಿ ಮೇಲು ಮಾಡು
ಮೊಡ್ಪಳೆ=ಮುಟ್ಟಾಳೆ
ಮೊದ್ದ಼=ಮದ್ದು, ಔಷದಿ
ಮೊದುವೆ=ಮದುವೆ
ಮೊದೂಳಿಗೆ=ಮದುಮಗಳು
ಮೊದ್‌ಮಂಜ=ಮದುಮಗ
ಮೊನ್ಸ=ಮನುಷ್ಯ
ಮೊರ್ಟ್‌ಕಂಡ್=ಅಳುತ್ತಾ
ಮೊರಿ=ಮರಿ
ಮೊಸಿ=ಮಸಿ
ಯೊಗ=ಯಾವಾಗ
ಯೊಮೆ=ಆಮೆ

ಲಾಯಿಕಾತ಼=ಒಳ್ಳೆಯದಾಯಿತು
ಲ್ಯಾಕ಼=ಚೆನ್ನಾಗಿ, ಒಳ್ಳೆಯ, ಚಂದ

ಸಮ್ರಾಜನೆ=ಸಮಾರಾಧನೆ
ಸಾಂಕ಼=ಸಾಕು
ಸೀದಾ=ನೇರ, ನೇರವಾಗಿ
ಸೆಡೆ=ಮರದ ಸೌಟು
ಸೆನಿ=ಶನಿ
ಸೆರ್ಗ್=ಸೆರಗು
ಸೆರ್ರ=ಶರೀರ

ಸೊಸ್ತ್=ಸಂಪತ್ತು, ಸೊತ್ತು
ಸೊಂತೆ=ಸೌತೆ

ಹಂಞ=ಸ್ವಲ್ಪ
ಹಂತಿ=ಪಂಕ್ತಿ
ಹೆಂಗ'ಸ'=ಹೆಂಗಸು, ಹೆಣ್ಣು
ಹಕ್ಕಲೆ=ಹತ್ತಿರ
ಹನೀಸ'=ಸ್ವಲ್ಪ
ಹರ್ದ್ ಹೋತ' = ಹರಿದು ಹೋಯಿತು
ಹಿಟ್ಟ್(ಬಂದೊ)= ಅಕ್ಕಿ,ಗೋದಿ ಮೊದಲಾದವುಗಳ ಪುಡಿ, ಅಕ್ಕಿ ಮೊದಲಾದ ಧಾನ್ಯಗಳ ಹಿಟ್ಟಿನಿಂದ ಮಾಡಿದ ದೋಸೆ, ರೊಟ್ಟಿಯಂತಹ ತಿಂಡಿ
ಹಿತ್ತ್ಲ್ = ಹಿತ್ತಿಲು
ಹಿರ್ದ್ =ಹಿಂಡಿ (ಹಾಲು ಹಿಂಡುವುದು)
ಹುಕ್ಕ್ಯತ್ = ಪ್ರವೇಶಿಸಿತು, ನುಗ್ಗಿತು
ಹುಗ' =ನುಗ್ಗು, ಹುಗು
ಹುಗ್ದ್ = ಹುಗಿದು, ಹೊಂಡದಲ್ಲಿ ಹಾಕಿ ಮುಚ್ಚು
ಹುಗ್ಗೆ =ಅನ್ನ, ಬಸಿದ ಗಂಜಿ, ಹುಂಗ್ಗಿ
ಹೂಳ' =ಹೋಳು (ಅಡಿಕೆ ಹೂಳ')
ಹೆಟ್ಟ್ =ತಾಗು, ಹಾಕು, ತುರುಕು
ಹೆರ್ಕಿ ಇಟ್ಟತ' =ಎತ್ತಿ ಬಿಸಾಡಿದನು, ಬಿಸಾಡಿತು, ಬಿಸಾಡಿದಳು
ಹೇಂಗಾರ' =ಹೇಗಾದರೂ
ಹೈದ=ಹುಡುಗ, ಯುವಕ
ಹೊಣ್ಕ್=ಹೊರಳು
ಹೋದ್ರ್ =ಹೊದ್ದು
ಹೋಂವ =ಹೋಗುವವ
ಹೋತ' =ಹೋದನು, ಹೋದಳು, ಹೋದವು, ಹೋಯಿತು
ಹೋಕನ= ಹೋಗುವಾಗ
ಹೋನೆ =ಹೋಗುತ್ತೇನೆ

o

## ಅನುಬಂಧ : ೩

**ನಿರೂಪಕರ ವಿವರ :**

೧. ಅಣ್ಣಪ್ಪಗೌಡ, ವಯಸ್ಸು ೫೫
ಅಂಬೆಕಲ್ಲು ಮನೆ, ದೇವ (ಕಂದ್ರಪಾಡಿ), ದೇವಚಳ್ಳ ಅಂಚೆ, ಸುಳ್ಯ. ದ. ಕ.

೨. ಓಡ್ಯಪ್ಪಗೌಡ, ವಯಸ್ಸು ೮೫
ಸ್ವರಂಜ ಮನೆ, ಪೆರಾಲು–ಅಂಬ್ರೋಟಿ, ಅಜ್ಜಾವರ ಅಂಚೆ, ಸುಳ್ಯ, ದ. ಕ.

೩. ಕಾವೇರಮ್ಮ ಕೆದಿಲ, ವಯಸ್ಸು ೬೨
ಕೆದಿಲ ಮನೆ, ಹರಿಹರ ಪಲ್ಲತಡ್ಕ ಅಂಚೆ, ಸುಳ್ಯ, ದ. ಕ.

೪. ಕುಸುಮಾದರ ಕುಂದಲ್ಪಾಡಿ, ವಯಸ್ಸು ೩೫
ಕುಂಪಲ್ಪಾಡಿ ಮನೆ, ಪೆರಾಜೆ ಅಂಚೆ, ಕೊಡಗು ಜಿಲ್ಲೆ, ಮಡಿಕೇರಿ.

೫. ಕುಸುಮಾವತಿ, ವಯಸ್ಸು ೪೨
W/o. ಲೋಕಯ್ಯಗೌಡ, ಕುಂಪಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು.

೬. ಕೃಷ್ಣಪ್ಪಗೌಡ, ವಯಸ್ಸು ೬೫
ಕುಂಪಲ್ಪಾಡಿ–ಬಾಳಕಜೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೭. ಜಗದೀಶ ಬಿ. ಎಲ್., ವಯಸ್ಸು ೨೫
ಬಂಗಾರಕೋಡಿ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೮. ದೇವಕಿ ನೆಡ್ಚಿಲ್. ವಯಸ್ಸು ೫೪
ನೆಡ್ಚಿಲ್ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೯. ದೇವಕಿ ಅಮ್ಚೂರು, ವಯಸ್ಸು ೫೮
ಅಮ್ಚೂರು ಮನೆ, ಪೆರಾಜೆ ಅಂಚೆ, ಕೊಡಗು, ಮಡಿಕೇರಿ ತಾಲೂಕು.

೧೦. ತಾರಾಮಣಿ, ವಯಸ್ಸು ೩೦
C/o. ದಾಮೋದರಗೌಡ, ಜತ್ತನ ಮನೆ, ಪೆರಾಜೆ ಅಂಚೆ,
ಮಡಿಕೇರಿ ತಾಲೂಕು.

೧೧. ತಾರಾಮಣಿ, ವಯಸ್ಸು ೩೧
W/o. ಬಾಬಣ್ಣಗೌಡ ಪಡ್ಪು, ಪಡ್ಪು ಮನೆ, ಜಾಲ್ಸೂರು ಅಂಚೆ, ಸುಳ್ಯ, ದ. ಕ.

೧೨. ಪುರುಷೋತ್ತಮ ಕೆ. ಎಸ್., ವಯಸ್ಸು ೨೧
S/o ಪದ್ಮಯ್ಯ, ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೧೩. ಪೂವಮ್ಮ ಆಲಂಕಳ್ಯ, ವಯಸ್ಸು ೭೭
ಆಲಂಕಳ್ಯ ಮನೆ, ಜಾಲ್ಸೂರು ಅಂಚೆ, ಸುಳ್ಯ, ದ. ಕ.

೧೪. ಬಾಬಣ್ಣ ಗೌಡ, ವಯಸ್ಸು ೩೯
ಪಡ್ಪುಮನೆ, ಆಲಂಕಳ್ಯ, ಜಾಲ್ಸೂರು ಅಂಚೆ, ಸುಳ್ಯ, ದ. ಕ.

೧೫. ಬಾಬುಗೌಡ, ವಯಸ್ಸು ೫೫
ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೧೬. ಬೊಮ್ಮಕ್ಕ ಕುಂದಲ್ಪಾಡಿ, ವಯಸ್ಸು ೫೬
W/o. ಬೆಳ್ಯಪ್ಪಗೌಡ, ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು.

೧೭. ಮೋನಕ್ಕ ದೊಡ್ಡಡ್ಕ, ವಯಸ್ಸು ೫೮
ದೊಡ್ಡಡ್ಕ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

೧೮. ಮೋಹನಗೌಡ ಮಡ್ತಿಲ, ವಯಸ್ಸು ೪೫
ಕೊಲ್ಲಮೊಗ್ರು ಅಂಚೆ, ಸುಳ್ಯ ತಾಲೂಕು, ದ. ಕ.

೧೯. ರಾಮಯ್ಯಗೌಡ ಬಳ್ಳಡ್ಕ, ವಯಸ್ಸು ೮೫
ಕಕ್ಕೆಬೆಟ್ಟು ಮನೆ, ದೊಡ್ಡತೋಟ ಅಂಚೆ, ಉಬರಡ್ಕ, ಸುಳ್ಯ, ದ. ಕ.

೨೦. ಲಕ್ಷ್ಮಿ, ವಯಸ್ಸು ೫೪
ಕುರುಂಜಿ ಮನೆ, ಸುಳ್ಯ, ದ. ಕ.

೨೧. ಲಿಂಗಪ್ಪಗೌಡ, ವಯಸ್ಸು ೫೧
ಉರುಂಡೆ ಮನೆ, ಉಬರಡ್ಕ ಅಂಚೆ, ಸುಳ್ಯ, ದ. ಕ.

೨೨. ಲೀಲಾವತಿ, ವಯಸ್ಸು ೧೪
ಪಡ್ಪು ಮನೆ, ಆಲಂಕಳ್ಯ, ಜಾಲ್ಸೂರು ಅಂಚೆ, ಸುಳ್ಯ, ದ. ಕ.

೨೩. ಲೋಕಯ್ಯಗೌಡ, ವಯಸ್ಸು ೫೧
ನೆಡ್ಚಿಲ್ ಮನೆ, ಕನ್ನಿಗುಂಡಿ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು.

೨೪. ವಿಶ್ವನಾಥ, ವಯಸ್ಸು ೨೫
ಕುಂದಲ್ಪಾಡಿ ಮನೆ, ಪೆರಾಜೆ ಅಂಚೆ, ಮಡಿಕೇರಿ ತಾಲೂಕು.

೨೫. ಶಿವಪ್ಪಗೌಡ, ವಯಸ್ಸು ೩೫
ಮಡಪ್ಪಾಡಿ ಗ್ರಾಮ, ಸುಳ್ಯ ತಾಲೂಕು, ದ. ಕ.

೨೬. ಸಣ್ಣಮನೆ ಕೃಷ್ಣಪ್ಪಗೌಡ, ವಯಸ್ಸು ೪೮
ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ.

೨೭. ಸುಬ್ಬಮ್ಮ ಪಾನತ್ತಿಲ, ವಯಸ್ಸು ೪೫
ಪಾನತ್ತಿಲ ಮನೆ. ಉಬರಡ್ಕ ಅಂಚೆ, ಸುಳ್ಯ, ದ. ಕ.

೨೮. ಹೇಮಲತ. ವಯಸ್ಸು ೪೯
W/o. ಲೋಕಯ್ಯಗೌಡ, ಕನ್ನಿಗುಂಡಿ ಮನೆ, ನೆಡ್ಚಿಲ್. ಪೆರಾಜೆ ಅಂಚೆ,
ಮಡಿಕೇರಿ.

೨೯. ಹೊನ್ನಮ್ಮ ಮೂಲೆಮನೆ. ವಯಸ್ಸು ೭೦
ಪೆರಾಜೆ ಅಂಚೆ, ಮಡಿಕೇರಿ ತಾಲೂಕು, ಕೊಡಗು.

## ಅನುಬಂಧ : ೪

**ಪರಾಮರ್ಶನ ಗಂಥ್ರಗಳು :**

**೪.೧ ಕನ್ನಡ :**


೧. ಕರೀಂಖಾನ್ ಎಸ್.ಕೆ., (ಸಂ) ೧೯೮೯. 'ಕರ್ನಾಟಕ ಜನಪದ', ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

೨. ಕೃಷ್ಣ ಕುಮಾರ ಸಿ.ಪಿ., ೧೯೮೧. 'ಜನಪದ ಸಾಹಿತ್ಯ ಪ್ರವೇಶಿಕೆ', ಮೈಸೂರು: ಭಾರತೀ ಪ್ರಕಾಶನ, ಸರಸ್ವತಿಪುರಂ.

೩. ಕೃಷ್ಣಯ್ಯ ಡಿ. ಎನ್., ೧೯೭೦. 'ಕೊಡಗಿನಲ್ಲಿ ಗೌಡ ಜನಾಂಗದವರು', [ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪ ಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.

೪. ಗಣಪತಿ ಪಿ. ಗುಡ್ಡೇರ, ೧೯೭೦. 'ಗೌಡರ ಪದ್ಧತಿಗಳು', [ಕೊಡಗು ಮತ್ತು ದಕ್ಷಿಣ ಕನ್ನಡ ಗೌಡಸಮಾಜದ ಸಂಸ್ಕೃತಿ (ಸಂ) ವೀರಪ್ಪಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡಸಮಾಜ.

೫. ಚಂದ್ರಶೇಖರ ದಾಮ್ಲೆ ಮತ್ತು ಜಯಂತಕುಮಾರ್, ೧೯೮೯-೯೦. 'ಕೊಡಗಿನಲ್ಲಿ ಗೌಡರು', [ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು (ಸಂ) ಚಂದ್ರಶೇಖರ ದಾಮ್ಲೆ] ಸುಳ್ಯ : ಸಮಾಜಶಾಸ್ತ್ರ ಸಂಘ, ನೆಹರು ಮೆಮೋರಿಯಲ್ ಕಾಲೇಜು.

೬. ಚಿದಾನಂದ ಮೂರ್ತಿ ಎಂ., ೧೯೭೦. 'ಸಂಶೋಧನಾ ತರಂಗ : ಸಂಪುಟ–೨' ಬೆಂಗಳೂರು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ.

೭. ತಪಸ್ವೀಕುಮಾರ್ ನಂ., ೧೯೮೧. 'ಜನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ' ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

೮. ದೊಡ್ಡಪ್ಪಗೌಡ ದೊಡ್ಡಮನೆ ಮಾಕೇನಹಳ್ಳಿ, ೧೯೭೦. 'ಗೌಡಸಮಾಜ–ಗೌಡ ರಾಜ್ಯ', [ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.

೯. ದೊಡ್ಡಪ್ಪಗೌಡ, ೧೯೭೮. 'ಒಕ್ಕಲಿಗರು ಮತ್ತು ಸಂಪ್ರದಾಯ', ಮೈಸೂರು: ನಭಶ್ರೀ ಪ್ರಕಾಶನ, ಸರಸ್ವತೀಪುರಂ.

೧೦. ನರಸಿಂಹಶಾಸ್ತ್ರಿ ದೇವುಡು, ೧೯೪೫. 'ಕರ್ನಾಟಕ ಸಂಸ್ಕೃತಿ', ಬೆಂಗಳೂರು : ಶಾರದಾ ಪ್ರಕಟಣಾಲಯ.

೧೧. ನಾಯಕ ಹಾ.ಮಾ., ೧೯೭೧. 'ಜನಪದ ಸ್ವರೂಪ', ಮೈಸೂರು : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಗೋಕುಲಂ. ಮೂರನೆಯ ಹಂತ.

೧೨. ಪರಮಶಿವಯ್ಯ ಜೀ. ಶಂ.. ಮಾಡ್ತ ವಿಲಿಯಂ. (ಸಂ) ೧೯೮೯. 'ಕರ್ನಾಟಕ ಜಾನಪದ', ಬೆಂಗಳೂರು: ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.

೧೩. ಪರಮಶಿವಯ್ಯ ಜೀ. ಶಂ.. ೧೯೭೯. 'ದಕ್ಷಿಣ ಕರ್ನಾಟಕ – ಜನಪದ ಕಾವ್ಯ ಪ್ರಕಾರಗಳು'. ಮೈಸೂರು : ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾನಿಲಯ.

೧೪. ಪುಟ್ಟಣ್ಣಗೌಡ ಕೊಳಂಬೆ, ೧೯೭೦. 'ಗೌಡ ಜನಾಂಗದ ಕಟ್ಟು ಕಟ್ಟಳೆಗಳು', [ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪ ಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.

೧೫. ಪುರುಷೋತ್ತಮ ಬಿಳಿಮಲೆ, ೧೯೮೫. 'ಸುಳ್ಯ ಪರಿಸರದ ಗೌಡ ಜನಾಂಗ – ಸಾಂಸ್ಕೃತಿಕ ಅಧ್ಯಯನ' (ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ಮಹಾಪ್ರಬಂಧ – ಅಪ್ರಕಟಿತ) ಮಂಗಳೂರು : ಮಂಗಳ ಗಂಗೋತ್ರಿ.

೧೬. ಪುರುಷೋತ್ತಮ ಬಿಳಿಮಲೆ. ೧೯೯೦. 'ಕರಾವಳಿ ಜನಪದ'. ಮಂಗಳೂರು : ಮಂಗಳಗಂಗೋತ್ರಿ.

೧೭. ಪೂವಯ್ಯ ಪೇರಿಯನ. ೧೯೭೦. 'ಗೌಡ ಸಂಸ್ಕೃತಿಯ ಅವಲೋಕನ'. [ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಸಂಸ್ಕೃತಿ (ಸಂ) ವೀರಪ್ಪ ಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.

೧೮. ಮೊಣ್ಣಪ್ಪ ಪೂಜಾರಿರ. ೧೯೭೦. 'ಗೌಡರ ಪೂರ್ವ ಪರಿಚಯ'. [ಕೊಡಗು ಮತ್ತು ದಕ್ಷಿಣ ಕನ್ನಡದ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪ ಗೌಡ] ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.

೧೯. ....(ಸಂ) ೧೯೮೫. 'ಗೌಡ ಸಂಸ್ಕೃತಿ', ಮಡಿಕೇರಿ : ಕೊಡಗು ವಿದ್ಯಾ ಸಂಘ.

೨೦. ರಾಮಚಂದ್ರಗೌಡ ಹಿ. ಶಿ.. ೧೯೮೦. 'ಹಾಸನ ಜಿಲ್ಲೆಯ ಜನಪದ ಕಥೆಗಳ ಸಂಗ್ರಹ', ಬೆಂಗಳೂರು : ಪ್ರಸಾರಾಂಗ. ಬೆಂಗಳೂರು ವಿಶ್ವವಿದ್ಯಾನಿಲಯ.

೨೧. ರಾಮಚಂದ್ರಗೌಡ ಹಿ. ಶಿ., ೧೯೮೨. 'ಕನ್ನಡ ಜನಪದ ಕಥಾ ವರ್ಗಗಳು', (ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ಮಹಾ ಪ್ರಬಂಧ ಅಪ್ರಕಟಿತ) ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ.

೨೨. ರಾಮಣ್ಣ ಕ್ಯಾತನಹಳ್ಳಿ, ೧೯೭೨. 'ಗೊಂದಲಿಗರ ಕಥೆಗಳು', ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ. ಮೈಸೂರು ವಿಶ್ವವಿದ್ಯಾನಿಲಯ.

೨೩. ರೇವಣ್ಣ ಮೈಲಹಳ್ಳಿ, ೧೯೮೫. 'ಅಡವಿಕುಮಾರ ಮತ್ತು ಇತರ ಜನಪದ ಕಥೆಗಳು', ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೨೪. ಲಕ್ಕಪ್ಪಗೌಡ ಹೆಚ್. ಜೆ., ೧೯೭೧. 'ಜಾನಪದ ಕಥಾವಳಿ', ಬೆಂಗಳೂರು : ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ.

೨೫. ಲಕ್ಷ್ಮೀನರಸಿಂಹ ಶಾಸ್ತ್ರಿ, ೧೯೩೬. 'ಐಗೂರ ಇತಿಹಾಸ', ಹಾಸನ.

೨೬. ಲಿಂಗಣ್ಣ ಸಿಂಪಿ, ೧೯೭೫. 'ಉತ್ತರ ಕರ್ನಾಟಕದ ಜನಪದ ಕಥೆಗಳು', ನವದೆಹಲಿ : ಸಾಹಿತ್ಯ ಅಕಾಡೆಮಿ.

೨೭. ವಿವೇಕ ರೈ ಬಿ. ಎ , ೧೯೮೫. 'ತುಳು ಜನಪದ ಸಾಹಿತ್ಯ', ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

೨೮. ವಿವೇಕ ರೈ ಬಿ. ಎ., ೧೯೮೫. 'ಅನ್ವಯಿಕ ಜಾನಪದ', ಮಂಗಳೂರು : ಮಂಗಳಗಂಗೋತ್ರಿ.

೨೯. ವಿಲ್ಯಂ ಮಾಡ್ತ, ೧೯೮೭. 'ಜಾನಪದ ಭಾಷಾ ವಿಜ್ಞಾನ', ಧಾರವಾಡ : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ.

೩೦. ವೀರಣ್ಣ ದಂಡೆ, ೧೯೮೭. 'ಕಲಬುರಗಿ ಜಿಲ್ಲೆಯ ಜನಪದ ಕಥೆಗಳ ಮಾದರಿ ಸೂಚಿ'. ಕಲಬುರಗಿ : ಮೂಡಲ ಪ್ರಕಾಶನ, ಚೌಡೇಶ್ವರ ಕಾಲನಿ.

೩೧. ವೆಂಕಟರತ್ನಂ ಎಂ. ಪಿ., ೧೯೭೪. 'ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ', ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ.

೩೨. ಶಂಕರನಾರಾಯಣ ತೀ. ನಂ., ೧೯೩೪. 'ಸಂಕೀರ್ಣ ಜನಪದ ಕಥೆಗಳು' ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾ ನಿಲಯ.

೩೩. ಶಾಂತಿ ನಾಯಕ, ೧೯೮೧. 'ಉತ್ತರ ಕನ್ನಡದ ಹವ್ಯಕರ ಜನಪದ ಕಥೆಗಳು', ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು.

೩೪. ಸತ್ಯನಾಥ್ ಟಿ. ಎಸ್., ೧೯೮೮. 'ಕನ್ನಡ ಜಾನಪದ ಕೆಲವು ಮುಖಗಳು', ಮೈಸೂರು : ಶಾರದಾ ಪ್ರಕಾಶನ.

೩೫. ಸಂಧ್ಯಾರೆಡ್ಡಿ ಕೆ.ಆರ್., ೧೯೮೨. 'ಕನ್ನಡ ಜನಪದ ಕಥೆಗಳು', ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು.

೩೬. ಹಿರಿಯಣ್ಣ ಎ., ೧೯೭೬. 'ಶಿವಮೊಗ್ಗ ಜಿಲ್ಲೆಯ ಜನಪದ ಕಥೆಗಳು', ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೩೭. ಹಿರಿಯಣ್ಣ ಅಂಬಳಿಕೆ, ೧೯೮೪. 'ಜಾನಪದ ಕೆಲವು ವಿಚಾರಗಳು', ಮೈಸೂರು : ಪ್ರಜ್ವಲ ಪ್ರಕಾಶನ.

೩೮. ಹೆಗಡೆ ಎಲ್. ಆರ್., ೧೯೭೮. 'ಕರಾವಳಿಯ ಕಥೆಗಳು', ಕುಮಟಾ : ಜ್ಞಾನ ಸಾಧನಾ ಗ್ರಂಥ ಮಾಲೆ.

೪.೨ ಇಂಗ್ಲಿಷ್ :

1. Aarne Antti and Thompson Stith, 1964 'The Types of the Folktale', Helsinki : Suomalaineu Tiedeakatemia, Academia Scientiarum Fennica.

2. Altekar A S., 1949. 'State of Government in Ancient India', Benaras.

3. Claus Peter J. and Korom Frank, 1998. 'Folkloristics and Indian Folklore', Udupi : Regional Research Centere.

4. Kittel F. R. W., 1894. 'A Kannada English Dictionary', Mangalore : Basel Mission Book and Track Depository.

5. Kushalappa Gowda K., 1978. 'Gowda Kannada', Tamilnadu : Annamalai University.

6. Narasimhiah A. N., 1961 'Gowda in Kannada', Indian Linguistics, XXII.

7. Ramesh K.V., 1970 'A History of South Kanara', Dharwar: Karnataka Uuiversity

8. Srinivas M. N , 1952. 'Religion and Society Among Coorgs of South India', Bombay: Media Promoters and Publishers.

9. Thompson Stith, 1966. 'Motif Index of Folk Literature Volume 1-6', Bloomington and London Indian University Press

ಸಂಸ್ಕೃತಿಯ ಗ್ರಹಿಕೆಗೆ ಜನಪದ ಕತೆಗಳ ಅಧ್ಯಯನ ನೀಡಬಹುದಾದ ಕೊಡುಗೆ ಅಪಾರವಾದದ್ದು. ಈಗ ಗ್ರಹಿತವಾಗಿರುವ ಸಂಸ್ಕೃತಿಯ ವಿವರಣೆಗಿಂತ ಭಿನ್ನವಾದ ಮತ್ತು ಉಪಯುಕ್ತವಾದ ಮಾಹಿತಿಗಳನ್ನು ಅವು ನೀಡಬಲ್ಲುವು. ಪ್ರಸ್ತುತ ಕೃತಿಯಲ್ಲಿ ವಿಶ್ವನಾಥ ಬದಿಕಾನ ಅವರು ಸುಳ್ಯ ಪರಿಸರದಲ್ಲಿ ಜನಪ್ರಿಯವಾಗಿರುವ 'ಅರೆಬಾಸೆ' (ಗೌಡ ಕನ್ನಡ) ಯಲ್ಲಿ ಪ್ರಚಲಿತವಿರುವ ಕತೆಗಳನ್ನು ಮೊದಲಬಾರಿಗೆ ಸಂಗ್ರಹಿಸಿ, ಅವುಗಳ ವರ್ಗ ಮತ್ತು ಆಶಯ ಸೂಚಿಯನ್ನು ಸಿದ್ಧಪಡಿಸಿಕೊಟ್ಟಿದ್ದಾರೆ.

ಈ ವರ್ಗ ಮತ್ತು ಆಶಯ ಸೂಚಿಗಳ ಮಿತಿ ಏನೇ ಇರಲಿ, ಅದು ಸುಳ್ಯ ಪರಿಸರದಲ್ಲಿರುವ ಕತೆಗಳ ಜಾಗತಿಕ ಸ್ಥಾನಮಾನವನ್ನು ನಿರ್ದೇಶಿಸುವುದಂತೂ ಖಂಡಿತ. ಇಂಥ ಅಧ್ಯಯನಗಳಿಗೆ ಕಠಿಣವಾದ ಕ್ಷೇತ್ರ ಕಾರ್ಯದ ಹಿನ್ನೆಲೆ ಇರಬೇಕು. ಹಾಗೇ ಕತೆಗಳ ಬಗ್ಗೆ ನಡೆದ ಅಧ್ಯಯನದ ವಿದ್ವತ್ತಿನ ಪರಿಚಯವೂ ಬೇಕು. ಇವೆರಡನ್ನೂ ಸರಿಯಾಗಿ ದುಡಿಸಿಕೊಂಡ ಶ್ರೇಯಸ್ಸು ವಿಶ್ವನಾಥರದ್ದು. ಕನ್ನಡ ಜನಪದ ಕತೆಗಳ ವೈಜ್ಞಾನಿಕ ಅಧ್ಯಯನಕ್ಕೆ ಇದೊಂದು ಉತ್ತಮವಾದ ಸೇರ್ಪಡೆ.

– ಪುರುಷೋತ್ತಮ ಬಿಳಿಮಲೆ.